

**Dr. H.Y. Rajagopal (1935-2018)**

Rajagopal was born in Bengaluru in 1935 to renowned educator and musicologist H. Yoganarasimham and H.Y. Saraswathi, both of whom were deeply connected to education, music, and literature. He was the son-in-law of L.Gundappa, a prominent Kannada scholar and writer.

Rajagopal obtained BE and ME degrees from the National Institute of Engineering, Mysore, and Indian Institute of Science, Banagalore, respectively, after which he taught at the Regional Engineering College, Warangal for six years. He came to the United States in 1966, where he earned his PhD in Civil Engineering from The Pennsylvania State University. He taught Fluid Mechanics at Villanova University and worked as a consulting engineer at United Engineers, Inc., (later known as Raytheon Engineers and Constructors) in Philadelphia, until his retirement.

He was one of the founding members of several cultural organizations including SRUTI, the Classical Music and Dance Society of Philadelphia founded in 1986; PRASTAPA, the Kannada literary group established in 2000; and Kannada Sahitya Ranga (KSR), the preeminent national Kannada literary organization in the United States, founded in 2003/2004.



ಆಪ್ತವಲಯದಲ್ಲಿ ಅಮೆರಿಕನ್ನಡಿಗ

# ಎಚ್. ವೈ. ರಾಜಗೋಪಾಲ್

ಸಂಪಾದಕರು

**ಡಾ. ಮೈ. ಶ್ರೀ. ನಟರಾಜ**

**ತ್ರಿವೇಣಿ ಶ್ರೀನಿವಾಸರಾವ್**



**ಕನ್ನಡ ಸಾಹಿತ್ಯ ರಂಗ**

ನ್ಯೂ ಜೆರ್ಸಿ, ಯು. ಎಸ್. ಎ.

**AAPTAVALAYADALLI AMERIKANNADIGA: H. Y. Rajgopal** - Collection of articles on H. Y. Rajgopal Edited by Dr. My. Sri. Nataraj & Triveni Srinivasarao. Published by **Kannada Sahitya Ranga,** USA,

First Impression: 2019 Pages: 252 + 8 pages color Price: Rs. 250/- US $ 10

Paper Used: 70 GSM N.S. Maplitho Size: Demy 1/8



ಮೊದಲನೆಯ ಮುದ್ರಣ: ೨೦೧೯

**ಬೆಲೆ:** ಎರಡುನೂರಾ ಐವತ್ತು ರೂಪಾಯಿಗಳು

ವಿತರಣೆ:
**ಅಭಿನವ,** ೧೭/೧೮-೨, ಮೊದಲನೆಯ ಮುಖ್ಯರಸ್ತೆ,
ಮಾರೇನಹಳ್ಳಿ, ವಿಜಯನಗರ, ಬೆಂಗಳೂರು ೫೬೦೦೪೦.
**ದೂ:** ೯೪೪೮೮೦೪೯೦೫.
Email: abhinavaravi@gmail.com



**ಪ್ರಸಾರಣೆ:** ಕೃಷ್ಣಾ ಚೆಂಗಡಿ

**ಹೊದಿಕೆ ವಿನ್ಯಾಸ:** ಗುರುಪ್ರಸಾದ್ ಎಂ. ಆರ್.

ಫೋಟೋಗಳು: ರಾಜಗೋಪಾಲ್ ಕುಟುಂಬ ಮತ್ತು ಕಸಾರಂ ಸಂಗ್ರಹ

**ಪುಸ್ತಕ ವಿನ್ಯಾಸ:** ಶ್ರೀಧರ್

**ಮುದ್ರಣ:** ಧರಣಿ ಪ್ರಿಂಟರ್ಸ್, ಬೆಂಗಳೂರು.

# ಅನುಕ್ರಮ

## ಸಾಹಿತ್ಯ ಸಂಬಂಧ –ಕನ್ನಡ ಸಾಹಿತಿಗಳ ನೆನಪುಗಳು

## English Section

ಸಂಪಾದಕರ ನುಡಿ

# ರಾಜಗೋಪಾಲ್ ಎಂಬ ಜೆಂಟಲ್‌ಮನ್

**ಡಾ. ಮೈ. ಶ್ರೀ. ನಟರಾಜ**
**ತ್ರಿವೇಣಿ ಶ್ರೀನಿವಾಸರಾವ್**

'ಜೆಂಟಲ್ಮನ್' ಎಂಬ ಆಂಗ್ಲಭಾಷೆಯ ಶಬ್ದ ಎಲ್ಲರಿಗೂ ಪರಿಚಿತ. ಒಬ್ಬಾತನ ಬಗ್ಗೆ ಆ ಶಬ್ದ ಬಳಸಿದಾಗ ನಮ್ಮ ಮುಂದೆ ಒಬ್ಬ ಸುಸಂಸ್ಕೃತ, ಒಳ್ಳೆಯ ನಡತೆಯ, ಇತರರ ಬಗ್ಗೆ ಸೌಜನ್ಯ ಮತ್ತು ಗೌರವದಿಂದ ನಡೆದುಕೊಳ್ಳುವ, ನಿಯಮಗಳನ್ನು ತಪ್ಪದೇ ಪಾಲಿಸುವ ಸಭ್ಯ ವ್ಯಕ್ತಿಯೊಬ್ಬನ ಚಿತ್ರ ಕಣ್ಮುಂದೆ ತೆರೆದುಕೊಳ್ಳುತ್ತದೆ. ಇವೆಲ್ಲ ಗುಣಗಳನ್ನುಳ್ಳ ವ್ಯಕ್ತಿಯನ್ನು ಒಂದೇ ಪದದಲ್ಲಿ ವಿವರಿಸಲು ಕನ್ನಡದಲ್ಲಿ ಸೂಕ್ತ ಶಬ್ದ ಇದೆಯೇ ಎಂಬ ಪ್ರಶ್ನೆ ಬರುವುದರಿಂದಲೇ, ಕನ್ನಡಿಗರೂ ಸುಲಭವಾಗಿ ಎಲ್ಲರಿಗೂ ಅರ್ಥವಾಗುವ ಆಂಗ್ಲ ಪದವನ್ನೇ ಉಪಯೋಗಿಸುವುದು ವಾಡಿಕೆಯಾಗಿಬಿಟ್ಟಿದೆ. ಅದೇ ಕಾರಣಕ್ಕಾಗಿ, ಯಾರ ಅಡ್ಡಿಯೂ ಇಲ್ಲದೇ, ಎಲ್ಲರೂ ಸ್ವಾಗತಿಸುವ, ಕನ್ನಡ ಭಾಷೆಗೆ ಆಮದು ಮಾಡಿಕೊಳ್ಳಲೇಬೇಕಾದ ಪದಗಳಲ್ಲಿ ಇದೂ ಒಂದು! ಕನ್ನಡ ಸಾಹಿತ್ಯ ರಂಗ ಪ್ರಕಟಿಸುತ್ತಿರುವ ಈ ನಮ್ಮ ಪುಸ್ತಕ 'ಆಪ್ತವಲಯದಲ್ಲಿ ಅಮೆರಿಕನ್ನಡಿಗ... ಎಚ್. ವೈ. ರಾಜಗೋಪಾಲ್' ಸಹ ಒಬ್ಬ 'ಜೆಂಟಲ್ಮನ್' ಅನ್ನು ಕುರಿತದ್ದೇ. ಆತ ಯಾರೆಂದರೆ, ೨೦೧೮ನೇ ಇಸ್ವಿಯಲ್ಲಿ ಕಣ್ಮರೆಯಾದ ಎಚ್. ವೈ. ರಾಜಗೋಪಾಲ್ ಎಂಬ ಅಪ್ಪಟ ಮೈಸೂರಿಗ ಜೆಂಟಲ್‌ಮನ್!

ರಾಜಗೋಪಾಲರ ಮಡದಿ ಮಕ್ಕಳು ಮತ್ತಿತರ ಬಂಧುಗಳೇ ಅಲ್ಲದೇ ಅವರೊಡನೆ ಹಲವು ಸಂಸ್ಥೆಗಳಲ್ಲಿ ದುಡಿದ ಮಿತ್ರರೂ ಅರ್ಪಿಸುತ್ತಿರುವ ನೆನಪಿನ ಕಾಣಿಕೆಯೇ ಈ ಕಿರುಹೊತ್ತಗೆ. ಮೇ ೧೮-೧೯, ೨೦೧೯ ರಂದು ನ್ಯೂ ಜೆರ್ಸಿಯಲ್ಲಿ ನಡೆಯುತ್ತಿರುವ

ಕನ್ನಡ ಸಾಹಿತ್ಯ ರಂಗದ ಒಂಬತ್ತನೇ ವಸಂತ ಸಾಹಿತ್ಯೋತ್ಸವದ ಶುಭ ಸಂದರ್ಭದಲ್ಲಿ ಈ ಕಿರುಹೊತ್ತಗೆಯನ್ನು ರಂಗದ ಸದಸ್ಯರಿಗೂ ಅಭಿಮಾನಿಗಳಿಗೂ ಅರ್ಪಿಸಲು ನಮಗೆ ಅತ್ಯಂತ ಹರ್ಷವಾಗುತ್ತಿದೆ. ಕನ್ನಡ ಸಾಹಿತ್ಯ ರಂಗದ ಸ್ಥಾಪಕ ಸದಸ್ಯರಾಗಿ, ರಂಗದ ಹುಟ್ಟು ಮತ್ತು ಏಳಿಗೆಗಾಗಿ ಅನವರತ ದುಡಿದ, ಕೊನೆಯವರೆಗೂ ಸಂಸ್ಥೆಯ ಒಳಿತನ್ನೇ ಚಿಂತಿಸುತ್ತಿದ್ದ ಶ್ರೀಯುತ ರಾಜಗೋಪಾಲರಿಗೆ ಇದು ನಮ್ಮ ಶ್ರದ್ಧಾಂಜಲಿ!

ಆಪ್ತರಾಗಿದ್ದ ಬಂಧು/ಮಿತ್ರರೊಬ್ಬರು ತೀರಿಕೊಂಡ ನಂತರ ಅವರ ಬಗ್ಗೆ ಬರೆದು ಪ್ರಕಟಿಸುವ ಶ್ರದ್ಧಾಂಜಲಿ ಹೇಗಿರಬೇಕು? ಗತಿಸಿದವರನ್ನು ಹೊಗಳಿ ಹಾಡುವ ಲೇಖನಗಳಿಂದ ಕೂಡಿರಬೇಕೆ? ಅವರ ಸಾಧನೆಯ ಬಗ್ಗೆ ವಿಮರ್ಶೆ ಮಾಡುವ ವಸ್ತುನಿಷ್ಠ ಲೇಖನಗಳಿಂದ ಕೂಡಿರಬೇಕೆ? ಅಥವಾ ಅವರೊಂದಿಗೆ ಕಳೆದ ರಸನಿಮಿಷಗಳ ನೆನಪಿನ ಮಾಲಿಕೆಯಾಗಿರಬೇಕೆ? ಅವರೊಂದಿಗೆ ನಡೆಸಿದ ಅಥವಾ ನಡೆಸಬೇಕೆಂದಿದ್ದ ಸಂಭಾಷಣೆಯ ಅಥವಾ ಚರ್ಚೆಯ ಸಾರಾಂಶಗಳನ್ನು ಸಾದರಪಡಿಸುವ ಪ್ರಸ್ತುತಿಯಾಗಿರಬೇಕೇ? ಈ ಪ್ರಶ್ನೆಗಳಿಗೆ ಸುಲಭವಾದ ಉತ್ತರಗಳು ಸಿಕ್ಕುವುದಿಲ್ಲ. ೬೦ರ ದಶಕದಲ್ಲಿ ಅಮೆರಿಕೆಗೆ ಬಂದ ಶ್ರೀ ರಾಜಗೋಪಾಲ್ ಹೀಗೆ ಬಂದ ಕನ್ನಡಿಗರಲ್ಲಿ ಮೊದಲಿಗರ ಗುಂಪಿಗೆ ಸೇರಿದವರು. ಹಲವು ರೀತಿಯಲ್ಲಿ ಸಕ್ರಿಯವಾಗಿ ದುಡಿದು, ವೃತ್ತಿ-ಪ್ರವೃತ್ತಿ ಎರಡರಲ್ಲೂ ಸಾಧನೆ ಮಾಡುತ್ತಾ ಸಾರ್ಥಕ ಬಾಳ್ವೆಯನ್ನು ನಡೆಸಿ, ಅನೇಕ ಬಂಧು ಮಿತ್ರರ ಮನಸ್ಸಿನಲ್ಲಿ ನೆಲೆಸಿದವರು, ತೀವ್ರ ಅನಾರೋಗ್ಯದ ನೋವನ್ನು ಧೈರ್ಯವಾಗಿ ಎದುರಿಸಿ ಶಾಂತಚಿತ್ತರಾಗಿ ಮೃತ್ಯುವನ್ನು ಎದುರುಗೊಂಡವರು. ಮೇಲೆ ಪಟ್ಟಿಮಾಡಿದ ವರ್ಗಗಳಿಗೆ ಸೇರುವ, ರಾಜಗೋಪಾಲರ ಬಹುಮುಖ ವ್ಯಕ್ತಿತ್ವಕ್ಕೆ ಸಂಬಂಧಿಸಿದ ವಿವರಗಳ ಹಲವಾರು ತುಣುಕುಗಳು ಈ ಕಿರುಹೊತ್ತಗೆಯಲ್ಲಿ ಅಡಕವಾಗಿವೆ. ಲೇಖನಗಳೆಲ್ಲ ಕನ್ನಡದಲ್ಲೇ ಇರಬೇಕೆಂಬುದು ನಮ್ಮ ಆಶಯವಾಗಿತ್ತಾದರೂ ಕನ್ನಡ ಬಾರದ ಅಥವಾ ಕನ್ನಡದಲ್ಲಿ ಬರೆಯಲಾಗದ ಕೆಲವು ಆತ್ಮೀಯರ ಲೇಖನಗಳನ್ನು ಆಂಗ್ಲ ಮೂಲದಲ್ಲೇ ಪ್ರಕಟಿಸುವ ತೀರ್ಮಾನ ನಮಗೆ ಅನಿವಾರ್ಯವಾಯಿತು. ಈ ತೀರ್ಮಾನ ನಮ್ಮ ರಾಜಗೋಪಾಲರಿಗೂ ಅರ್ಥವಾದೀತು!

ಎಚ್. ವೈ. ರಾಜಗೋಪಾಲರ ಸಾಹಿತ್ಯ ಮತ್ತು ಸ್ನೇಹದ ವ್ಯಾಪ್ತಿ ಹಿರಿದು. ಅವರನ್ನು ಹತ್ತಿರದಿಂದ ಕಂಡ ಕುಟುಂಬದವರು, ಅಮೆರಿಕದ ಸ್ನೇಹಿತರು, ಭಾರತದಿಂದಲೂ ಸಾಹಿತಿ ಮಿತ್ರರು ಲೇಖನಗಳನ್ನು ಬರೆದುಕೊಟ್ಟು ರಾಜಗೋಪಾಲರಿಗೆ ನೆನಪಿನ ಕಾಣಿಕೆ ಅರ್ಪಿಸಿದ್ದಾರೆ. ಈ ಶ್ರದ್ಧಾಂಜಲಿ ಪುಸ್ತಕಕ್ಕೆ ಲೇಖನಗಳನ್ನು ಪ್ರೀತಿಯಿಂದ ಬರೆದುಕೊಟ್ಟ ಬಂಧು-ಮಿತ್ರರಿಗೆ, ಹಲವು ಉತ್ತಮ ಛಾಯಾಚಿತ್ರಗಳನ್ನು ಒದಗಿಸಿದವರಿಗೆ ಮತ್ತು ಸಂಪಾದಕರಾಗುವ ಅವಕಾಶವನ್ನು ನಮಗೆ ಕಲ್ಪಿಸಿಕೊಟ್ಟ ಕನ್ನಡ ಸಾಹಿತ್ಯ ರಂಗದ ಆಡಳಿತ ಮಂಡಲಿಗೆ ನಮ್ಮ ಅನಂತ ಧನ್ಯವಾದಗಳು.



ದಿವಂಗತ ರಾಜಗೋಪಾಲರ ಬಗ್ಗೆ ಅತ್ಯಂತ ಪ್ರೀತಿ ಮತ್ತು ಆದರವನ್ನು ಹೊಂದಿರುವ ಅಭಿನವ ಪ್ರಕಾಶನದ ಶ್ರೀ ರವಿಕುಮಾರ್ ಅವರೂ ಈ ಪುಸ್ತಕದ ಪ್ರಕಟಣೆಯಲ್ಲಿ ಬಹಳಷ್ಟು ಆಸ್ಥೆವಹಿಸಿರುವುದೇ ಅಲ್ಲದೇ ಸಾಕಷ್ಟು ಸಹಾಯಹಸ್ತವನ್ನೂ ನೀಡಿದ್ದಾರೆ. ಅವರಿಗೂ, ಈ ಪುಸ್ತಕಕ್ಕೆ ಅಂದವಾದ ಮುಖಪುಟವನ್ನು ರಚಿಸಿದ ಶ್ರೀ ಗುರುಪ್ರಸಾದ್ ಅವರಿಗೂ ಮತ್ತು ಮುದ್ರಣ ಮಾಡಿದ ಧರಣಿ ಪ್ರಿಂಟರ್ಸ್‌ನ ಸಿಬ್ಬಂದಿಗೂ ನಮ್ಮ ಪ್ರೀತಿಯ ಮೆಚ್ಚುಗೆಗಳು ಸಲ್ಲುತ್ತವೆ.

ಇದೋ, ಪುಸ್ತಕವನ್ನು ನಿಮ್ಮ ಮುಂದಿಡುತ್ತಿದ್ದೇವೆ, ಓದಿ ಪ್ರತಿಕ್ರಿಯೆ ವ್ಯಕ್ತಪಡಿಸುವವರಿಗೆ ನಮ್ಮ ಸ್ವಾಗತವಿದ್ದೇ ಇದೆ.

—

ಪ್ರಸ್ತಾವನೆ

# ಎಚ್. ವೈ. ರಾಜಗೋಪಾಲ್

–ನ. ರವಿಕುಮಾರ

ನಮ್ಮ ಬದುಕಿನಲ್ಲಿ ಯಾವಾಗ, ಯಾರು ಬರುತ್ತಾರೆ, ಯಾಕಾಗಿ ಬರುತ್ತಾರೆ, ಯಾವ ರೀತಿಯಲ್ಲಿ ಬರುತ್ತಾರೆ, ಅವರಿಂದ ನಮ್ಮ ವ್ಯಕ್ತಿತ್ವದಲ್ಲಿ ಯಾವ ರೀತಿಯ ಬದಲಾವಣೆ ಆಗುತ್ತದೆ, ಯಾವಾಗ ಹೋಗುತ್ತಾರೆ ಎನ್ನುವುದು ಗೊತ್ತಾಗುವುದಿಲ್ಲ. ಕೆಲವಕ್ಕೆ ನಮಗೆ ಆಯ್ಕೆಗಳು ಇರುತ್ತವೆ ನಿಜ. ಎಲ್ಲಕ್ಕೂ ಅಲ್ಲ, ಎಲ್ಲ ಕಾಲಕ್ಕೂ ಅಲ್ಲ. ದಿನಕ್ಕೆ ಕನಿಷ್ಠ ಒಬ್ಬ ಹೊಸಬನನ್ನಾದರೂ ಪರಿಚಯ ಮಾಡಿಕೊಳ್ಳಬೇಕೆಂಬ ಹಂಬಲ ಗಾಂಧಿಯವರಿಗೆ ಇತ್ತಂತೆ. ವ್ಯಕ್ತಿ ವಿಶಿಷ್ಟತೆಯೇ ಮುಖ್ಯವಾಗುತ್ತಿರುವ ಈ ದಿನಗಳಲ್ಲಿ ಸಾಮುದಾಯಿಕ ಪ್ರಯತ್ನಕ್ಕೆ ಬೆಲೆ ಇದೆಯೇ? ಎಂಬ ಪ್ರಶ್ನೆ ನನ್ನನ್ನು ಹಲವು ಸಲ ಕಾಡಿದ್ದಿದೆ. ಆದರೆ ವ್ಯಕ್ತಿ ವಿಶಿಷ್ಟತೆಯನ್ನು ಬಿಡದೆ ಸಾಮುದಾಯಿಕತೆಯ ನೆಲೆಯಲ್ಲಿಯೂ ಕೆಲಸ ಮಾಡಿದ ಹಲವರು ನಮ್ಮೊಡನೆ ಇದ್ದಾರೆ ಎನ್ನುವುದೂ ಸಮಾಧಾನ ತರುವ ಸಂಗತಿ. ಗಾಂಧಿ ಅದಕ್ಕೆ ದೊಡ್ಡ ಉದಾಹರಣೆ. ವೈಯಕ್ತಿಕತೆಯಲ್ಲೂ ಸಾಮುದಾಯಿಕತೆಯ ತತ್ವವನ್ನು ತೋರಿಸಿಕೊಟ್ಟವರು ಅವರು.

ಗಾಂಧಿಯವರ ತತ್ವವನ್ನು, ಆದರ್ಶವನ್ನು ತಮ್ಮ ಬದುಕಿನಲ್ಲಿ ಅಳವಡಿಸಿಕೊಂಡ ಹಲವು ಕುಟುಂಬಗಳಲ್ಲಿ ಯೋಗಾನರಸಿಂಹ ಅವರದೂ ಒಂದು. ಎಚ್. ವೈ ಶಾರದ ಪ್ರಸಾದ್, ಎಚ್. ವೈ. ಮೋಹನ್ ರಾಮ್, ಎಚ್. ವೈ. ನಾರಾಯಣ ದತ್ತ ಮುಂತಾದವರ





ಹೆಸರುಗಳನ್ನು ಕೇಳಿದರೆ ನಿಜಕ್ಕೂ ಅವರೆಲ್ಲರ ಬಗ್ಗೆ ಸಹಜವಾಗಿಯೇ ಗೌರವ ಮೂಡುತ್ತದೆ. ನನಗೆ ಈ ಎಲ್ಲರ ಜೊತೆಗೆ ಸಂಪರ್ಕ ಒದಗಿ ಬಂದದ್ದು ಯೋಗಯೋಗವೇ ಸರಿ. ಇದರಲ್ಲೆಲ್ಲಾ ಹೆಚ್ಚು ಒಡನಾಟದ ಭಾಗ್ಯ ಲಭಿಸಿದ್ದು ಎಚ್. ವೈ. ರಾಜಗೋಪಾಲರ ಜೊತೆಗೆ. (ಎಚ್. ವೈ. ಶಾರದಾಪ್ರಸಾದರ ಎರಡು ಕೃತಿಗಳನ್ನು ಅಭಿನವ ಪ್ರಕಟಿಸಿದೆ)

ಒಮ್ಮೆ ಅಚಾನಕ್ ಮೈಸೂರಿಗೆ ಹೋದವನಿಗೆ, ಪ್ರಭುಶಂಕರ್ ಎಚ್. ವೈ. ರಾಜಗೋಪಾಲರನ್ನು ಪರಿಚಯಿಸಿದರು. ಸುಮಾರು ಹತ್ತು ಹದಿನೈದು ವರ್ಷಗಳ ಕಾಲ ಅವರ ಒಡನಾಟ. ರಾಜಗೋಪಾಲ್ ನಾಗ ಐತಾಳ್, ನಂಜುಂಡಸ್ವಾಮಿ ಮುಂತಾದವರೆಲ್ಲ ಸೇರಿ 'ಕನ್ನಡ ಸಾಹಿತ್ಯ ರಂಗ'ವನ್ನು ಕಟ್ಟುತ್ತಿದ್ದ ಸಂದರ್ಭವದು.

ರಾಜಗೋಪಾಲ್ ಅವರಿಗೆ ಒಳ್ಳೆಯದನ್ನು ಪರೀಕ್ಷಿಸುವ, ಗುರುತಿಸುವ, ಆರಿಸುವ, ಮತ್ತು ಒಪ್ಪಿಕೊಳ್ಳುವ ಗುಣ ಬಹುಶಃ ಅವರ ಕುಟುಂಬದಿಂದಲೇ ಬಂದಿರಬೇಕು. ಚಿಕ್ಕಂದಿನಲ್ಲಿ ತಾಯಿ ಸರಸ್ವತಮ್ಮನವರ ಮಕ್ಕಳ ಕೂಟ ಮತ್ತು ತಂದೆಯವರ ಸಾಹಿತ್ಯ ಮತ್ತು ಸಂಗೀತಾಸಕ್ತಿ ರಾಜಗೋಪಾಲರ ವ್ಯಕ್ತಿತ್ವವನ್ನು ಬೆಳೆಸಲು ಸಹಾಯಕವಾಗಿರಬೇಕು.

ರಾಜಗೋಪಾಲ್ ಯಾವ ಕೆಲಸಕ್ಕೆ ಕೈ ಹಾಕಿದರೂ ಅದನ್ನು ತುಂಬ ಶ್ರದ್ಧೆಯಿಂದ ಮಾಡುತ್ತಿದ್ದರು. 'ಅಚ್ಚುಕಟ್ಟಾಗಿ ಮಾಡಬೇಕು' ಎನ್ನುವ ಮಾತನ್ನು ಪದೆ ಪದೇ ಹೇಳುತ್ತಿದ್ದರು. ಸಹಜವಾಗಿಯೇ ಪ್ರಾಮಾಣಿಕತೆ ಅವರ ಎಲ್ಲ ಆಲೋಚನೆ ಮತ್ತು ಕೆಲಸದಲ್ಲಿ ಎದ್ದು ಕಾಣುತ್ತಿತ್ತು. ಹೀಗೆ ಮಾಡುವ ಕೆಲಸದಲ್ಲಿ ಎಲ್ಲರನ್ನು ಒಳಗೊಳ್ಳಬೇಕೆಂಬ ಭಾವನೆ ದಟ್ಟವಾಗಿರುತ್ತಿತ್ತು. ಹಾಗೆ ಒಳಗೊಳ್ಳುವಾಗ ತಮ್ಮ ವಿಚಾರಗಳನ್ನು ಬೇರೆಯವರು 'ಒಪ್ಪಲಿ' ಎಂಬ ಭಾವನೆ ಯಾವತ್ತಿಗೂ ಇರುತ್ತಿರಲಿಲ್ಲ. ಎಲ್ಲರ ಅಭಿಪ್ರಾಯಗಳನ್ನು ಕೇಳಿ ತಮ್ಮದೇ ಆದ ನಿರ್ಧಾರಕ್ಕೆ ಬರುತ್ತಿದ್ದರು. ಹಾಗೆ ನಿರ್ಧರಿಸುವಾಗಲೂ ಕೂಡ 'ಶ್ರೇಷ್ಠ'ವಾದದ್ದರ ಕಡೆಗೇ ಅವರ ಗಮನವಿರುತ್ತಿತ್ತು. ಹೀಗಾಗಿ ಅವರ ಎಲ್ಲ ಆಲೋಚನೆ, ಚಿಂತನೆ, ಗ್ರಹಿಕೆ, ಕೆಲಸಗಳೆಲ್ಲದರಲ್ಲಿ ಶ್ರೇಷ್ಠತೆ ಎಂಬುದು ಒಂದು 'ಗುಣ'ವಾಗದೆ 'ಅಂತಃಸತ್ವ'ವಾಗಿರುತ್ತಿತ್ತು.

ರಾಜಗೋಪಾಲ್ ಎಲ್ಲವನ್ನೂ ಒಪ್ಪುತ್ತಿದ್ದರು ಎಂದಲ್ಲ. ಆದರೆ ಎಲ್ಲವನ್ನೂ ಗಮನಿಸುವ 'ತೆರದ ಮನಸ್ಸು' ಇರುತ್ತಿತ್ತು. ಎಲ್ಲರ ವಿಚಾರಗಳನ್ನು, ಅಭಿಪ್ರಾಯಗಳನ್ನು ಕೇಳುತ್ತಿದ್ದರು. ಅವರಿಗೆ ಸರಿ ಎನಿಸಿದರೆ ಖಂಡಿತಾ ಅದನ್ನು ಒಪ್ಪುತ್ತಿದ್ದರು. ತಾವು ಒಪ್ಪುವುದಕ್ಕೆ ಬೇಕಾದ ವಿಚಾರಗಳನ್ನು ಮಾತ್ರ ತುಂಬ ಆಳವಾಗಿ ಪರಿಶೀಲಿಸುತ್ತಿದ್ದರು. ಹೀಗಾಗಿ ಅವರ ಯಾವುದೇ ಕೆಲಸ ಮತ್ತು ನಿರ್ಧಾರಗಳು ಯಾರನ್ನು ನೋಯಿಸುವಂಥವಾಗಿರುತ್ತಿರಲಿಲ್ಲ ಅಥವಾ ಅಸಮಾಧಾನ ಉಂಟು ಮಾಡುವಂತಿರಲಿಲ್ಲ. ಹೇಳಬೇಕಾದುದನ್ನು ಹೇಳುವಾಗ ಕೂಡ ಅಹಂಕಾರವಾಗಲೀ, ಗತ್ತಾಗಲಿ ಎಂದೂ ಕೇಳಿಬರುತ್ತಿರಲಿಲ್ಲ.



ರಾಜಗೋಪಾಲ್ ಕಟ್ಟಿದ 'ಪ್ರಸ್ತಾಪ'ವಾಗಲೀ, 'ಕನ್ನಡ ಸಾಹಿತ್ಯ ರಂಗ'ವಾಗಲೀ, ಸಂಪಾದಿಸಿದ ಪುಸ್ತಕಗಳಾಗಲೀ, ಸಂಘಟನೆಗಳಾಗಲೀ (ದೇವಗೀತ ಟ್ರಸ್ಟ್ ಸೇರಿ) ಸ್ವಂತ ಬರಹಗಳಾಗಲೀ, ಒಡನಾಟದಲ್ಲಾಗಲೀ, ಗೆಳೆತನವಾಗಲೀ ಎಲ್ಲದರಲ್ಲಿಯೂ 'ರಾಜಗೋಪಾಲ್‌ತನ' ಎದ್ದು ಕಾಣುತ್ತದೆ. ಅವರ ಈ ಎಲ್ಲ ಸಾಧನೆಯ ಹಿಂದೆ ವಿಮಲಾ ರಾಜಗೋಪಾಲ್, ಅವರ ಕುಟುಂಬ ಮತ್ತು ಅಮೆರಿಕನ್ನಡಿಗರ ಸಹಕಾರ ಇದೆ ಎಂಬುದು ನಿರ್ವಿವಾದ.

ರಾಜಗೋಪಾಲ್ ಬದುಕಿನಲ್ಲಿ ಹೇಗೋ ಅವರ ಕೆಲಸಗಳಿಗೂ ಒಂದು ಘನತೆಯನ್ನು ತಂದುಕೊಡುತ್ತಿದ್ದರೆನ್ನುವುದಕ್ಕೆ ಅವರು ಸಂಪಾದಿಸಿದ 'ನಗೆಗನ್ನಡಂ ಗೆಲ್ಗೆ', 'ಹಲವು ಮಕ್ಕಳ ತಾಯಿ' (ಈ ಪುಸ್ತಕಕ್ಕೆ ಭಾರತೀಯ ಪ್ರಕಾಶಕರ ಒಕ್ಕೂಟ ನೀಡುವ ರಾಷ್ಟ್ರಮಟ್ಟದಲ್ಲಿ ಅತ್ಯುತ್ತಮ ಪ್ರಕಟನೆಗಾಗಿ ನೀಡುವ ಮೊದಲನೆಯ ಬಹುಮಾನ ಲಭಿಸಿತು), 'ಆಚಾರ್ಯ ಸಂಪಾದಕ ನಾರಾಯಣ ದತ್ತ'ದಂಥ ಪುಸ್ತಕಗಳೇ ಸಾಕ್ಷಿ. ಯಾವ ಕೆಲಸವನ್ನೂ ಅವರು ಹರಿಬರಿ ಮಾಡುತ್ತಿರಲಿಲ್ಲ. ಕೆಲವೊಮ್ಮೆ ಒಂದು ವರ್ಷಕ್ಕೆ ಮೊದಲೇ ಇಂಥ ಕೆಲಸ ಆಗಬೇಕು ಎಂಬ ಸೂಚನೆ ಕೊಡುತ್ತಿದ್ದರು. ಅದಕ್ಕೆ ಬೇಕಾದ ಪೂರ್ವ ಸಿದ್ಧತೆಗಳನ್ನು ಮಾಡುತ್ತಿದ್ದರು. ಉದಾಹರಣೆಗೆ ಬಸವಣ್ಣನ ಬಗ್ಗೆ ಒಂದು ಲೇಖನ ಬರೆಯಬೇಕೆನಿಸಿದರೆ– ಕನ್ನಡದಲ್ಲಿ ಆ ಕುರಿತು ಬಂದ ಎಲ್ಲ ಪುಸ್ತಕಗಳನ್ನು, ಬರಹಗಳನ್ನು ತರಿಸಿಕೊಂಡು ಓದುತ್ತಿದ್ದರು. ಕೆಲವು ವಿಚಾರಗಳನ್ನು ಆಪ್ತ ವಲಯದಲ್ಲಿ ಚರ್ಚಿಸುತ್ತಿದ್ದರು. ಹೀಗಾಗಿಯೇ ಅವರ ಎಲ್ಲ ಬರವಣಿಗೆಯ ಹಿಂದೆ 'ಪರಂಪರೆಯ ಸಾತತ್ಯ' ಮತ್ತು 'ಸಮಕಾಲೀನತೆಯ ಸ್ಪಂದನೆ' ಎರಡನ್ನೂ ಕಾಣುತ್ತೇವೆ.

'ನಗೆಗನ್ನಡಂ ಗೆಲ್ಗೆ'(ಕನ್ನಡ ಸಾಹಿತ್ಯದಲ್ಲಿ ಹಾಸ್ಯ ಎಚ್. ವೈ. ನಂಜುಂಡಸ್ವಾಮಿ ಅವರ ಜೊತೆಯಲ್ಲಿ), 'ಗಾಂಧಿಯುಗಕ್ಕೆ ಕನ್ನಡಿ'(ವಿಮರ್ಶಾ ಬರಹಗಳು) ಮತ್ತು ಅವರು ಸ್ವತಃ ಅನುವಾದಿಸಿದ 'ಸೃಷ್ಟಿ' (ಅಮೆರಿಕದ ಮೂಲ ನಿವಾಸಿಗಳ ನಂಬಿಕೆ, ಪುರಾಣಗಳನ್ನು ಆಧರಿಸಿದ ಕತೆಗಳ ಅನುವಾದ), 'ಹಲವು ಮಕ್ಕಳ ತಾಯಿ' (ಎಚ್. ವೈ. ಸರಸ್ವತಮ್ಮನವರ ಜೀವನ ಮತ್ತು ದರ್ಶನ ಕುರಿತು ನೀರಜಾ ಅಚ್ಚುತರಾವ್, ಮೋಹನ್ ರಾಮ್ ಅವರ ಜೊತೆಯಲ್ಲಿ), ಆಚಾರ್ಯ ಸಂಪಾದಕ '(ನಾರಾಯಣ ದತ್ತರ ಕುರಿತು) ಪ್ರಕಟಿಸಿದ ಮುಖ್ಯ ಪುಸ್ತಕಗಳು. ಈ ಎಲ್ಲ ಪುಸ್ತಕಗಳನ್ನು ರೂಪಿಸುವಾಗ ಹಲವು ಘಂಟೆಗಳ ಮಾತುಕತೆ, ಈ ಮೇಲ್‌ಗಳು ನನ್ನ ಅನುಭವ ವಲಯವನ್ನು ವಿಸ್ತರಿಸಿವೆ. ತಮ್ಮ ಬರಹವಿರಲಿ; ಎಲ್ಲೇ ಒಳ್ಳೆಯದಿದ್ದರೂ ಅದನ್ನು ಗುರುತಿಸಿ ಸಾರ್ವಜನಿಕರ ಗಮನಕ್ಕೆ ತರಬೇಕೆಂಬ ಉತ್ಕಟ ಇಚ್ಛೆ ಅವರಲ್ಲಿ ಇರುತ್ತಿತ್ತು. ಆ ಕಾರಣಕ್ಕಾಗಿಯೇ ಅವರು ಹಲವು ಲೇಖಕರನ್ನು ಬೆಳೆಸಿದರು, ಕನ್ನಡವರು ಯಾರೇ ಅಮೆರಿಕಕ್ಕೆ ಹೋದರೂ ಅವರನ್ನು 'ಪ್ರಸ್ತಾಪ'ಕ್ಕೆ ಕರೆದು ಸಂವಾದ, ಉಪನ್ಯಾಸಗಳನ್ನು




ಏರ್ಪಡಿಸುತ್ತಿದ್ದರು. ಅಮೆರಿಕದಲ್ಲಿದ್ದರೂ ಕನ್ನಡದಲ್ಲಿ ಏನೇನು ನಡೆಯುತ್ತಿದೆ, ಯಾವ ಯಾವ ನೆಲೆಯಲ್ಲಿ ಕೆಲಸ ಮಾಡಿದರೆ ಕನ್ನಡ ವಿಶ್ವಮಟ್ಟದಲ್ಲಿ ಬೆಳೆಯಲು ಸಾಧ್ಯ ಎಂದೆಲ್ಲ ಚಿಂತಿಸುತ್ತಿದ್ದರು. ಕಳುಹಿಸಿದ ಎಲ್ಲ ಪುಸ್ತಕಗಳನ್ನು ಓದಿ ವಿಸ್ತಾರವಾಗಿ ಬರೆಯುತ್ತಿದ್ದರು. ಶೆಟ್ಟರ್ ಅವರ 'ಶಂಗಂ ತಮಿಳಗಂ' ಪುಸ್ತಕ ದ ಬಗ್ಗೆ 'ಇಂಥ ಕೆಲಸವನ್ನು ಈವರೆವಿಗೆ ಯಾರೂ ಮಾಡಿಲ್ಲ. ಎಲ್ಲರೂ ಓದಬೇಕಾದ ಪುಸ್ತಕವಿದು. ಶೆಟ್ಟರ್ ಅವರು ಸಾಹಿತಿ ಮತ್ತು ಇತಿಹಾಸಕಾರರಾಗಿರುವುದರಿಂದ ಮಾತ್ರ ಇಂಥ ಪುಸ್ತಕ ಬರೆಯುವುದು ಸಾಧ್ಯ. ಅಲ್ಲಲ್ಲಿ ಅವರು ಪ್ರಸ್ತಾಪಿಸುವ ಸ್ಥಳಗಳನ್ನು ಒಳಗೊಂಡ ನಕಾಶೆ ಕೊಟ್ಟರೆ ನಮ್ಮಂಥವರಿಗೆ ಅರ್ಥಮಾಡಿಕೊಳ್ಳಲು ಸಹಾಯಕವಾಗುತ್ತದೆ' ಎಂದು ಬರೆದಿದ್ದರು. ಎಚ್. ಎಸ್. ವೆಂಕಟೇಶಮೂರ್ತಿ ಅವರ 'ಕುಮಾರವ್ಯಾಸ ಕಥಾಂತರ' ಓದಿ ಒಂದು ಸುದೀರ್ಘ ಪತ್ರವನ್ನು ಬರೆದಿದ್ದರು. ನರಹಳ್ಳಿಯವರ 'ಅನಕೃ ಮತ್ತು ಕನ್ನಡ ಸಂಸ್ಕೃತಿ' ಪುಸ್ತಕವನ್ನು ಓದಿ ಅನಕೃ ಕನ್ನಡ ಕಟ್ಟಿದ ಬಗೆಗೆ ಒಂದು ಗಂಟೆಗೂ ಹೆಚ್ಚು ಕಾಲ ಮಾತನಾಡಿದ್ದರು.

ಒಮ್ಮೆ ಅವರು 'ಆಲೂರು ವೆಂಕಟರಾಯರ ಸಮಗ್ರ ಸಾಹಿತ್ಯ ಬೇಕು' ಎಂದರು. ಕಳುಹಿಸಿಕೊಟ್ಟ ನಂತರ ಆಲೂರರ ಕನ್ನಡ ಪ್ರಜ್ಞೆಯ ಬೇರುಗಳನ್ನು ಸಮಕಾಲೀನ ಸಂದರ್ಭಕ್ಕೆ ಅನ್ವಯಿಸಿ ಒಂದು ಲೇಖನ ಬರೆದರು (ಅದು ಅಮೆರಿಕದ ಸ್ಮರಣ ಸಂಚಿಕೆಯೊಂದರಲ್ಲಿ ಪ್ರಕಟವಾಯಿತು. (ರಾಜಗೋಪಾಲ್‌ರದು ಎಷ್ಟು ನಿಸ್ಪೃಹ ವ್ಯಕ್ತಿತ್ವ ಎಂಬುದಕ್ಕೆ ಆ ಲೇಖನದಲ್ಲಿ ನಾನು ಕಳುಹಿಸಿಕೊಟ್ಟ ಪುಸ್ತಕದ ಪ್ರಸ್ತಾಪವನ್ನೂ ಮಾಡಿರುವುದು ಸಾಕ್ಷಿ)

ರಾಜಗೋಪಾಲ್ ಇನ್ನು ಹತ್ತು ವರ್ಷ ನಾವು ಮಾಡಬೇಕಾದ ಕೆಲಸಗಳನ್ನು ಬಿಟ್ಟು ಹೋಗಿದ್ದಾರೆ. ಅವರ ಅಜ್ಜಿಯ ಬಗೆಗೆ ಹಿಂದೆ ಪ್ರಕಟವಾಗಿದ್ದ 'ಮೊಮ್ಮಕ್ಕಳು ಹೇಳಿದ ಅಜ್ಜಿಕತೆ' ಪುಸ್ತಕವನ್ನು ಪುನರ್ ರೂಪಿಸಿದ್ದಾರೆ. ತಮ್ಮ ತಾಯಿ ಅನುವಾದಿಸಿದ್ದ 'ಮಕ್ಕಳ ಮಹಾಭಾರತ' ಪುಸ್ತಕವನ್ನು ಅಚ್ಚಿಗೆ ಸಿದ್ಧಪಡಿಸಿದ್ದಾರೆ, ತಮ್ಮ ಮೋಹನ್ ರಾಮ್ ಅವರ 'ಭಾರತೀಯ ಗಿಡ– ಮರಗಳ ಬಗೆಗಿನ ಬರಹ'ವನ್ನು ಅನುವಾದಿಸಲು ಸೂಚಿಸಿದ್ದಾರೆ. ಎಲ್ಲಕ್ಕಿಂತ ಮುಖ್ಯವಾಗಿ ತಮ್ಮ ಮಡದಿ ವಿಮಲಾ ರಾಜಗೋಪಾಲರಿಂದ ಹಲವು ಅಪರೂಪದ ಲೇಖನಗಳನ್ನು ಬರೆಸಿದ್ದಾರೆ. ಆಲೂರು ವೆಂಕಟರಾಯರ 'ಕರ್ನಾಟಕ ಗತವೈಭವ' ಪುಸ್ತಕಕ್ಕೆ ನೂರು ವರ್ಷ ತುಂಬಿದ ಸಂದರ್ಭದಲ್ಲಿ ಆ ವಿಚಾರಗಳನ್ನು ಪುನರ್ ಪರಿಶೀಲಿಸುವ ಪುಸ್ತಕವೊಂದನ್ನು ಹೊರತರುವ, ಅಮೆರಿಕದಲ್ಲಿ ಕನ್ನಡದ ಹಣತೆ ಆರಿಹೋಗದಂತೆ ನೋಡಿಕೊಳ್ಳುವ ಜವಾಬುದಾರಿಯನ್ನು ವಹಿಸಿದ್ದಾರೆ.

ಈಗ್ಗೆ ಕೆಲವು ತಿಂಗಳುಗಳ ಮುಂಚೆ ಒಂದು ದಿನ ವಿಮಲಾ ರಾಜಗೋಪಾಲ್ ಅವರು ದೂರವಾಣಿಯಲ್ಲಿ ಮಾತನಾಡಿ ರಾಜಗೋಪಾಲ್ ಅವರ ಬಗೆಗೆ ಹಲವು



ವಿಚಾರಗಳನ್ನು ತಿಳಿಸಿದರು. ಅದೇ ದಿನವೇ ಸಂಜೆ ರಾಜಗೋಪಾಲರ ಸಹೋದರಿ ನೀರಜಾ ಅವರೂ ಮಾತನಾಡಿ ಮೈ. ಶ್ರೀ. ನಟರಾಜ್ ಮತ್ತು ತ್ರಿವೇಣಿ ಅವರು ಸಂಪಾದಿಸಿ ಪ್ರಕಟಿಸುತ್ತಿರುವ ರಾಜಗೋಪಾಲ ಬಗೆಗಿನ ಗೌರವ ಸಂಪುಟದ ಬಗೆಗೆ ಮಾತನಾಡಿದರು. ರಾತ್ರಿ ಮೂರು ಮುಕ್ಕಾಲಿಗೆ ಎಚ್ಚರವಾಯ್ತು. ಸುತ್ತಲೂ ಕಣ್ಣು ಕೋರೈಸುವಷ್ಟು ಬೆಳಕು. 'ಇಷ್ಟು ಬೇಗ ಬೆಳಕಾಯ್ತೆ' ಎಂದುಕೊಂಡೆ. ಕನಸಿನಲ್ಲಿ ಕಂಡದ್ದು ಎಷ್ಟು ಗಾಢವಾಗಿತ್ತೆಂದರೆ...

ನಾನು ಅಮೆರಿಕೆಗೆ ಹೋಗಿದ್ದೆ. ಅಲ್ಲಿ ನಡೆಯುವ ವಿಶೇಷ ಕಾರ್ಯಕ್ರಮಕ್ಕೆ ನಾನು ಒಬ್ಬ ಅತಿಥಿ. ಅಲ್ಲಿ ಕಾರ್ಯಕ್ರಮ ಏರ್ಪಡಿಸಿದ್ದ ಪರಿ ಎಷ್ಟು ವಿಶೇಷವಾಗಿತ್ತು ಎಂದರೆ ಒಂದು ಹಡಗಿನಂತೆ ವಿನ್ಯಾಸಗೊಳಿಸಿದ್ದ ಮನೆಯನ್ನೇ ಸಮುದ್ರ ಮಧ್ಯೆ ನಿಲ್ಲಿಸಿದ್ದರು. ನನಗೋ ಯಾವಾಗಲೂ ಪುಸಕದ್ದೇ ಧ್ಯಾನ. ಅಲ್ಲಿರುವ ಎಲ್ಲರಿಗೆ ಒಂದೊಂದು ಪ್ರಶ್ನೆ ಕೇಳಿ ಅವರು ಉತ್ತರ ಹೇಳಲಿ ಬಿಡಲಿ ಪುಸ್ತಕ ಕೊಡುವುದು ಎಂದುಕೊಂಡೆ. ಮೊದಲನೆಯ ಪ್ರಶ್ನೆ

'ಕರ್ನಾಟಕದಲ್ಲಿ 'ಸಿರಿಗನ್ನಡಂ ಗೆಲ್ಗೆ' ಎನ್ನುವುದು ಘೋಷವಾಕ್ಯವಾದರೆ ಅಮೆರಿಕದಲ್ಲಿರುವ ಕನ್ನಡಿಗರು ಯಾವ ಘೋಷವಾಕ್ಯವನ್ನು ಬಳಸುತ್ತಾರೆ?

ತಕ್ಷಣ ಬಂದ ಉತ್ತರ 'ನಗೆಗನ್ನಡಂ ಗೆಲ್ಗೆ'...

ಮುಂದೆ ಸ್ವತಃ ರಾಜಗೋಪಾಲರು ಭೇಟಿಯಾಗಿ 'ನೀವು ಇಲ್ಲಿ ಎಷ್ಟು ದಿನ ಇರುತ್ತೀರಿ?' ಎಂದು ಕೇಳಿದರು. 'ನನಗೆ ಕೆಲಸಗಳಿವೆ ನಾಳೆಯೇ ಹೊರಡಬೇಕು' ಎಂದೆ. 'ಅಲ್ಲಪ್ಪಾ ನೀವು ಇಷ್ಟು ದೂರ ಬಂದಿದ್ದೀರಿ. ನೋಡಲು ಅನೇಕ ಸಂಗತಿಗಳಿವೆ. ಜೊತೆಗೆ ಆಫ್ರಿಕಾ ದೇಶವನ್ನು ನೋಡಿಕೊಂಡು ಹೋಗಿ' ಎಂದರು. ಅವರೇ ನನ್ನನ್ನು ಇಂಡಿಯಾದ ಹಳ್ಳಿಯಂತೆ ಕಾಣುವ ಒಂದು ಕಾಲೋನಿಗೆ ಕರೆದುಕೊಂಡು ಹೋದರು. 'ಟೀ ಕುಡಿಯಿತ್ತೀರಾ' ಎಂದರು. 'ಇಲ್ಲ ಸರ್' ಎಂದೆ. 'ಇದನ್ನು ಕುಡಿದು ನೋಡಿ' ಎಂದು ಆಗತಾನೆ ಕೆಲವು ಗಿಡಗಳಿಂದ ಕಿತ್ತ ಎಲೆಗಳನ್ನು ಹಾಕಿ ಸಿದ್ಧಪಡಿಸಿದ ಹರ್ಬಲ್ ಟೀ ತಂದುಕೊಟ್ಟರು...ಮುಂದಿನದು ಮರೆತು ಹೋಗಿದೆ. ಆದರೆ ಅವರ ಕೆಲವು ಮುಖ್ಯ ಮಾತುಗಳನ್ನು ಹೇಳಿದ್ದ ಬಗ್ಗೆ ಖಾತ್ರಿ ಇದೆ. ಯಾವತ್ತಾದರೂ ನೆನಪಾಗಬಹುದು...

ಅವತ್ತಿನಿಂದ ಯೋಚಿಸುತ್ತಿದ್ದೇನೆ... ಆತ್ಮ ಎಂಬುದಿದೆಯೇ? ದೇಹ ಬಿಟ್ಟ ಮೇಲೆ ಅದು ಏನಾಗುತ್ತದೆ? ಅದರ ಅಸ್ತಿತ್ವ ಹೇಗಿರುತ್ತದೆ ಎಂಬುದಕ್ಕೆ ಇವತ್ತು ಖಚಿತ ಉತ್ತರಗಳು ನಮಗೆ ಗೊತ್ತಿಲ್ಲ. ಆದರೆ ಮುಂದೊಂದು ದಿನ ಅಂಥ ವಿಚಾರಗಳನ್ನು ವಿವರಿಸುವ ಸಂಶೋಧನಾ ಬರಹಗಳು, ಚಿತ್ರಗಳು ಬರಲು ಸಾಧ್ಯವಿದೆ. ಯಾಕೆಂದರೆ ಕೇವಲ ಹತ್ತು ವರ್ಷಗಳ ಹಿಂದೆ ಸಾವಿರಾರು ಮೈಲಿ ದೂರದಲ್ಲಿರುವ ಸ್ನೇಹಿತರ ಮುಖವನ್ನು ನೋಡುತ್ತಾ ಮಾತನಾಡುವುದನ್ನು ಕಲ್ಪಿಸಿಕೊಳ್ಳುವುದು ಸಾಧ್ಯವಿರಲಿಲ್ಲ.

ರಾಜಗೋಪಾಲ್ ಯಾವತ್ತೂ ನಮ್ಮ ಆಲೋಚನೆ, ಕೆಲಸಗಳ ಹಿಂದೆ ಇರುತ್ತಾರೆ ಎನ್ನುವುದೇ ದೊಡ್ಡ ಸಮಾಧಾನ.

*

ರಾಜಗೋಪಾಲ್ ಅವರ ಸಮಗ್ರ ವ್ಯಕ್ತಿತ್ವವನ್ನು ಕಟ್ಟಿಕೊಡುವ ಪುಸ್ತಕ ಇದಲ್ಲ. ಅವರ ಒಡನಾಟದಲ್ಲಿ, ಕೆಲಸಗಳಲ್ಲಿ ಸಹಭಾಗಿಗಳಾದ ಕೆಲವರ ಬರಹಗಳು ಇಲ್ಲಿವೆ. ನಮ್ಮ ಆಹ್ವಾನದಂತೆ ಕೆಲವರು ಬರೆದುಕೊಟ್ಟಿದ್ದಾರೆ. ಅವರು ನಿಧನರಾದಾಗ ಬರೆದ ಬರಹಗಳಲ್ಲಿ ಕೆಲವನ್ನು ಇಲ್ಲಿ ಸಂಕಲಿಸಿದೆ. ಅವರ ಬಗ್ಗೆ ಬರೆಯಬೇಕಾದವರ ಪಟ್ಟಿ ದೊಡ್ಡದಿದೆ. ರಾಜಗೋಪಾಲ್‌ರ ಬರಹಳನ್ನೆಲ್ಲ ಸಂಗ್ರಹಿಸಿ ಪ್ರಕಟಿಸಬೇಕು. ಜೊತೆಗೆ ಅವರ ಆಸಕ್ತಿಯ ಎಲ್ಲ ವಿಚಾರಗಳನ್ನು ಗುರುತಿಸಿ ದಾಖಲಿಸಬೇಕು. ಅಂಥ ಪ್ರಯತ್ನಕ್ಕೆ ಈ ಪ್ರಯತ್ನ ನಾಂದಿಯಾಗುತ್ತದೆ ಎಂದು ಭಾವಿಸಿದ್ದೇನೆ.

—

# ಕಿಂದರಿ ಜೋಗಿ - ರಾಜಗೋಪಾಲ್

–ಆಹಿತಾನಲ (ಡಾ. ನಾಗ ಐತಾಳ)

೨೦೦೪ರಲ್ಲಿ ಕನ್ನಡ ಸಾಹಿತ್ಯ ರಂಗ (ಕ.ಸಾ.ರಂ.) ಪ್ರಕಟಿಸಿದ, 'ಕುವೆಂಪು ಸಾಹಿತ್ಯ ಸಮೀಕ್ಷೆ' ಗ್ರಂಥದಲ್ಲಿ, ಶ್ರೀ ಎಚ್. ವೈ. ರಾಜಗೋಪಾಲ್ (೧೯೩೫ – ೨೦೧೮) ಬರೆದ, 'ಬೊಮ್ಮನ ಹಳ್ಳಿಯ ಕಿಂದರ ಜೋಗಿ' ಎಂಬ ಶೀರ್ಷಿಕೆ ಹೊತ್ತ ವಿಚಾರಾತ್ಮಕ ಲೇಖನವೊಂದು ಪ್ರಕಟವಾಗಿತ್ತು. ಆ ಲೇಖನ, ಸಾಹಿತ್ಯವಲಯದಲ್ಲಿ ಕುವೆಂಪುರವರ ಸಾಹಿತ್ಯದ ಬಗೆಗೆ ಬರೆದ ಲೇಖನಗಳಲ್ಲೇ ಅಪರೂಪದ್ದು ಎಂಬ ಪ್ರಶಂಸೆ ಪಡೆದಿತ್ತು. ಇದನ್ನು ಇಲ್ಲಿ ಯಾಕೆ ಪ್ರಸ್ತಾಪಿಸುತ್ತಿದ್ದೇನೆಂದರೆ, ಬೊಮ್ಮನ ಹಳ್ಳಿಯ ಕಿಂದರ ಜೋಗಿಯಂತೆ ರಾಜಗೋಪಾಲ್ ಅಮೆರಿಕದ ಸಾಹಿತ್ಯಾಸಕ್ತರನ್ನು ಒಟ್ಟುಗೂಡಿಸಿ, ಸಾಹಿತ್ಯಕ್ಕೆಂದೇ ಮೀಸಲಾದ ಕ.ಸಾ.ರಂ. ಸ್ಥಾಪಿಸುವಲ್ಲಿ ನೇತೃತ್ವ ವಹಿಸಿದ್ದರು – ಎಂಬುದನ್ನು ಒತ್ತಿ ಹೇಳುವುದಕ್ಕೆ. ರಾಮಾಯಣದ ಶ್ರೀರಾಮನನ್ನು ನೆನೆದಾಗಲೆಲ್ಲ ಹನುಮಂತನ ಹೆಸರೂ, ಶ್ರೀರಾಮನ ಹೆಸರನ್ನು ಅನುಸರಿಸಿ ಬರುತ್ತದೆ ಎಂಬ ನಂಬಿಕೆಯೊಂದಿದೆ. ಅಂತೆಯೇ 'ಕನ್ನಡ ಸಾಹಿತ್ಯ ರಂಗ'ವನ್ನು ಜ್ಞಾಪಿಸಿದಾಗಲೆಲ್ಲ ರಾಜಗೋಪಾಲ್ ಹೆಸರೂ ಅನುಸರಿಸುವುದು ಸ್ವಾಭಾವಿಕವೆಂದು ಹೇಳಬಹುದು! ಅಂದರೆ, ರಾಜಗೋಪಾಲ್ ಮತ್ತು ಕ.ಸಾ.ರಂ., ಎರಡೂ ಪರ್ಯಾಯ ಪದಗಳೇ– ಎಂಬಷ್ಟು ಅವರ ಬಗ್ಗೆ ಅಮೆರಿಕನ್ನಡಿಗರ ಭಾವನೆಯಲ್ಲಿ ನೆಲೆಯೂರಿದೆ. ಕ.ಸಾ.ರಂ. ಸ್ಥಾಪನೆಯಾದಂದಿನಿಂದ





(೨೦೦೩) ಅದರ ಸಾರಥ್ಯವನ್ನು ಹೊತ್ತು, ಅದನ್ನು ಬೆಳೆಸಿದ ಹೆಮ್ಮೆಯ ಕರ್ತವ್ಯ ಅವರ ಪಾಲಿನದು! ಅದು ಅವರ ಜೀವನಾಡಿಯೂ ಆಗಿತ್ತು – ಎಂದರೆ ಅತಿಶಯೋಕ್ತಿಯಲ್ಲ! ಅಮೆರಿಕದಲ್ಲಿ ನಡೆಯುವ ಸಾಹಿತ್ಯ ಕೆಲಸಗಳ ಹಿಂದೆ ಅವರ ಹೆಸರು ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಪ್ರಸ್ತಾಪವಾಗುತ್ತಿತ್ತು.

ನನ್ನ– ರಾಜಗೋಪಾಲ್ ಸ್ನೇಹ ೧೯೯೯ರ ಇತ್ತೀಚೆಗಿನದು. ನಾನು, 'ಕಾರಂತ ಚಿಂತನ – ಕಡಲಾಚೆಯ ಕನ್ನಡಿಗರಿಂದ' ಗ್ರಂಥದ ಸಂಪಾದಿಸುವ ತಯಾರಿಯಲ್ಲಿ ಲೇಖನ ಪಡೆಯುವ ಪ್ರಯತ್ನದಲ್ಲಿ, ದಿವಂಗತ ಹರಿಹರೇಶ್ವರರನ್ನು ಸಂಪರ್ಕಿಸಿದಾಗ, ಅವರು ಸೂಚಿಸಿದ ಮೊದಲ ಹೆಸರೇ ರಾಜಗೋಪಾಲರದ್ದು. ಅದಕ್ಕೆ ಅವರೊಂದು ಅಪರೂಪದ ಅತ್ಯುತ್ತಮ ಲೇಖನವೊಂದನ್ನು ಬರೆದುಕೊಟ್ಟಿದ್ದರು. ಅಲ್ಲಿಂದ ಪ್ರಾರಂಭವಾದ ನಮ್ಮ ಗೆಳೆತನ ಹಲವು ದಿಕ್ಕುಗಳಲ್ಲಿ ಆಪ್ತವಾಗಿ ಬೆಳೆದು ಬಂದಿತ್ತು. ೨೦೦೧ರ ಸುಮಾರಿಗೆ, ನಾನು ಅವರಲ್ಲಿ ಅಮೆರಿಕದಲ್ಲಿ ಬರಹಗಾರರ ಸಂಸ್ಥೆಯೊಂದನ್ನು ಸ್ಥಾಪಿಸುವ ಪ್ರಸ್ತಾಪ ಮಾಡಿದ್ದೆ. ಫಲವಾಗಿ, ಅವರು ೨೦೦೨ರಲ್ಲಿ ಡೆಟ್ರಾಯಿಟ್‌ನಲ್ಲಿ ನಡೆದ 'ಅಕ್ಕ' ಸಮ್ಮೇಳನದಲ್ಲಿ ಆ ವಿಚಾರವಾಗಿ ಒಂದು ಹಸ್ತಪತ್ರಿಕೆಯನ್ನು ಹಂಚಿ, ಅದರಲ್ಲಿ ಸಾಹಿತ್ಯಕ್ಕೆಂದೇ ಕೆಲಸ ಮಾಡುವ ಸಂಸ್ಥೆಯೊಂದನ್ನು ಪ್ರಾರಂಭಿಸುವ ಯೋಜನೆಗೆ ಚಾಲನೆ ನೀಡಿದ್ದರು. ಅದರ ಪರಿಣಾಮವಾಗಿ, ೨೦೦೩ರ ಜೂನ್–ಜುಲೈ ಸುಮಾರಿಗೆ, ನ್ಯೂ ಜೆರ್ಸಿಯಲ್ಲಿದ್ದ ಶ್ರೀ ಎಚ್. ವಿ. ರಂಗಾಚಾರ್ ಮತ್ತು ಶ್ರೀಮತಿ ಪದ್ಮಾ ರಂಗಾಚಾರ್‌ರ (ಪುತಿನ ಅವರ ಮಗಳು) ಮನೆಯಲ್ಲಿ ಸೇರಿದ ಕೆಲವು ಸಾಹಿತ್ಯಾಸಕ್ತರು ಅಂಥ ಸಂಸ್ಥೆಗೆ ನಾಂದಿ ಹಾಡಿದ್ದರು. ನಾನು ಅಂದಿನ ಸಭೆಯಲ್ಲಿ, ಅಧ್ಯಕ್ಷ ಸ್ಥಾನಕ್ಕೆ ರಾಜಗೋಪಾಲ್ ಅವರ ಹೆಸರನ್ನು ಸೂಚಿಸಿದಾಗ, ಅವರು ನಮ್ರತೆಯಿಂದ, ಕರ್ತವ್ಯಪ್ರಜ್ಞೆಯಿಂದ ಆ ಜವಾಬ್ದಾರಿಯನ್ನು ಒಪ್ಪಿಕೊಂಡಿದ್ದರು. ಶ್ರೀ ಎಚ್. ಕೆ. ಚಂದ್ರಶೇಖರ್ ಮತ್ತು ನಾನೂ ಉಪಾಧ್ಯಕ್ಷರ ಸ್ಥಾನಕ್ಕೂ, ಗೋಪಾಲ ಕುಕ್ಕೆಯವರು ಕಾರ್ಯದರ್ಶಿ ಸ್ಥಾನಕ್ಕೂ, ಟಿ. ಎನ್. ರಾಜಶೇಖರ್ ಅವರು ಖಜಾಂಚಿ ಸ್ಥಾನಕ್ಕೂ ಆಯ್ಕೆಗೊಂಡೆವು. ಸಂಸ್ಥೆಗೆ 'ಕನ್ನಡ ಸಾಹಿತ್ಯ ರಂಗ' ವೆಂಬ ಹೆಸರಿಡಲಾಯ್ತು.

೨೦೦೪ರಲ್ಲಿ ಫಿಲಡೆಲ್ಫಿಯದ ವಿಲನೋವಾ ಯುನಿವರ್ಸಿಟಿಯಲ್ಲಿ ಏರ್ಪಡಿಸಿದ ಮೊದಲ 'ವಸಂತೋತ್ಸವ', ಕಸಾರಂನ ಉಜ್ವಲ ಭವಿಷ್ಯಕ್ಕೆ ದಾರಿಮಾಡಿಕೊಟ್ಟಿತು. ಈ ಮೊದಲ ಸಮ್ಮೇಳನದ ಸಮಯದಲ್ಲೇ ಕುವೆಂಪುರವರ ಜನ್ಮಶತಮಾನೋತ್ಸವವೂ ಬಂದೊದಗಿದ್ದುದರಿಂದ, ಅಮೆರಿಕನ್ನಡಿಗರು ಆ ಮಹಾಚೇತನಕ್ಕೆ ಸ್ಮರಣೆಯ ಕಾಣಿಕೆ ಸಲ್ಲಿಸುವ ಅವಕಾಶ ದೊರಕಿತ್ತು. ಅಂದಿನ ಸಮ್ಮೇಳನಕ್ಕೆ, ಕುವೆಂಪುರವರ 'ಮಾನಸ ಪುತ್ರ'ರೆಂದೇ ಗುರುತಿಸಲ್ಪಟ್ಟ ಅವರ ಶಿಷ್ಯ, ದಿ. ಪ್ರಭುಶಂಕರರು ಮುಖ್ಯ ಅತಿಥಿಯಾಗಿ ಬಂದಿದ್ದರು. ಅಂದು ಪ್ರಭುಶಂಕರರು, 'ಕನ್ನಡ ಸಾಹಿತ್ಯ – ಒಂದು ಮಿಂಚುನೋಟ'



ಎಂಬ ವಿಷಯದ ಮೇಲೆ ಅದ್ಭುತ ಭಾಷಣ ಮಾಡಿದ್ದರು. ಆ ಸಂದರ್ಭದಲ್ಲಿ ಪ್ರಕಟವಾದ 'ಕುವೆಂಪು ಸಾಹಿತ್ಯ ಸಮೀಕ್ಷೆ' ಗ್ರಂಥಕ್ಕೆ ಅಮೆರಿಕನ್ನಡಿಗರಿಂದ ಲೇಖನಗಳನ್ನು ಬರೆಯಿಸಿ, ಅಂಥವರ ಸಾಹಿತ್ಯಾಸಕ್ತಿಯನ್ನು ಕೆರಳಿಸಿದ ಕೀರ್ತಿ/ಗೌರವ ರಾಜಗೋಪಾಲರಿಗೆ ಸಲ್ಲತಕ್ಕದ್ದು! ಅಮೆರಿಕದ ಹವ್ಯಾಸಿ ಬರಹಗಾರರಿಗೆ ಪ್ರೋತ್ಸಾಹ ನೀಡುವ ಮಹದುದ್ದೇಶದಿಂದ, ಮುಂದೆ ಎರಡು ವರ್ಷಕ್ಕೊಮ್ಮೆ 'ವಸಂತೋತ್ಸವ' ಸಾಹಿತ್ಯ ಸಮ್ಮೇಳನಗಳನ್ನು ಏರ್ಪಡಿಸಿ, ತಾವೂ ಲೇಖನ ಬರೆದು, ಅಮೆರಿಕನ್ನಡಿಗರಿಂದಲೂ ಬರೆಯಿಸಿ, ಪ್ರಕಟ ಮಾಡುವ ಯೋಜನೆಯನ್ನು ರಾಜಗೋಪಾಲ್ ಹುಟ್ಟುಹಾಕಿದರು. ಅಮೆರಿಕದಲ್ಲಿ ಸಾಹಿತ್ಯ ಬೆಳವಣಿಗೆಗೆ ಇದು ಸಹಾಯವಾಗಿತ್ತು.

ಅವರು ಹಲವು ಗ್ರಂಥಗಳನ್ನು ಸಂಪಾದಿಸಿ ಪ್ರಕಟಗೊಳಿಸಿದ್ದಾರೆ. (ದಿ) ಎಚ್. ಕೆ. ನಂಜುಂಡಸ್ವಾಮಿಯವರ ಜೊತೆಗೆ ಸಂಪಾದಿಸಿದ 'ನಗೆಗನ್ನಡಂ ಗೆಲ್ಗೆ' ಕೃತಿ (ಪ್ರ. ಅಭಿನವ, ಬೆಂಗಳೂರು), ಆಧುನಿಕ ಕನ್ನಡ ಹಾಸ್ಯಸಾಹಿತ್ಯಕ್ಕೆ ಒಂದು ಅಪೂರ್ವ ಕೊಡುಗೆ ಎಂದು ಸಾಹಿತ್ಯ ಕ್ಷೇತ್ರದಲ್ಲಿ ಗುರುತಿಸಲಾಗಿದೆ. 'ಗಾಂಧಿ ಯುಗಕ್ಕೆ ಕನ್ನಡಿ' (ಪ್ರ. ಅಭಿನವ) ಎಂಬ ಅವರ ಲೇಖನಗಳ ಸಂಗ್ರಹ ಜನಪ್ರಿಯವಾಗಿದೆ. 'ಸೃಷ್ಟಿ – ನಾಲ್ಕು ಜಗತ್ತುಗಳು' (ಪ್ರ. ಅಭಿನವ), ಅವರ ಅಮೆರಿಕದ ಮೂಲ ನಿವಾಸಿಗಳ ಜಾನಪದ ಮತ್ತು ಪುರಾಣ ಕತೆಗಳ ಅನುವಾದ ಕೃತಿ, ಸಾಮಾಜಿಕ ವಿಜ್ಞಾನ ಕ್ಷೇತ್ರಗಳಲ್ಲಿ ಜನಪ್ರಿಯವಾಗಿದೆ. ಅನಾರೋಗ್ಯದ ನಡುವೆಯೂ, ತಮ್ಮ ತಾಯಿ ಶ್ರೀಮತಿ ಸರಸ್ವತಮ್ಮನವರ ಕುರಿತ 'ಹಲವು ಮಕ್ಕಳ ತಾಯಿ' (ಈ ಪುಸ್ತಕದ ಮುದ್ರಣ ಮತ್ತು ವಿನ್ಯಾಸಕ್ಕೆ ರಾಷ್ಟ್ರ ಪ್ರಶಸ್ತಿ ಸಿಕ್ಕಿದೆ), ಅಣ್ಣ, ಹಿಂದಿ ಪತ್ರಿಕಾರಂಗದ ಮಾರ್ಗದರ್ಶಕ, ನಾರಾಯಣದತ್ತರ ಬದುಕು ಜೀವನನ್ನಾಧರಿಸಿದ 'ಆಚಾರ್ಯ ಸಂಪಾದಕ ಶ್ರೀ ನಾರಾಯಣ ದತ್ತ' ಕೃತಿಗಳನ್ನು ಸಂಪಾದಿಸಿದ್ದರು. ಒಂದು ಗ್ರಂಥವನ್ನು ಹೇಗೆ ಸಂಪಾದಿಸಬೇಕು ಎನ್ನುವುದಕ್ಕೆ ಈ ಕೃತಿಗಳು ಮಾದರಿಯಾಗಿವೆ ಎಂದು ಹೇಳಬಹುದು. ಕೈಗೊಂಡ ಎಲ್ಲ ಕಾರ್ಯಗಳಲ್ಲೂ ಶ್ರದ್ಧೆ, ಸಂಪೂರ್ಣ ತೊಡಗಿಸಿಕೊಳ್ಳುವಿಕೆ, ಅಚ್ಚುಕಟ್ಟುತನ, ತೃಪ್ತಿಕರ ಪೂರೈಕೆ, ಇವೇ ಮೊದಲಾದ ಗುಣಗಳು ರಾಜಗೋಪಾಲರ ಕೆಲಸಗಳಲ್ಲಿ ಎದ್ದು ಕಾಣುವ ವೈಶಿಷ್ಟ್ಯ!

ಹಿರಿಯ ವಿಮರ್ಶಕ, ಹಾಗೂ ಅವರ ಗೆಳೆಯರಾಗಿದ್ದ, ಪ್ರೊ. ಪಿ. ಶ್ರೀನಿವಾಸ ರಾವ್ ಅವರ ನೆನಪಿಗೆ, 'ಪ್ರಸ್ತಾಪ' ಎಂಬ ಸಾಹಿತ್ಯ ಕೂಟವನ್ನು ಸ್ಥಾಪಿಸಿದ ಹಾಗೂ ಅದರ ಬೆಳವಣಿಗೆಗೆ ಕಾರಣರಾದವರಲ್ಲಿ ಮುಖ್ಯ ಪಾತ್ರ ವಹಿಸಿದ ಮನ್ನಣೆ ರಾಜಗೋಪಾಲ್ ಅವರಿಗೆ ಸಲ್ಲುತ್ತದೆ. ಈ ಸಾಹಿತ್ಯ ಕೂಟ ಆಗಾಗ್ಗೆ ಸಾಹಿತ್ಯಿಕ ಕಾರ್ಯಕ್ರಮಗಳನ್ನು ಏರ್ಪಡಿಸುತ್ತಿದೆ. ಭಾರತದಿಂದ ಬಂದ ಸಾಹಿತಿಗಳನ್ನು ಕೂಟಕ್ಕೆ ಆಹ್ವಾನಿಸಿ, ಅವರಿಂದ ಭಾಷಣ ಮತ್ತು ಸಾಹಿತ್ಯ ಸಂವಾದಗಳನ್ನು ಇಂದಿಗೂ 'ಪ್ರಸ್ತಾಪ' ಏರ್ಪಡಿಸಿ, ರಾಜಗೋಪಾಲ್ ನಾಂದಿ ಹಾಡಿದ ಈ ಸಂಸ್ಥೆಯ ಸಂಪ್ರದಾಯವನ್ನು

ಮುಂದುವರಿಸಿಕೊಂಡು ಬರುತ್ತಿದೆ. ಶ್ರೀನಿವಾಸರಾವ್ ತೀರಿಕೊಂಡಾಗ, ರಾಜಗೋಪಾಲ್ ತನ್ನ ಅಗಲಿದ ಗೆಳೆಯನಿಗೆ ಶ್ರದ್ಧಾಂಜಲಿ ಕೊಟ್ಟ ಲೇಖನ, ಸಾಹಿತ್ಯವಲಯದಲ್ಲಿ ಅಪಾರ ಮೆಚ್ಚುಗೆಯನ್ನು ಪಡೆದಿದೆ.

ಮೈಸೂರಿನಲ್ಲಿ, ತಮ್ಮ ಕುಟುಂಬವರ್ಗದವರನ್ನೆಲ್ಲ ಸೇರಿಸಿ, 'ದೇವಗೀತಂ ಟ್ರಸ್ಟ್' ಸ್ಥಾಪಿಸಿ, ಸಾಹಿತ್ಯ, ಸಂಗೀತ ಮತ್ತು ಸಾಮಾಜಿಕ ಕಾರ್ಯಗಳಿಗೆ ರಾಜಗೋಪಾಲ್ ಅವರು ವೇದಿಕೆಯೊಂದನ್ನು ಒದಗಿಸಿದ್ದರು. ಅವರ ಹಿರಿಯಣ್ಣ ಎಚ್. ವೈ. ಶಾರದಾಪ್ರಸಾದ್ ಕುರಿತು ನೆನಪಿನ ಸಂಪುಟ, ಅವರ ತಾಯಿ ಅನುವಾದಿಸಿದ್ದ 'ಮಕ್ಕಳ ಸಚಿತ್ರ ಭಾರತ', 'ಮೊಮ್ಮಕ್ಕಳು ಹೇಳಿದ ಅಜ್ಜಿ ಕತೆ' ಪುಸ್ತಕಗಳ ಮರುಮುದ್ರಣ, ಮಡದಿ ವಿಮಲಾ (ಎಲ್. ಗುಂಡಪ್ಪನವರ ಪುತ್ರಿ) ಅವರ ಲೇಖನಗಳ ಸಂಕಲನ, ಅಣ್ಣ ಮೋಹನ್ ರಾಮ್ ಅವರ Iconic Plants and Trees ಗ್ರಂಥದ ಅನುವಾದ, ಹೀಗೆ ಕೆಲವು ಸಾಹಿತ್ಯಿಕ ಕೆಲಸಗಳ ಕನಸಿದ್ದಿತು ಅವರಿಗೆ.

ಹಲವು ವರ್ಷ, ಶ್ರೀ ರಾಜಗೋಪಾಲ್, ಕ.ಸಾ.ರಂ. ಕಾರ್ಯಕಾರೀ ಸಮಿತಿಯ ಅಧ್ಯಕ್ಷರಾಗಿದ್ದು, ಕೊನೆಗೆ ಅದರ BOTಯ Chairman ಆಗಿ ಸಲಹೆ ನೀಡುತ್ತಿದ್ದು, ಕ. ಸಾ. ರಂ.ದ ಪೋಷಣೆ ಮತ್ತು ಬೆಳವಣಿಗೆಗೆ ಅಪಾರ ಸಹಾಯ ಮಾಡಿದ್ದರು. ಮುಂದೆ ಅನಾರೋಗ್ಯದಿಂದಾಗಿ BOT Chairman ಸ್ಥಾನದಿಂದಲೂ ನಿವೃತ್ತರಾದರು. ಆದಾಗ್ಯೂ, ತಮ್ಮ ಪ್ರಾಮಾಣಿಕ ಸೂಚನೆ ಮತ್ತು ಸಲಹೆಗಳನ್ನು ನಿಸ್ಸಂಕೋಚವಾಗಿ ಸೂಚಿಸುತ್ತಿದ್ದರು.

ಈ ನಿಟ್ಟಿನಲ್ಲಿ ನಾನೊಂದು ವೈಯಕ್ತಿಕ ವಿಷಯವನ್ನು ಪ್ರಾಮಾಣಿಕವಾಗಿ ಹೇಳಬಯಸುತ್ತೇನೆ. ಹಲವು ಬಾರಿ ಸಾಹಿತ್ಯ ರಂಗದ ಯೋಜನೆಗಳ ವಿಚಾರವಾಗಿ ಅವರು ಕೈಗೊಂಡ ಕ್ರಮಗಳ ಬಗ್ಗೆ ನನಗೂ ಅವರಿಗೂ ಭಿನ್ನಾಭಿಪ್ರಾಯಗಳಿದ್ದುವು. ಅದರ ಪರಿಣಾಮವಾಗಿ ನಾನು, ಕ.ಸಾ.ರಂ.ನ ಉಪಾಧ್ಯಕ್ಷ ಸ್ಥಾನಕ್ಕೆ ರಾಜಿನಾಮೆ ನೀಡಿದ್ದೆ. ಆದರೆ, ನನ್ನ ಮೇಲೆ ವಿಶ್ವಾಸವಿದ್ದ ಅವರು, ನಾನು ವಾಪಾಸು ತೆಗೆದುಕೊಳ್ಳುವೆನೆಂಬ ನಂಬಿಕೆಯಿಂದಲೋ ಏನೋ, ನನ್ನ ರಾಜಿನಾಮೆಯನ್ನು ಸುಮಾರು ಎಂಟು ತಿಂಗಳು ಅಂಗೀಕರಿಸದೆ ಕುಳಿತಿದ್ದರು. ನನ್ನ ರಾಜಿನಾಮೆಯನ್ನು ಕೊನೆಗೂ ಅವರು ಸ್ವೀಕರಿಸಲೇ ಬೇಕಾಯ್ತು. ನನ್ನ ರಾಜಿನಾಮೆಯನ್ನು ಅಂಗೀಕರಿಸಿದ ಮೇಲೂ, ಖಾಲಿ ಬಿದ್ದ ಉಪಾಧ್ಯಕ್ಷ ಸ್ಥಾನವನ್ನು ತುಂಬಲು ನನ್ನ ಸಲಹೆ ಕೇಳಿ, ಅದನ್ನು ಒಪ್ಪಿದ್ದರು. ತಮ್ಮ ಯೋಜನೆಯಲ್ಲಿ ಭಿನ್ನಾಭಿಪ್ರಾಯವಿದ್ದವರ ನಿಲುವನ್ನೂ ಅವರು ಗೌರವಿಸುತ್ತಿದ್ದರು – ಎಂಬುದು ನಾನಿಲ್ಲಿ ಒತ್ತಿ ಹೇಳಬಯಸುವ ವಿಷಯ. ಅದು ಅವರಲ್ಲಿ ಎದ್ದು ಕಾಣುವ, ಹಾಗೂ ಗುರುತಿಸಲೇ ಬೇಕಾದ ಒಂದು ದೊಡ್ಡ ಗುಣ! ಹಲವು ಬಾರಿ, ಅವರು ಭಿನ್ನಾಭಿಪ್ರಾಯವುಳ್ಳವರನ್ನು convince ಮಾಡುವ ವೈಶಿಷ್ಟ್ಯತೆಗೆ



ನಾನು ತಲೆದೂಗಿದ್ದೇನೆ! ಇನ್ನೊಮ್ಮೆ ಅವರು ಕ.ಸಾ.ರಂ.ನ bylaws ತಿದ್ದುಪಡಿ ಮಾಡುವ ಸಮಿತಿಗೆ ನನ್ನನ್ನು ಒತ್ತಾಯಪೂರ್ವಕವಾಗಿ ಸೇರಿಸಿಕೊಂಡಿದ್ದರು. ಅವರು ಸೂಚಿಸಿದ ಹಲವು ತಿದ್ದುಪಡಿಗಳಿಗೆ ನನ್ನ ಒಪ್ಪಿಗೆ ಇದ್ದಿರಲಿಲ್ಲ. ಆದರೂ ನನ್ನ ಅಭಿಪ್ರಾಯವನ್ನು (ಅವರ ಅಭಿಪ್ರಾಯಗಳಿಗೆ ಭಿನ್ನವಾಗಿದ್ದರೂ) ಅವರು ಗೌರವಿಸಿದ್ದರು. ಅವರು ನನ್ನ ಮೇಲಿಟ್ಟ ಈ ವಿಶ್ವಾಸಕ್ಕೆ ನಾನು ಕೃತಜ್ಞ!

ಮೈಸೂರು ಮಕ್ಕಳ ಕೂಟದ ಶ್ರೀಮತಿ ಎಚ್. ವೈ. ಸರಸ್ವತಮ್ಮ ಮತ್ತು ಪಂಡಿತರೂ ವಾಗ್ಗೇಯಕಾರರೂ ಆದ ಶ್ರೀ ಯೋಗಾನರಸಿಂಹ ಅವರ ನಾಲ್ಕನೆಯ ಪುತ್ರನಾಗಿ ಹುಟ್ಟಿದ ರಾಜಗೋಪಾಲರಿಗೆ ಸಂಗೀತ ಹಾಗೂ ಸಾಹಿತ್ಯ ಅಭಿರುಚಿಗೆ ಶ್ರೀಮಂತ ಹಿನ್ನೆಲೆ ಸಿಕ್ಕಿತ್ತು. ಮೈಸೂರಿನ National Institute of Engineering ಮತ್ತು ಬೆಂಗಳೂರಿನ Indian Institute of Scienceಗಳಲ್ಲಿ ಇಂಜಿನೀರಿಂಗ್ ವಿದ್ಯಾಭ್ಯಾಸದಲ್ಲಿ ತರಬೇತಿ ಹೊಂದಿದ ಮೇಲೆ, ರಾಜಗೋಪಾಲ್ ವಾರಂಗಲ್ಲಿನ Regional Engineering College ನಲ್ಲಿ ಅಧ್ಯಾಪಕರಾಗಿ, ಆರು ವರ್ಷ ಕೆಲಸ ಮಾಡಿದ್ದರು. ಮುಂದೆ ಅಮೆರಿಕಕ್ಕೆ ಹೆಚ್ಚಿನ ವಿದ್ಯಾಭ್ಯಾಸಕ್ಕೆಂದು ಬಂದು, ಪೆನ್ಸಿಲ್ವೇನಿಯ ಯುನಿವರ್ಸಿಟಿಯಲ್ಲಿ Ph.D. ಪದವಿ ಪಡೆದ ಮೇಲೆ ಅಮೆರಿಕದಲ್ಲೇ ನೆಲೆಯೂರಿದರು. ಫಿಲಡೆಲ್ಫಿಯದ ಖ್ಯಾತ ಇಂಜಿನೀರಿಂಗ್ ಸಂಸ್ಥೆ, United Engineers & Constructor (Raytheon) ಇಂಜನೀರ್ ಆಗಿಯೂ, ಪೆನ್ಸಿಲ್ವೇನಿಯದ ವಿಲನೋವಾ ಯುನಿವರ್ಸಿಟಿ–ಯಲ್ಲಿ ಅಧ್ಯಾಪಕರಾಗಿಯೂ ಕೆಲಸ ಮಾಡಿದರು. ಸಾಹಿತಿ ಎಲ್. ಗುಂಡಪ್ಪನವರ ಮಗಳೂ, ಜನಪ್ರಿಯ ಜನಪದ ಹಾಡುಗಾರ್ತಿಯೂ ಆದ ಶ್ರೀಮತಿ ವಿಮಲಾ ಅವರ ಮನಮೆಚ್ಚಿದ ಮಡದಿ. ಇಷ್ಟೆಲ್ಲ ಇಂಜಿನೀರಿಂಗ್ ಹಿನ್ನೆಲೆ ಇದ್ದರೂ, ಸಾಹಿತ್ಯದ ಮೇಲೆ ಅವರಿಗೆ ಅಪಾರ ಆಸಕ್ತಿ ಇದ್ದಿತ್ತು. ಇದಕ್ಕೆ, ಅವರ ತಂದೆ–ತಾಯಿಯರ, ಹಾಗೂ ಕುಟುಂಬದವರ ಪ್ರಬಲ ಸಾಹಿತ್ಯ ಹಿನ್ನೆಲೆಯೇ ಕಾರಣವೆನ್ನಬಹುದು. ತಮ್ಮ ಕೊನೆಯುಸಿರು ಎಳೆಯುವವರೆಗೂ ಸಾಹಿತ್ಯ ಸೇವೆಗೇ ತಮ್ಮ ಜೀವಿತವನ್ನು ಮುಡುಪಾಗಿಟ್ಟಿದ್ದರು.

ರಾಜಗೋಪಾಲ್ ಅವರು ಅಮೆರಿಕದಲ್ಲಿ ಸಲ್ಲಿಸಿದ ಕನ್ನಡ ಸೇವೆಯನ್ನು ಗುರುತಿಸಿ, ಕರ್ನಾಟಕ ರಾಜ್ಯ ಸರಕಾರ ೨೦೦೭ರಲ್ಲಿ ಅವರಿಗೆ 'ರಾಜ್ಯೋತ್ಸವ ಪ್ರಶಸ್ತಿ' ನೀಡಿ ಗೌರವಿಸಿತ್ತು. ಇದು ಅವರ ಕನ್ನಡ ಸೇವೆಗೆ ಹಾಗೂ 'ಕನ್ನಡ ಸಾಹಿತ್ಯ ರಂಗ'ಕ್ಕೆ ಸಿಕ್ಕಿದ ಮಾನ್ಯತೆ – ಎಂಬ ಹೆಮ್ಮೆಯ ಅನಿಸಿಕೆ ಅಮೆರಿಕನ್ನಡಿಗರದ್ದು! ಅಲ್ಲದೆ, ಇದೇ ಕಾರಣಕ್ಕಾಗಿ ೨೦೧೩ರಲ್ಲಿ, ಅವರಿಗೆ 'ಆಳ್ವಾಸ್ ವಿಶ್ವ ನುಡಿ ವಿರಾಸತ್ ಪ್ರಶಸ್ತಿ' ನೀಡಿ ಗೌರವಿಸಿತ್ತು. ಕಳೆದ ವರ್ಷ (೨೦೧೭), 'ಕನ್ನಡ ಸಾಹಿತ್ಯ ರಂಗ' ಏರ್ಪಡಿಸಿದ ಸಾಹಿತ್ಯ ಸಮ್ಮೇಳನದಲ್ಲಿ ಅವರು ಅಮೆರಿಕದಲ್ಲಿ ಸಲ್ಲಿಸಿದ ಸಾಹಿತ್ಯ ಸೇವೆಗಾಗಿ ಒಂದು ಅಭಿನಂದನಾ ಫಲಕ

ಕೊಟ್ಟು ಸನ್ಮಾನಿಸಿತ್ತು. ಆ ಫಲಕ ಸ್ವೀಕರಿಸುವಾಗ ಅವರ ನಮ್ರತೆ, ವಿನಯವಂತಿಕೆ ಎದ್ದು ಕಾಣುತ್ತಿತ್ತು.

ಅವರ ಜೀವಿತ ಕಾಲದಲ್ಲೇ ಅವರಿಗೆ ಅಭಿನಂದನಾ ಗ್ರಂಥವೊಂದನ್ನು ಅರ್ಪಿಸುವ ಯೋಜನೆಯನ್ನು ಅಭಿನವ ರವಿಕುಮಾರ್ ಅವರು, ನನ್ನೊಡನೆ ಮತ್ತು ನಳಿನಿ ಮೈಯರೊಡನೆ ಪ್ರಸ್ತಾಪಿಸಿದ್ದರು. ಆದರೆ, ಆ ಗ್ರಂಥ ತಯಾರಾಗುವ ಮೊದಲೇ ವಿಧಿ ಅವರನ್ನು ಕರೆಸಿಕೊಂಡಿತು. ಆ ಅವಕಾಶವನ್ನು ಕಳೆದುಕೊಂಡುದಕ್ಕಾಗಿ ಪಶ್ಚಾತ್ತಾಪ-ವಾಗುತ್ತಿದೆ. ಇದೀಗ 'ಅಭಿನಂದನಾ ಗ್ರಂಥ'ದ ಬದಲು 'ಸಂಸ್ಮರಣಾ ಕೃತಿ' ಹೊರಬರುತ್ತಿದೆ.

ಬದುಕು ಒಂದು ರೈಲು ಬಂಡಿ ಪ್ರಯಾಣ. ನಮ್ಮ ನಮ್ಮ ನಿಶ್ಚಿತ ನಿಲ್ದಾಣ ಬಂದಾಗ ನಾವು ಆ ರೈಲು ಬಂಡಿಯಿಂದ ಇಳಿಯಲೇ ಬೇಕಾದುದು ವಿಧಿಲಿಖಿತ! ೨೦೧೮ ಏಪ್ರಿಲ್ ೨೦ರಂದು ಕಾಲ, ಒಬ್ಬ ಮಹಾನ್ ಅಮೆರಿಕನ್ನಡಿಗ, ಶ್ರೀ ಎಚ್. ವೈ. ರಾಜಗೋಪಾಲರನ್ನು ಕಬಳಿಸಿತು! ಹಿಂದೆ, ನನ್ನ 'ಅಮೆರಿಕನ್ನಡಿಗನೊಬ್ಬನ ದಿನಚರಿಯಿಂದ' ಗ್ರಂಥ, ಹಾಗೂ ನನ್ನ ಪ್ರಬಂಧ ಸಂಕಲನ, 'ಕಲಬೆರಕೆ'ಗಳ ಮೇಲೆ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತ, '.... ಐತಾಳರೂ ನಾನೂ ಒಂದೇ ದೋಣಿಯಲ್ಲಿ ಕುಳಿತು ಪ್ರಯಾಣ ಮಾಡುತ್ತಿರುವವರು.... ಓದಿಗೆಂದು ಬಂದು, ಇಲ್ಲೇ ಬೇರು ಬಿಟ್ಟು, ಬರುಬರುತ್ತ ಇಲ್ಲಿನ ಜೀವನಕ್ಕೇ ಹೊಂದಿಕೊಳ್ಳುತ್ತ, ಮಧ್ಯೆ ಕನ್ನಡ ಸಖ್ಯವನ್ನೂ ವಿರಹವನ್ನೂ ಅನುಭವಿಸುತ್ತ, ಅವರ ಸಹಪ್ರಯಾಣಿಕನಾಗಿರುವವನು ನಾನು... ಐತಾಳರು ನನ್ನಲ್ಲಿಟ್ಟ ಸ್ನೇಹ ದೊಡ್ಡದು, ಅದಕ್ಕಾಗಿ ನಾನು ಕೃತಜ್ಞ' ಎಂದು ಹೇಳಿದ್ದಾರೆ. ಅಂತಹ ಮೆಚ್ಚುಗೆಯ ಮಾತಿಗಾಗಿ ನನ್ನ ಕೃತಜ್ಞತೆ ವ್ಯಕ್ತಪಡಿಸಲು ಹೆಮ್ಮೆಯಾಗುತ್ತಿದೆ. ಅವರು 'ಕಲಬೆರಕೆ' ಗೆ ಬರೆದ 'ಸಹಪ್ರಯಾಣಿಕನೊಬ್ಬನ ಮಾತು' ಎಂಬ ಶೀರ್ಷಿಕೆ ಹೊತ್ತ ಮುನ್ನುಡಿಯನ್ನು ಓದಿದಾಗಲೆಲ್ಲ ನನ್ನ ಹೃದಯ ತುಂಬಿ ಬರುತ್ತದೆ. ಆದರೆ, ಈಗ ತಮ್ಮ ಈ 'ಸಹಪ್ರಯಾಣಿಕ'ನನ್ನು ಬಿಟ್ಟು ಅಗಲಿದ್ದಾರೆ. ಅದನ್ನು ಎಣಿಸಿದಾಗಲೆಲ್ಲ ನನ್ನ ಕಣ್ಣು ಒದ್ದೆಯಾಗುತ್ತದೆ. ಅವರು ಭೌತಿಕವಾಗಿ ನಮ್ಮ ಕಣ್ಮುಂದೆ ಇಲ್ಲವೆಂಬುದು ನಿಜ! ಆದರೆ, ನಮ್ಮ ಸ್ಮರಣೆಯಲ್ಲಂತೂ ಅವರು ಸದಾ ಜೀವಂತವಾಗಿದ್ದಾರೆಂಬುದೂ ಸತ್ಯದ ಮಾತು! ಇಲ್ಲಿ ಕಾರಂತರು ತಮ್ಮ 'ಅಳಿದ ಮೇಲೆ' ಕಾದಂಬರಿಯಲ್ಲಿ ಬರೆದ ಮಾತೊಂದು ನೆನಪಿಗೆ ಬರುತ್ತಿದೆ' ಮನುಷ್ಯ, ಸಮಾಜದ ಋಣವನ್ನು ಹೊತ್ತುಕೊಂಡೇ ಬಂದಿದ್ದಾನೆ. ಅದರ ಋಣದಿಂದಲೇ ಬೆಳೆಯುತ್ತಾನೆ. ನಾಳೆ ಸಾಯುವಾಗ ತಾನು ಪಡೆದುದಕ್ಕಿಂತಲೂ ಹೆಚ್ಚಿನ ಋಣವನ್ನು ಹಿಂದೆ ಸಲ್ಲಿಸಿ ಹೋದರೆ, ಆತ ಹುಟ್ಟಿದ್ದಕ್ಕೊಂದು ಸಾರ್ಥಕ್ಯ...' ಎಂದು ಹೇಳಿದ್ದಾರೆ. ಈ ಮಾತು ರಾಜಗೋಪಾಲರಿಗೆ ಯೋಗ್ಯವಾಗಿ ಅನ್ವಯಿಸುತ್ತದೆ. ಅವರು ಹೆಚ್ಚಿನ ಋಣವನ್ನು ಸಮಾಜಕ್ಕೆ ಹಿಂದಕ್ಕೆ ಸಲ್ಲಿಸಿದ್ದಾರೆಂಬುದಂತೂ ಸತ್ಯದ ಮಾತು! ಹೌದು, ಕಿಂದರ ಜೋಗಿಯಂತೆ, ರಾಜಗೋಪಾಲ್, ಅಮೆರಿಕದ



ಸಾಹಿತ್ಯಾಸಕ್ತರನ್ನು ಹುರಿದುಂಬಿಸಿ, ಅವರಿಗೆ ಮಾರ್ಗದರ್ಶನ ನೀಡಿದ್ದರು! ಅದಕ್ಕಾಗಿ ನಾವು, ಅಮೆರಿಕನ್ನಡಿಗರೆಲ್ಲ, ಕೃತಜ್ಞತೆಯ ಜೊತೆಗೆ ಹೆಮ್ಮೆಪಡಬೇಕಾದ ವಿಷಯ!

ಚಿಂತಕ, ಲಕ್ಷ್ಮೀಶ ತೋಳ್ಪಾಡಿಯವರು ಹೇಳಿದ ಇನ್ನೊಂದು ಮಾತನ್ನೂ ನಾನಿಲ್ಲಿ ಸ್ಮರಿಸುತ್ತಿದ್ದೇನೆ – 'ಬದುಕೆಂಬ ವೃಕ್ಷ; ಸಾವೆಂಬ ಫಲ.' ಎಂತಹ ಸತ್ಯದ ಮಾತು! ಫಲ ಉದುರಿದಾಗ ಅದರೊಳಗೆ 'ಬದುಕು' ಎಂಬ ವೃಕ್ಷ, ಬೀಜವಾಗಿ ಕುಳಿತಿದ್ದು, ಜೀವನ ಚಕ್ರ ಮುಂದುವರಿಯುತ್ತದೆ! ನಿಜ, ಸಾವೆಂಬ ಪ್ರಕೃತಿ ನಿಯಮವನ್ನು ಒಪ್ಪಿಕೊಂಡರೂ, ನಮ್ಮ ಆತ್ಮೀಯರಲ್ಲೊಬ್ಬರು ಸಾವನ್ನಪ್ಪಿದಾಗ ನಮಗೆ ನೋವುಂಟಾಗುವುದು ಸಹಜ, ಸ್ವಾಭಾವಿಕ! ಆದರೆ, ಅಂಥವರು ನಮ್ಮ ಸ್ಮರಣೆಯಲ್ಲಿ ಜೀವಂತವಾಗಿದ್ದು, 'ಬದುಕು' (ವ್ಯಾಪಕ ಅರ್ಥದಲ್ಲಿ) ಮುಂದುವರೆಯುತ್ತಲೆ ಇರುತ್ತದೆ. ಆ ಮಾತೂ ಸಹ ಸತ್ಯವಾದುದು!

**ವಿ.ಸೂ.:** ಇದೇ ಶೀರ್ಷಿಕೆ ಹೊತ್ತ ಪ್ರಜಾವಾಣಿಯಲ್ಲಿ ಪ್ರಕಟವಾದ ನನ್ನದೊಂದು ಲೇಖನವನ್ನು, ಈ ಲೇಖನ ಬರೆಯುವಲ್ಲಿ ಬಹಳವಾಗಿ ಬಳಸಿಕೊಂಡಿರುತ್ತೇನೆ. ಅಭಿನವ ರವಿಕುಮಾರ್ ಅವರ ಸಲಹೆ ಮತ್ತು ಸಹಾಯವನ್ನು ಕೃತಜ್ಞಾಪೂರ್ವಕವಾಗಿ ನೆನೆಯುತ್ತಿದ್ದೇನೆ.



# ಸನ್ಮಿತ್ರ ರಾಜು

**–ಡಾ. ಎಚ್. ಕೆ. ಚಂದ್ರಶೇಖರ್**

ಕಳೆದ ಶತಮಾನದ ಐವತ್ತರ ದಶಕದ ಮಾತು. ಆಗ ಮೈಸೂರಿನಲ್ಲಿ ನಾನು ಮೆಡಿಕಲ್ ಕಾಲೇಜಿನಲ್ಲಿದ್ದಾಗ ರಾಜು ಆಗ್ಗೆ ಕೆಲವೇ ವರ್ಷಗಳ ಹಿಂದೆ ಆರಂಭವಾಗಿದ್ದ ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಎಂಜಿನಿಯರಿಂಗ್ ವಿದ್ಯಾರ್ಥಿಯಾಗಿದ್ದ. ಆ ದಿನ ಪ್ರಾಯಶಃ ಎಂದಿನಂತೆ, ಬಿಳಿಯ ಪಾಯಿಜಾಮ, ಷರಟು ಧರಿಸಿ ಚಪ್ಪಲಿ ಮೆಟ್ಟಿ ಸೈಕಲ್ ತುಳಿಯುತ್ತ ಬಂದು ನಮ್ಮ ಕಾಲೇಜು ಗೇಟ್ ಎದುರು ನಿಂತ. ಅಸ್ವಸ್ಥರಾಗಿ ಚೆಲುವಾಂಬ ಆಸ್ಪತ್ರೆಗೆ ಸೇರಿದ್ದ ತಾಯಿ ಸರಸ್ವತಿ ಅವರಿಗೆ ಕಾಫಿ ತಂದುಕೊಡಲು ಬಂದಿದ್ದವನು ಆಸ್ಪತ್ರೆಯಿಂದ ಹಿಂತಿರುಗಿ ಕಾಲೇಜು ಕಡೆ ಕಾಲು ಹಾಕಿದ್ದ ನನ್ನನ್ನು ನೋಡಿ ಹಲೋ ಅಂದ. ಪರಸ್ಪರ ಪರಿಚಯ ಮಾಡಿಕೊಂಡೆವು. ಆಗ ನಾವಿಬ್ಬರೂ ಮೈಸೂರಿನಲ್ಲಿ ಪ್ರಸಿದ್ಧರಾಗಿದ್ದ ನಾಟಕದ ಸಂಪತ್ ಅವರ ಶಿಷ್ಯರು ಎಂದು ಮಾತಾಡಿಕೊಂಡೆವು ನಾನು ಪ್ರತಿ ವರ್ಷವೂ ನಮ್ಮ ಕಾಲೇಜಿನ ವಾರ್ಷಿಕ ಹಬ್ಬದಲ್ಲಿ ಸಂಪತ್ ಅವರ ನಿರ್ದೇಶನದಲ್ಲಿ ಆಡುತ್ತಿದ್ದ ಕನ್ನಡ ನಾಟಕದಲ್ಲಿ ಪಾತ್ರವಹಿಸುತ್ತಿದ್ದೆ. ರಾಜು ಅವರ ನಿರ್ದೇಶನದಲ್ಲೇ ಎನ್ ಐ ಇ ಇಂಗ್ಲಿಷ್ ನಾಟಕದಲ್ಲಿ ಪಾತ್ರವಹಿಸುತ್ತಿದ್ದ. ಸಂಪತ್ ನನ್ನೊಂದಿಗೆ ಆ ಮೊದಲೇ ರಾಜುವಿನ ಸ್ಫುಟವಾದ ಇಂಗ್ಲಿಷ್ ಮಾತುಗಾರಿಕೆಯ ವಿಷಯ ಹೇಳಿದ್ದುಂಟು. ಹಾಗಾಗಿ ಆ ದಿನ ರಾಜು ಕಂಡದ್ದು ಸಂತೋಷವಾಯಿತು.



ಇಬ್ಬರೂ ಕೊರವಂಜಿಯ ಭಕ್ತರು ಎಂದೂ ತಿಳಿದು ಪರಮಾನಂದವಾಯಿತು. ಇದು ಕಳೆದ ನಂತರ ಒಂದೆರಡು ಬಾರಿ ಸಂಧಿಸಿದ್ದೆವೆಂದು ನೆನಪು. ನಾನು ಬೆಂಗಳೂರಿಗೆ ವಾಪಸಾಗಿ, ತಂದೆ ಮನೆಯಲ್ಲಿದ್ದು ವಿಕ್ಟೋರಿಯ ಆಸ್ಪತ್ರೆಯಲ್ಲಿ ಕೆಲಸ ಆರಂಭ ಮಾಡಿಕೊಂಡೆ. ರಾಜು ಅದೇ ಸಮಯಕ್ಕೆ ಬೆಂಗಳೂರಿನ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್‌ನಲ್ಲಿ ಹೆಚ್ಚಿನ ಓದಿಗೆ ತೆರಳಿದ್ದ.

ಮುಂದೆ ನಾವು ಸಂಧಿಸಿದ್ದು ಅಮೆರಿಕದಲ್ಲಿಯೇ. ಎಪ್ಪತ್ತರ ದಶಕದ ಆದಿಭಾಗದಲ್ಲಿ ನ್ಯೂ ಯಾರ್ಕ್ ನಗರದಲ್ಲಿ ನಾವು ಕೆಲವು ಗೆಳೆಯರು ಕನ್ನಡ ಕೂಟಕ್ಕೆ ನಾಂದಿ ಹಾಡಿದ್ದೆವು. ಆಗ ಕಾರ್ಯಕ್ರಮಗಳನ್ನು ನಡೆಸುವ ಉತ್ಸಾಹ ಬಲವಾಗಿತ್ತು. ರಾಜು ಮತ್ತು ವಿಮಲ ನಮಗೆ ಕನ್ನಡ ಕವನಗಳ ಹಾಡಿಕೆ ಒದಗಿಸುವುದರಲ್ಲಿ ನೆರವಾದರು. ಬೆಂಗಳೂರಿನಲ್ಲಿ ನಾನಿದ್ದಾಗಲೇ ಖ್ಯಾತ ಸಾಹಿತಿ ಎಲ್. ಗುಂಡಪ್ಪನವರ ಮೂವರು ಹೆಣ್ಣುಮಕ್ಕಳೂ ಎಲ್. ಜಿ. ಸಿಸ್ಟರ್ಸ್ ಎಂಬ ಹೆಸರಿನಲ್ಲಿ ಜಾನಪದ ಗೀತೆಗಳು, ಕನ್ನಡ ಕವಿಗಳು ರಚಿಸಿದ ಕವನಗಳನ್ನು ಹಾಡುತ್ತ ಪ್ರಸಿದ್ಧರಾಗಿದ್ದರು. ಅವರ ಕಾರ್ಯಕ್ರಮ ಪ್ರಕಟವಾದೊಡನೆ, ನಾನು ಸಂಜೆ ಸೇರಿದ್ದ ಜನಸಂದಣಿಯೊಂದಿಗೆ ಗಾಯನ ಕೇಳುತ್ತ ಆನಂದಿಸಿದ್ದುಂಟು.

ವಿಮಲ ಕಂಠ ಬಹು ಮಧುರ – ಈಕೆ ರಾಜುವನ್ನು ಮದುವೆಯಾಗಿ ಅಮೆರಿಕಕ್ಕೆ ಬಂದಿದ್ದರು. ಶ್ರೀದೇವಿ ಮತ್ತು ನಾನು ಪೆನ್ಸಿಲ್ವೇನಿಯದ 'ಮೀಡಿಯ'ದಲ್ಲಿ ವಾಸವಾಗಿದ್ದ ರಾಜು, ವಿಮಲ ಮನೆಗೆ ಹೋಗಿಬರುವ ವಾಡಿಕೆಯಿತ್ತು. ಆಗಲೇ ನನಗೆ ರಾಜು ಸೊಗಸಾಗಿ ಹಾಡುತ್ತಿದ್ದುದು ಗೊತ್ತಾದದ್ದು. ಬೇಂದ್ರೆ, ಅಡಿಗ, ಪುತಿನ ಇತ್ಯಾದಿ ಕವಿಗಳ ರಚನೆಗಳನ್ನು ಇಬ್ಬರೂ ಒಟ್ಟಾಗಿ ಇಂಪಾಗಿ ಹಾಡುತ್ತಿದ್ದರು. ನ್ಯೂಯಾರ್ಕಿನಲ್ಲಿ ನಮ್ಮ ಮನೆಗೆ ಬಂದಾಗೆಲ್ಲ ಅವರಿಂದ ಹಾಡಿಸುತ್ತಿದ್ದುದುಂಟು. ಕನ್ನಡ ಕೂಟಕ್ಕೆ ಕಾರ್ಯಕ್ರಮಗಳನ್ನು ನೀಡಲು ಅವರು ಮೃದಂಗದವರೊಂದಿಗೆ ಹಾಡಲು ಸಿಕ್ಕಿದ್ದು ಕನ್ನಡ ಕೂಟ ನಡೆಸುತ್ತಿದ್ದ ನನಗೆ ಪೂರಾ ಸಂತೋಷವಾಗಿತ್ತು. ನ್ಯೂಯಾರ್ಕಿನಲ್ಲಿ ಪ್ರಥಮ ಈಶಾನ್ಯ ಅಮೆರಿಕ ಕನ್ನಡ ಸಮ್ಮೇಳನ ನಾವು ೧೯೭೭ರಲ್ಲಿ ನಡೆಸಿದಾಗ ರಾಜು ಮತ್ತು ವಿಮಲ ಸೊಗಸಾಗಿ ಹಾಡಿದ್ದರು. ರಾಜುವಿನ ಬಾಯಿಂದ ಕನ್ನಡದ ಉಚ್ಚಾರ ಶುದ್ಧವಾಗಿ ಬರುವುದನ್ನು ಗಮನಿಸಿದ್ದೆ, ಇಬ್ಬರೂ ಒಟ್ಟಿಗೆ ಹಾಡಿದಾಗ ಅದೊಂದು ವಿಶೇಷ ಅನುಭವ ಎನಿಸುತ್ತಿತ್ತು.

ರಾಜು ಮೈಸೂರಿನಲ್ಲಿ ಇದ್ದಾಗ ಅವನ ಮೃದುಸ್ವಭಾವದ ತಂದೆಯವರು ಮಹತ್ತರ ವಾಗ್ಗೇಯಕಾರರೆಂದೂ ಸಂಗೀತಶಾಸ್ತ್ರಪಟು ಎಂದೂ ಸಂಸ್ಕೃತ ಪಂಡಿತರೆಂದೂ ಖ್ಯಾತಿ ಗಳಿಸಿದ್ದುದು ನನಗೆ ತಿಳಿದಿತ್ತು. ಹಾಡಿಕೆಯಲ್ಲೂ ಅವರು ಕುಶಲರಾಗಿದ್ದರು. ರಾಜು ತಾಯಿಯಂತೂ ತುಂಬಾ ಮೆಚ್ಚುಗೆ ಗಳಿಸಿದ ಸಮಾಜ ಸುಧಾರಕಿ. ಮಕ್ಕಳ

ಏಳಿಗೆಗಾಗಿ ಶ್ರಮಿಸುತ್ತ ಮಕ್ಕಳ ಕೂಟ ಸಂಸ್ಥೆಯನ್ನು ನಡೆಸಿದವರು. ಆಕೆ ತುಂಬ ಶಿಸ್ತುಗಾರ್ತಿ. ಮಕ್ಕಳನ್ನು ಬಹು ಶ್ರದ್ಧೆಯಿಂದ ನೋಡಿಕೊಂಡವರು. ರಾಜುವಿನ ಸೋದರ ಸೋದರಿಯರೆಲ್ಲ ಅವರವರ ಕಾರ್ಯಕ್ಷೇತ್ರಗಳಲ್ಲಿ ಹೆಸರಾದವರು. ರಾಜು ಅಕ್ಕ ನೀರಜ ಅಚ್ಯುತರಾವ್ ಉತ್ತಮಮಟ್ಟದ ಕರ್ನಾಟಕ ಸಂಗೀತ ವಿದುಷಿ. ಅಣ್ಣ ಶಾರದಾ ಪ್ರಸಾದರು (ಶೌರಿ) ಭಾಷಾಂತರಿಸಿದ 'ಸ್ವಾಮಿ ಮತ್ತು ಅವನ ಸ್ನೇಹಿತರು' ನನ್ನ ಚಿಕ್ಕವಯಸ್ಸಿನಲ್ಲಿ ಮೆಚ್ಚಿನ ಪುಸ್ತಕವಾಗಿತ್ತು... ಇಂಥ ಭವ್ಯ ಸಾಂಸ್ಕೃತಿಕ ವಾತಾವರಣದಲ್ಲಿ ಬೆಳೆದ ರಾಜುಗೆ ಹಳೆಯ ಮೈಸೂರಿನ ನಯ, ನಾಜೂಕು, ನಡತೆ ಆನುವಂಶಿಕವಾಗಿ ಸಿದ್ಧಿಸಿತ್ತು.

ಎಪ್ಪತ್ತರ ದಶಕದಲ್ಲಿ ರಾಜು ಇಲ್ಲಿನ ಕನ್ನಡ ಮಕ್ಕಳಿಗೆಂದು ಸ್ಥಾಪಿಸಿದ ಇಂಡಸ್ ಸಂಸ್ಥೆಯನ್ನು ಬಹು ಶ್ರದ್ಧೆಯಿಂದ ನಡೆಸುತ್ತಿದ್ದ. ಫಿಲಡೆಲ್ಫಿಯದ ಮ್ಯೂಸಿಯಮಿನಲ್ಲಿ ಕಾರ್ಯಕ್ರಮಗಳನ್ನು ನಡೆಸಿದಾಗ ನಾವು ನ್ಯೂಯಾರ್ಕಿನಿಂದ ಹೋಗಿ ಭಾಗವಹಿಸುತ್ತಿದ್ದೆವು. ಆಗ್ಗೆ ನ್ಯೂಯಾರ್ಕ್ ಕನ್ನಡ ಕೂಟದಲ್ಲಿ ನಾಟಕೋತ್ಸವ ನಡೆಸುತ್ತಿದ್ದುದುಂಟು. ನಾಟಕ ನಿರ್ದೇಶಿಸಿ ಪಾತ್ರವಹಿಸುವ ಗೀಳು ನನ್ನಲ್ಲಿ ಬಲವಾಗಿತ್ತು. ಆಗ ರಾಜು, ವಿಮಲ ತಪ್ಪದೆ ನಾಟಕ ನೋಡಲು ಬರುತ್ತಿದ್ದರು. ಯವುದಾದರೊಂದು ನಾಟಕದಲ್ಲಿ ಇಬ್ಬರೂ ಪಾತ್ರವಹಿಸುವ ಆಸೆ ಕೂಡ ಇತ್ತು. ಅದು ಸಾಧ್ಯವಾಗಲಿಲ್ಲ. ನಮ್ಮ ಕೂಟದ ಜತೆಗೇ ಫಿಲಡೆಲ್ಫಿಯದಲ್ಲಿ ಆರಂಭವಾಗಿದ್ದ ತ್ರಿವೇಣಿ ಕನ್ನಡ ಕೂಟದ ಪ್ರಮುಖ ಸದಸ್ಯನಾಗಿ, ನಂತರದಲ್ಲಿ ಅಧ್ಯಕ್ಷನಾಗಿ ರಾಜು ಕೆಲಸಮಾಡಿದ್ದ.

ಪ್ರಸಿದ್ಧ ಕಾದಂಬರಿಕಾರ ಆರ್. ಕೆ. ನಾರಾಯಣ್ ನ್ಯೂ ಯಾರ್ಕಿಗೆ ಬಂದಾಗಲೆಲ್ಲ, ಅವರ ಪುಸ್ತಕ ಪ್ರಕಾಶಕರು, ಅವರನ್ನು ಗ್ರೆನಿಚ್ ವಿಲೇಜಿನ ಚೆಲ್ಸೀ ಹೋಟೆಲಿನಲ್ಲಿ ಇಳಿಸುತ್ತಿದ್ದರು. ಬಾಯಿ ಕೆಟ್ಟುಹೋಗಿದೆ ಎನ್ನುತ್ತ ನಮ್ಮ ಮನೆಗೆ ಅನ್ನ ಸಾರು ಊಟಮಾಡುವ ಸಲುವಾಗಿ ಬರುತ್ತಿದ್ದುದುಂಟು. ರಾಜು ಸಂಸಾರ ಅವರಿಗೆ ಚೆನ್ನಾಗಿ ಪರಿಚಯವಾಗಿದ್ದಿತು. ನಮ್ಮ ಮನೆಯಲ್ಲಿ ನಾವೆಲ್ಲ ಸೇರಿದಾಗ –ಆಗಿನ್ನೂ ರಾಜು ಮಗ ಶ್ರೀರಾಮಗೆ ಒಂದು ವರ್ಷವೂ ತುಂಬಿರಲಿಲ್ಲ; ರಾಜು ಮಗಳು ಮಾಧವಿಯನ್ನು ನಮ್ಮ ಮಕ್ಕಳು ಸುಜನ ಮತ್ತು ಸುಮನ ಸ್ಮಾರ್ಟ್ ಮಾಧವಿ ಎಂದೇ ಗುರುತಿಸುತ್ತಿದ್ದರು. ಕಿರಿಯ ಚೇತನಾ ಮುದ್ದಾದ ಹುಡುಗಿ. ನಾರಾಯಣ್ ಮಕ್ಕಳನ್ನು ಎತ್ತಿ ಆಡಿಸಿ ಬೇಕಾದಷ್ಟು ಹರಟೆ ಹೊಡೆದಿದ್ದು ನೆನಪಿನಲ್ಲಿ ಹಸುರಾಗಿದೆ.

ಎಂಭತ್ತರ ದಶಕದಲ್ಲಿ ರಾಜುಗೆ ಡ್ರೆಕ್ಸೆಲ್ ಯೂನಿವರ್ಸಿಟಿಯಲ್ಲಿ ಇಂಗ್ಲಿಷ್ ಪ್ರೊಫೆಸರರಾಗಿದ್ದ ಪಿ. ಶ್ರೀನಿವಾಸರಾವ್ ಆಪ್ತ ಸ್ನೇಹಿತರಾಗಿದ್ದರು. ಆತ ಕನ್ನಡದಲ್ಲಿ ಒಳ್ಳೆಯ ಬರಹಗಾರರೂ ಕೂಡ. ಅಡಿಗರ ಕವನ ಸಂಗ್ರಹಕ್ಕೆ ಅಮೂಲ್ಯ ವಿಮರ್ಶಾತ್ಮಕ ಮುನ್ನುಡಿ ಬರೆದಿದ್ದರು. ರಾಯರನ್ನು ಜತೆಮಾಡಿಕೊಂಡು ರಾಜು ಮತ್ತು ನಾವಿಬ್ಬರು ಬರ್ಕ್ಷೈರ್ಸ್‌ನಲ್ಲಿದ್ದ ನಮ್ಮ ಎರಡನೆಯ ಮನೆಯಲ್ಲಿ, ಒಂದು ವಾರಾಂತ್ಯ ಸಾಹಿತ್ಯವನ್ನು



ಕುರಿತು ಅವರನ್ನು ಪ್ರಶ್ನೆ ಮಾಡಿ ಅನೇಕ ವಿಷಯಗಳನ್ನು ತಿಳಿದೆವು. ಅವರಿಗೆ ಹೃದ್ರೋಗವಿದ್ದು ದುರದೃಷ್ಟವಶಾತ್ ಅರವತ್ತು ವರ್ಷಕ್ಕೆ ಮೊದಲೇ ತೀರಿಕೊಂಡರು. ಶ್ರೀನಿವಾಸರಾಯರು ಬರೆದ ಒಂದು ಪುಸ್ತಕದ ಹೆಸರು 'ಪ್ರಸ್ತಾಪ' ಎಂಬ ಹೆಸರನ್ನೇ ಬಳಸಿ ರಾಜು ಪ್ರಸ್ತಾಪ ಎಂಬ ಹೆಸರಿನ ಅನಿಯತಕಾಲಿಕ ಕನ್ನಡ ಕಾರ್ಯಕ್ರಮಗಳನ್ನು ಆರಂಭಿಸಿದ. ಅದು ಇಂದಿಗೂ ನಡೆದುಕೊಂಡು ಬಂದಿದೆ. ಬರಹಗಾರರು, ಕಲಾವಿದರು, ಪಂಡಿತರು ಎಲ್ಲ ವೈಚಾರಿಕ ಪ್ರಸ್ತಾಪದಲ್ಲಿ ಭಾಗವಹಿಸುತ್ತಿದ್ದು ಅದೊಂದು ಉತ್ತಮ ಸಾಹಿತ್ಯ ಸಮಾರಂಭವೆನಿಸಿದೆ.

ರಾಜುವಿನೊಂದಿಗೆ ಕಳೆದ ದಶಕದಲ್ಲಿ ನಾವು ಕೆಲವರು ಕಲೆತು ಸಾಹಿತ್ಯದ ವ್ಯವಸಾಯಕ್ಕೇ ಮೀಸಲಾದ ಕನ್ನಡ ಸಾಹಿತ್ಯ ರಂಗ ಎಂಬ ಸಂಸ್ಥೆಯನ್ನು ೨೦೦೩ರಲ್ಲಿ ಆರಂಭಿಸಿದೆವು. ಈಚೆಗೆ ಕೆಲವು ವರ್ಷಗಳಿಂದ ಇಲ್ಲಿ ವಿಶ್ವ ಕನ್ನಡ ಸಮ್ಮೇಳನಗಳು ನಡೆದು ಬಂದಿವೆ. ಆದರೆ ಕನ್ನಡ ಸಾಹಿತ್ಯಕ್ಕೇ ಮೀಸಲಾದ ಕಾರ್ಯಕ್ರಮಗಳಿಗೆ ಅಲ್ಲಿ ಹೆಚ್ಚು ಪ್ರಾಶಸ್ತ್ಯ ಇಲ್ಲದಿರುವುದನ್ನು ಕಂಡು ಕನ್ನಡ ಸಾಹಿತ್ಯ ರಂಗ ಆರಂಭಿಸಿದ್ದಾಯಿತು. ಮೊದಲಲ್ಲಿ ಕಾರ್ಯ ಸಮಿತಿಯ ಅಧ್ಯಕ್ಷನಾಗಿ ರಾಜು, ಅದರ ಆಡಳಿತ ಸಮಿತಿಯ ಅಧ್ಯಕ್ಷನಾಗಿ ನಾನು ಆರಿಸಿಬಂದೆವು. ಇದೊಂದು ವಿಶಿಷ್ಟ ಸಂಸ್ಥೆ. ಪ್ರತಿ ಎರಡು ವರ್ಷಕ್ಕೊಮ್ಮೆ ಕನ್ನಡ ನಾಡಿನ ಯಾರಾದರೊಬ್ಬ ಗಣ್ಯ ಸಾಹಿತಿಯೊಂದಿಗೆ ಅಧಿವೇಶನ ನಡೆಸಿ ಒಂದು ಉತ್ತಮ ಗ್ರಂಥ ಹೊರತರುವ ಪರಿಪಾಠ ನಡೆದುಬಂದಿದೆ. ಈ ದೇಶದಲ್ಲಿ ಕನ್ನಡವನ್ನು ವೈಭವೀಕರಿಸುವ ಏಕಮಾತ್ರ ಸಂಸ್ಥೆಯಾಗಿ ಜನಮನ್ನಣೆ ಗಳಿಸಿದೆ.

ರಾಜುಗೆ ತನ್ನ ತಂದೆ ತಾಯಿಯರ ಬಗ್ಗೆ ಅಸಾಧಾರಣ ಒಲವು, ಗೌರವ ಇದ್ದದ್ದು ಅವನೊಡನೆ ಹರಟಿದಾಗ ತಿಳಿಯುತ್ತಿತ್ತು. ತಂದೆ ದೊಡ್ಡ ವಾಗ್ಗೇಯಕಾರರಾಗಿ ರಚಿಸಿದ ಅನೇಕ ಕೃತಿಗಳನ್ನು ಮನೆ ಮಕ್ಕಳು ಆರಂಭಿಸಿದ 'ದೇವಗೀತ ಟ್ರಸ್ಟ್' ಎಂಬುದರ ಆಶ್ರಯದಲ್ಲಿ ಎಮ್. ಎಸ್. ಸುಬ್ಬುಲಕ್ಷ್ಮಿಯವರೇ ಹಾಡಿದ್ದರು. ಅದಕ್ಕಾಗಿ ಶ್ರಮಿಸಿದ ರಾಜು ತುಂಬ ಹೆಮ್ಮೆಪಟ್ಟುಕೊಂಡಿದ್ದ. ಅವನ ತಾಯಿಗಂತೂ 'ಹಲವು ಮಕ್ಕಳ ತಾಯಿ' ಎಂಬ ಹೆಸರಿನಲ್ಲಿ ಅಣ್ಣ ಮೋಹನರಾಮ್ ಮತ್ತು ಅಕ್ಕ ನೀರಜ ಅಚ್ಯುತರಾವ್ ಒಂದಿಗೆ ಒಂದು ಅಪೂರ್ವ ಸುಂದರ ಗ್ರಂಥ ಅರ್ಪಿಸಿದ. ಇಂಥ ಪುಸ್ತಕ ನೋಡುವುದೇ ಅಪರೂಪ. ಅದಕ್ಕಾಗಿ ವರ್ಷಗಳೇ ಪ್ರಯತ್ನಪಟ್ಟಿದ್ದ. ಅದರಲ್ಲಿ ತಾಯಿಯ ಬಗ್ಗೆ 'ನೆನಪಿನ ಬೇವು ಬೆಲ್ಲ' ಎಂಬ ಒಂದು ಸುದೀರ್ಘ ಲೇಖನ ಬರೆದ. ಆಕೆಯ ಬಗ್ಗೆ ಭಕ್ತಿ, ವಾತ್ಸಲ್ಯ ತುಂಬಿ ತುಳುಕುತ್ತಿತ್ತು. ೧೯೯೩ರ ಆದಿಭಾಗದಲ್ಲಿ ಬೆಂಗಳೂರಿನಲ್ಲಿ ಅವರೊಂದಿಗೆ ಇದ್ದು ವಾಪಸಾಗಿದ್ದ. ಅದೇ ವರ್ಷ ನಾವೂ ಬೆಂಗಳೂರಿಗೆ ಹೋಗುವದಿದ್ದುದರಿಂದ, ತಾಯಿ ಸರಸ್ವತಮ್ಮನನ್ನು ತಮ್ಮ ಮುಕುಂದನ ಮನೆಯಲ್ಲಿ ನೋಡಿ ಬಾ ಎಂದು ನನ್ನನ್ನು ಕೇಳಿದ್ದ. ನಾನು ಹಾಸಿಗೆ ಹಿಡಿದಿದ್ದ ಅವರನ್ನು ನೋಡಿ ಬಂದಿದ್ದೆ.

ಚೊಕ್ಕ ಮಾತುಗಾರಿಕೆ, ಮಾತಿನಲ್ಲಿ ನವಿರು ಹಾಸ್ಯ, ಬರವಣಿಗೆಯಲ್ಲಿ ಪ್ರಾಮಾಣಿಕ ನಿರೂಪಣೆ ವೈಚಾರಿಕ ಮನೋಭಾವ, ಭಾಷಣ ಮಾಡಿದಾಗ ಸ್ಫುಟವಾಗಿ ವಿಷಯ ನಿರೂಪಣೆ – ಈ ಎಲ್ಲವೂ ಅವನ ಸಂಸ್ಕಾರದ ಮುಖಗಳಾಗಿದ್ದವು. ಅವನಿಗೆ ಮೂಲ ಅಮೆರಿಕನ್ ಇಂಡಿಯನ್ ನಿವಾಸಿಗಳ ಬಗ್ಗೆ ಅನುಕಂಪ ಮತ್ತು ವಿಶೇಷ ಅಭಿಮಾನ ಇತ್ತು. ಒಂದು ಭಾಷಾಂತರಿತ ಕೃತಿ 'ಸೃಷ್ಟಿ, ನಾಲ್ಕು ಜಗತ್ತುಗಳು'– ಈ ಜನಗಳನ್ನು ಕುರಿತು ಪ್ರಕಟಿಸಿದ. ವೈಚಾರಿಕ ಪ್ರಬಂಧಗಳನ್ನೊಳಗೊಂಡ ಕೃತಿ. 'ಗಾಂಧಿ ಯುಗಕ್ಕೆ ಕನ್ನಡಿ' ಎಂಬುದು ಇನ್ನೊಂದು ಗ್ರಂಥ. ಅನೇಕ ವೈಚಾರಿಕ ಬಿಡಿಬರಹಗಳು ವಿವಿಧ ಪ್ರಕಟಣೆಗಳಲ್ಲಿ ಪ್ರಕಾಶಿಸಿದವು. ೨೦೦೭ರಲ್ಲಿ ಕರ್ನಾಟಕ ಸರಕಾರ ಅವನಿಗೆ ರಾಜ್ಯೋತ್ಸವ ಪ್ರಶಸ್ತಿ ನೀಡಿ ಗೌರವಿಸಿತು.

ರಾಜು ಮತ್ತು ನಾನು ಯಾವುದಾದರೂ ಒಳ್ಳೆಯ ಪುಸ್ತಕ ಓದಿ ಫೋನಿನಲ್ಲಿ ಚರ್ಚಿಸುವುದು ಸಾಮಾನ್ಯವಾಗಿತ್ತು. ವಿಶಾಲವಾದ ಓದಿನಿಂದ ಪರಿಪಕ್ವವಾದ ಮನಸ್ಸು, ನಿಸ್ಪೃಹತೆ, ಪ್ರಾಮಾಣಿಕತೆಗೆ ಹೆಸರಾದ ನಡೆವಳಿಕೆ, ವ್ಯಕ್ತಿ–ಸಮಾಜದ ಸಂಬಂಧದಲ್ಲಿ ಸದಾ ಉನ್ನತವಾದ ಕಲ್ಪನೆ ಮತ್ತು ಹಿಡಿದ ಕೆಲಸದಲ್ಲಿ ಅವನು ತೋರಿಸುತ್ತಿದ್ದ ದಕ್ಷತೆ ಎಲ್ಲ ನೆನೆದರೆ ಎಂಥಾ ನಷ್ಟವಾಯಿತು ಎಂದು ಖೇದವಾಗುತ್ತದೆ. ಅಸಮಾಧಾನವಾದಾಗ ಅವನಿಗೆ ಕೋಪ ಬರುತ್ತಿದ್ದುದೂ ಸಹಜ – ಮಿತ್ರವಲಯದಲ್ಲಿ ಕುಚೋದ್ಯ ಸಂಭಾಷಣೆಯಲ್ಲಿ ತೊಡಗಿ ಗಟ್ಟಿಯಾಗಿ ನಗುತ್ತಿದ್ದುದೂ ಸಹಜವೇ.

ರಾಜು ತೀರಿಕೊಂಡ ಹಿಂದಿನ ಸಂಜೆ ಅವನನ್ನು ನೋಡಿ ಬಂದೆವು. ನಮ್ಮ ಪಾಲಿಗೆ ರಾಜು ಇನ್ನು ಇಲ್ಲ ಎನಿಸಿ ಮನಸ್ಸು ಕದಡಿತು.

■

# ಕನ್ನಡ ಸಾಹಿತ್ಯ ಪ್ರೇಮಿ ರಾಜಗೋಪಾಲ್

**–ಗೋಪಾಲ್ ಎಸ್. ಕುಕ್ಕೆ**

ಮೃದುಸ್ವಭಾವದ ಸಹೃದಯಿ, ಸಂಭಾವಿತನೆಂದರೆ ನನ್ನ ಮನಸ್ಸಿನಲ್ಲಿ ಮೂಡಿಬರುವುದು - ನಮ್ಮ ಡಾ. ರಾಜಗೋಪಾಲ್ (ರಾಜು). ಅವರ–ನನ್ನ ಪರಿಚಯವಾದದ್ದು ಸುಮಾರು ೧೯೭೨–೭೩ ರ ಸಮಯ, ನ್ಯೂಯಾರ್ಕ್ ನಗರದಲ್ಲಿ ನೆಲೆಸಿದ್ದ ನನ್ನ ಹೆಂಡತಿ ನಳಿನಿಯ ಅಣ್ಣನವರ ಮನೆಯಲ್ಲಿ. ರಾಜು ಅವರ ಪತ್ನಿ ವಿಮಲ, ಮೂವರು ಮುದ್ದು ಮಕ್ಕಳು, ಮಾಧವಿ, ಚೇತನ, ಮತ್ತು ರಾಮ್ ಕುಟುಂದವರೊಡನೆ ಭೇಟಿ ಮಾಡಿದ್ದು ನನ್ನ ಮನಸ್ಸಿನಲ್ಲಿ ಹಸಿರಾಗಿದೆ. ನಳಿನಿಗೆ ರಾಜು ಮನೆಯವರ ಪರಿಚಯ ಬಹಳ ಹಿಂದಿನದು.

ರಾಜು ವಿನಯವಂತರು, ಹಾಸ್ಯಪ್ರಿಯರು, ಸರಳ ಸ್ವಭಾವದವರು. ಅವರ ಕನ್ನಡ ಪ್ರಜ್ಞೆ ಅವರ ಬರವಣಿಗೆಯಲ್ಲಿ ಎದ್ದು ಕಾಣುತ್ತದೆ. ನನಗೇ ಅರಿಯದ ಹಾಗೆ ಅವರ ಸ್ನೇಹವಾಗಿತ್ತು. ಅವರ ಸವಿನಯ ಮಾತು ಯಾರಿಗಾದರೂ ಆಸಕ್ತಿ ಹುಟ್ಟಿಸುವಂತಿತ್ತು. ನಮ್ಮ ಸಂಸಾರ ನ್ಯೂಯಾರ್ಕ್‌ನಿಂದ ನ್ಯೂಜೆರ್ಸಿಯಲ್ಲಿರುವ ಮನಾಲಪನ್/ಇಂಗ್ಲಿಷ್ ಟೌನ್‌ಗೆ ಹೋದ ನಂತರದಲ್ಲಿ ಅವರ–ನಮ್ಮ ಸ್ನೇಹ ಮತ್ತೂ ಹತ್ತಿರವಾಯ್ತು. ವಾರಾಂತ್ಯಗಳಲ್ಲಿ ನಮ್ಮ ಮನೆಗೆ ಬರುವುದು, ನಾವು ಅವರ ಮೀಡಿಯಾದಲ್ಲಿದ್ದ ಮನೆಗೆ ಹೋಗುವುದು ಹಿತಕರವಾದ ರೂಢಿಯಾಗಿತ್ತು. ರಾಜು–ವಿಮಲ ಸೊಗಸಾಗಿ

ಹಾಡಿ ನಮ್ಮನ್ನು ಖುಷಿಪಡಿಸುತ್ತಿದ್ದರು. ಅದು ಇನ್ನೂ ನನ್ನ ಮನಸ್ಸಿನಲ್ಲಿದೆ. ರಾಜು ಅವರ ಪ್ರಿಯ ಸ್ನೇಹಿತರಾಗಿದ್ದ ದಿವಂಗತ ಪ್ರೊಫೆಸರ್ ಪಿ. ಶ್ರೀನಿವಾಸರಾಯರೊಡನೆ ಎಷ್ಟೋ ಬಾರಿ ನಮ್ಮ ಮನೆಯಲ್ಲಿ ಭೇಟಿಯಾಗುತ್ತಿದ್ದೆವು. ಆ ದಿನಗಳಲ್ಲಿ ಮಾತು ಎಲ್ಲೆಲ್ಲೋ ಹೋಗಿ ಕಡೆಗೆ ನಿಲ್ಲುತ್ತಿದ್ದುದು – ಕನ್ನಡ ಸಾಹಿತ್ಯಕ್ಕೇ ಮೀಸಲಾದ ಒಂದು ಸಂಸ್ಥೆ ಬೇಕು ಅನ್ನುವಲ್ಲಿಗೆ! ಅಂದಿನ ದಿನಗಳಲ್ಲಿ ಸ್ನೇಹಿತರ ಮನೆಯಲ್ಲಿ ಸೇರಿದಾಗ ಆಸ್ಥೆಯಿಂದ, ಹುರುಪಿನಿಂದ, ಅವರವರು ಓದಿ ಆನಂದಿಸಿದ, ಕನ್ನಡ ಸಾಹಿತ್ಯದ ನೆನಪುಗಳ ಮಾಲೆ ಹರಿಯುತ್ತಿತ್ತು. ನಿಜವಾಗಲೂ ಅವು ಸುಖವಾದ ದಿನಗಳು!

ಸುಮಾರು ೮೦ರ ವೇಳೆಗಾಗಲೇ ಈಶಾನ್ಯ ಅಮೆರಿಕ ಪ್ರದೇಶಗಳಲ್ಲಿ ಹಲವಾರು ಕನ್ನಡ ಸಂಘ–ಸಂಸ್ಥೆಗಳು ಪ್ರಾರಂಭವಾಗಿದ್ದವು. ಆದರೆ, ಹಿಂದೆ ಹೇಳಿದ ಹಾಗೆ ಸಾಹಿತ್ಯಕ್ಕೇ ಮೀಸಲಾದ ಒಂದು ಪ್ರತ್ಯೇಕವಾದ ಸಂಸ್ಥೆ ಪ್ರಾರಂಭವಾಗಿರಲಿಲ್ಲ. ಜ್ಞಾನಪೀಠ ಪ್ರಶಸ್ತಿ ವಿಜೇತ ಯು. ಆರ್. ಅನಂತಮೂರ್ತಿಗಳು ಅಮೆರಿಕ ಪ್ರವಾಸದಲ್ಲಿದ್ದಾಗ ರಾಜು–ವಿಮಲ ಅವರ ಮನೆಯಲ್ಲಿ 'ಪ್ರಸ್ತಾಪ' ಎಂಬ ಹೆಸರಿನಲ್ಲಿ, ಸಾಹಿತ್ಯ ಪ್ರೇಮಿ ದಿವಂಗತ ಪ್ರೊ. ಪಿ. ಶ್ರೀನಿವಾಸರಾವ್ ಅವರ ಸ್ಮರಣಾರ್ಥದಲ್ಲಿ, ಮೊಟ್ಟ ಮೊದಲ ಕಾರ್ಯಕ್ರಮ ಅನಂತಮೂರ್ತಿಯವರ ಭಾಷಣದಿಂದ ರಾಜು ಪ್ರಾರಂಭ ಮಾಡಿದರು. ಸಾಹಿತ್ಯಪ್ರಿಯರಿಗೆ, ಅದೊಂದು ಸುಂದರ ಘಳಿಗೆ. ಪ್ರಸ್ತಾಪದ ಮುಖ್ಯ ಉದ್ದೇಶ– ಭಾರತದಿಂದ ಬಂದ ಸಾಹಿತಿಗಳನ್ನು, ಮೇಧಾವಿಗಳನ್ನು, ಹಾಗೂ ಸ್ಥಳೀಯ ವಿದ್ವಾಂಸರನ್ನು ಆಮಂತ್ರಿಸಿ ಸಾಹಿತ್ಯದಲ್ಲಿ ಉಪನ್ಯಾಸವನ್ನೋ ಅಥವಾ ಸಾಹಿತ್ಯದ ವರ್ಕ್ ಶಾಪನ್ನೋ ಮಾಡಿ ಉಪನ್ಯಾಸಕರೊಡನೆ ವಿಚಾರ ವಿನಿಮಯ ಮಾಡುವುದು. ಸುಮಾರು ೭೦ಕ್ಕೂ ಮಿಗಿಲಾಗಿ ಪ್ರಸ್ತಾಪದ ಚಟುವಟಿಕೆಗಳು ನಡೆದು ಬಂದಿವೆ. ರಾಜು ಅವರೇ ಸ್ವತಃ ಆರು ವರ್ಷಗಳ ಕಾಲ ಪ್ರಸ್ತಾಪದ ಕಾರ್ಯಕ್ರಮಗಳನ್ನು ಆಸ್ಥೆಯಿಂದ ನಡೆಸಿದರು. ರಾಜು ಅವರ ಕೋರಿಕೆಯಂತೆ ೨೦೦೬ರಿಂದ ಇಂದಿನವರೆಗೆ ಶ್ರೀ ಶ್ರೀಕಾಂತಬಾಬು ಸೊಗಸಾಗಿ ನಡೆಸಿಕೊಂಡು ಬರುತ್ತಿದ್ದಾರೆ. ಪ್ರಸ್ತಾಪ ಒಂದು ರೀತಿಯಲ್ಲಿ ನಂತರದಲ್ಲಿ ಪ್ರಾರಂಭವಾದ ಕನ್ನಡ ಸಾಹಿತ್ಯ ರಂಗಕ್ಕೆ ಸ್ಪ್ರಿಂಗ್ ಬೋರ್ಡ್ ಆಯಿತು ಎನ್ನಬಹುದು.

ರಾಜು ಅವರ ಪೂಜ್ಯ ತಂದೆ ಎಚ್. ಯೋಗಾನರಸಿಂಹಂ ಹಿರಿಯ ವಾಗ್ಗೇಯಕಾರರು ಹಾಗೂ ಸಂಗೀತದಲ್ಲಿ ಅತಿ ದೊಡ್ಡ ಹೆಸರು ಮಾಡಿದವರು; ಮತ್ತು ಅವರ ತಾಯಿ 'ಮಕ್ಕಳ ಕೂಟ'ವನ್ನು ಮೈಸೂರಿನಲ್ಲಿ ಸ್ಥಾಪಿಸಿದ ಶ್ರೀಮತಿ ಸರಸ್ವತಮ್ಮನವರು. ಸಾಹಿತ್ಯ ಮತ್ತು ಸಂಗೀತದ ಶ್ರೀಮಂತಿಕೆ ಅವರ ಮನೆಯಲ್ಲಿ ಶೋಭಿಸುತ್ತಿತ್ತು, ಈಗಲೂ ಮುಂದುವರೆಯುತ್ತಿದೆ. ಇಂದಿಗೂ ಅವರ ಕುಟುಂಬದ ಹೆಸರುಗಳು ಅಚ್ಚಳಿಯದ ಹಾಗೆ ಉಳಿದಿವೆ. ಒಟ್ಟಿನಲ್ಲಿ ಅವರ ಸಂಸಾರ ನೋಡಿದರೆ ರಾಜುಗೆ ಸೃಷ್ಟಿಶೀಲತೆ ಸಹಜವಾಗಿ ಬಂದಿರಬಹುದು. ಅವರು ಕನ್ನಡಕ್ಕೆ ಕೊಟ್ಟಿರುವ



ಕೊಡುಗೆ ಹೆಚ್ಚಿನ ಗುಣಮಟ್ಟದ್ದು! ಈ ಸಾಹಿತ್ಯ-ಸಂಗೀತದ ಸುಧೆಯಲ್ಲಿ ಮತ್ತೂ ಹೆಚ್ಚಿನ ಸಂಸ್ಕೃತಿಯನ್ನು ಹೆಚ್ಚಿಸಿದವರು ರಾಜು ಪತ್ನಿ ವಿಮಲಾ. ಅವರು ಶಾಸ್ತ್ರೀಯ ಹಾಗೂ ಜನಪದ ಸಂಗೀತದಲ್ಲಿ ನುರಿತವರು. ಹಿರಿಯ ಸಾಹಿತಿ ಡಾ. ಎಲ್. ಗುಂಡಪ್ಪನವರ ಮಗಳು. ಎರಡು ದಿಗ್ಗಜ ಸಂಗೀತ-ಸಾಹಿತ್ಯ ಸಂಸಾರಗಳು ಸೇರಿರುವುದು ವಿರಳ.

ನಾವು ನ್ಯೂಜೆರ್ಸಿಯಲ್ಲಿದ್ದಾಗ ಸುಮಾರು ೨೦೦೩ರಲ್ಲಿ, ಒಂದು ಸಂಜೆ ರಾಜು ಫೋನ್ ಮಾಡಿದರು. ಅದು ರೂಢಿಯಲ್ಲಿದ್ದಿದ್ದರಿಂದ ನಾವಿಬ್ಬರು ಅದೂ-ಇದೂ ಮಾತಾಡುತ್ತಿದ್ದಾಗ – 'ಗೋಪಾಲ್, ನಾವಿಬ್ಬರೂ ಸೆಮಿ-ರಿಟೈರ್ ಆಗಿದೀವಿ, ಈಗ ಸರಿಯಾದ ಸಮಯ, ಏನಂತೀರಾ?' ಅಂದರು. ನಾನು ತಕ್ಷಣ ಕೇಳಿದೆ– 'ಅದು ಏನು ರಾಜು,' ಅಂತ. 'ಸುಮಾರು ೨೦ ವರ್ಷಗಳಿಂದ ಆಗಿಂದಾಗ್ಗೆ ಯೋಚಿಸುತ್ತಿರುವ ಕನ್ನಡಕ್ಕೇ ಮೀಸಲಾದ ಒಂದು ಸಂಸ್ಥೆ ಪ್ರಾರಂಭಿಸುವುದಕ್ಕೆ' ಎಂದು ಹೇಳಿ, ನೀವು ಯೋಚನೆ ಮಾಡಿ ಅಂದರು. ಒಂದು ವಾರದ ನಂತರ ಕರೆ ಮಾಡಿ, 'ನಿಮಗೆ ಏನನ್ನಿಸುತ್ತೆ?' ಅಂತ ನೇರವಾಗಿ ಕೇಳಿದರು. ನಾನು ಹೇಳಿದೆ 'ರಾಜು ಪ್ರಸ್ತಾಪ ಇದೆಯಲ್ಲ, ಮತ್ತೊಂದು ಸಂಸ್ಥೆ ಬೇಕಾ?' ಅಂತ. ರಾಜು ಆ ವೇಳೆಗೆ ತಮ್ಮ ಮನಸ್ಸಿನಲ್ಲಿ ಖಚಿತ ನಿರ್ಧಾರ ಮಾಡಿದ ಹಾಗಿತ್ತು. ಮುಂದುವರೆಸುತ್ತಾ, 'ಗೋಪಾಲ್, ನೀವು ಹಿಂದೆ ಫಿಲಡೆಲ್ಫಿಯಾದಲ್ಲಿ ಸಂಗೀತಕ್ಕೆ ಮೀಸಲಾದ 'ಶೃತಿ' ಸಂಸ್ಥೆಯ ಕಾರ್ಯಕಾರಿ ಸಮಿತಿಗೆ ಬಂದು ಕೆಲಸ ಮಾಡಲು ಕರೆದಾಗ ಸಮಯವಿಲ್ಲ ಮತ್ತು ದೂರ ಅಂತ ತಪ್ಪಿಸಿಕೊಂಡಿರಿ. ಈಗ ನೀವು ನನ್ನ ಹಾಗೆ ರಿಟೈರ್ ಆಗಿದ್ದೀರಿ, ಕನ್ನಡ ಸಾಹಿತ್ಯ ರಂಗಕ್ಕೆ ಕಾರ್ಯದರ್ಶಿ ಆಗಲೇ ಬೇಕು' ಅಂತ ಹೇಳಿ, ನಾನು ಒಪ್ಪಿಕೊಳ್ಳುವವರೆಗೂ ಬಿಡಲಿಲ್ಲ.

ಸುಮಾರು ಒಂಬತ್ತು ವರ್ಷಗಳ ಕಾಲ ರಾಜುವಿನ ನೇತೃತ್ವದಲ್ಲಿ ಕನ್ನಡದ ಬೆಳವಣಿಗೆಗೆ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದ್ದು ನನ್ನ ಭಾಗ್ಯ! ಈ ಸಂಸ್ಥೆಗೆ 'ಕನ್ನಡ ಸಾಹಿತ್ಯ ರಂಗ' (ಕಸಾರಂ) ಎಂದು ಹೆಸರಿಟ್ಟು, ಸಂವಿಧಾನವನ್ನು ರಚಿಸಿದವರು ರಾಜು, ಡಾ. ನಾಗ ಐತಾಳ್, ಡಾ. ಚಂದ್ರಶೇಖರ್, ಶ್ರೀ. ಗುಂಡು ಶಂಕರ್ ಮತ್ತು ನಾನು. 'ಕಸಾರಂ' ಒಂದು 'ನಾನ್ ಪ್ರಾಫಿಟ್' ಸಂಸ್ಥೆಯಾಗಿ ನ್ಯೂಜೆರ್ಸಿ ಸ್ಟೇಟ್‌ನಲ್ಲಿ ನಮ್ಮ ಮನೆಯ ವಿಳಾಸದಲ್ಲಿ ಸಂಸ್ಥೆಯ ಕಛೇರಿ ಪ್ರಾರಂಭವಾಯ್ತು. ರಾಜುವಿನ ಕನಸು ನನಸಾಯ್ತು! ಅವರ ಉತ್ಸಾಹಕ್ಕೆ, ಸಂತೋಷಕ್ಕೆ ಮಿತಿಯೇ ಇಲ್ಲವೇನೋ ಅಂತ ನನಗನ್ನಿಸುತ್ತಿತ್ತು. ಒಂದು ಬಹು ಮುಖ್ಯವಾದ ಸಾಹಿತ್ಯ ಸಂಸ್ಥೆಗೆ ಅಸ್ತಿತ್ವ ಕೊಟ್ಟು, ತಳಹದಿ ಹಾಕಿ, ಕನ್ನಡ ಸಾಹಿತ್ಯ ರಂಗದ ಉದ್ದೇಶಗಳನ್ನು ರೂಪಿಸಿ, ಕಾರ್ಯಕ್ರಮಗಳ ಮಾದರಿಯನ್ನು ತಯಾರಿಸಿ, ಕಾರ್ಯಸೂಚಿಗಳನ್ನು ರಚಿಸಿ ಪ್ರಾರಂಭೋತ್ಸವ ಮಾಡುವುದಕ್ಕೆ ಒಂದು ವರ್ಷ ಕಾಲ ಬೇಕಾಯಿತು.

ಕನ್ನಡ ಸಾಹಿತ್ಯ ರಂಗದ ಪ್ರಾರಂಭೋತ್ಸವ ೨೦೦೪ರಲ್ಲಿ ವಿಲನೋವ ಯೂನಿವರ್ಸಿಟಿ ಕ್ಯಾಂಪಸ್ನಲ್ಲಿ 'ವಸಂತೋತ್ಸವ' ಹೆಸರಿನಲ್ಲಿ ವಿಜೃಂಭಣೆಯಿಂದ ಜರುಗಿತು. ಕೇವಲ ೨೬ ಸದಸ್ಯತ್ವದಿಂದ ಶುರುವಾದ ಸಾಹಿತ್ಯ ರಂಗ ಇಂದು ೨೦೦ಕ್ಕೂ ಹೆಚ್ಚು ಸದಸ್ಯರ ಸಂಸ್ಥೆಯಾಗಿ ಬೆಳೆದಿದೆ. ಸಾಹಿತ್ಯ ರಂಗದ ಕಾರ್ಯಕ್ರಮ ಸರಣಿಯಲ್ಲಿ ಸುಮಾರು ಹತ್ತು ಪುಸ್ತಕಗಳನ್ನು ಪ್ರಕಟಿಸಿದೆ. ಅನಿವಾಸಿ ಕನ್ನಡ ಸಾಹಿತ್ಯಾಸಕ್ತರ ಮನ ಮುಟ್ಟಿದೆ. ಕರ್ನಾಟಕದಲ್ಲಿನ ಕನ್ನಡ ಸಾಹಿತ್ಯದ ಒಲವಿದ್ದವರಿಗೆ ಕನ್ನಡ ಸಾಹಿತ್ಯ ರಂಗದ ಸವಿ ತಲುಪಿದೆ. ಕನ್ನಡದೊಲವನ್ನು ಎಬ್ಬಿಸಿದೆ, ಎಚ್ಚರಿಸಿದೆ. ರಾಜು ಅವರ ಕನ್ನಡ ಸಾಹಿತ್ಯದ ದಾರ್ಶನಿಕ ದೃಷ್ಟಿ-ಸ್ಪಷ್ಟತೆ ಎದ್ದು ಕಾಣುತ್ತದೆ. ರಾಜುವಿನ ದೂರದೃಷ್ಟಿ ಅತ್ಯಂತ ಶ್ಲಾಘನೀಯವಾದದ್ದು – ಅವರ ಆಸೆಯ ಚಿಗುರು ಹೆಮ್ಮರವಾಗಿ ಬೆಳೆದಿದೆ. ಅವರ ನಂತರದಲ್ಲಿ ಪ್ರಸ್ತುತ ಆಡಳಿತ ಸಮಿತಿಯಲ್ಲಿರುವ ಛೇರ್ಮನ್ ಡಾ. ನಾಗ ಐತಾಳರು ಮತ್ತು ಡಾ. ಮೈ. ಶ್ರೀ. ನಟರಾಜ್ ಅವರ ಅಧ್ಯಕ್ಷತೆಯಲ್ಲಿ ಸಫಲವಾಗಿ ಮುಂದುವರೆಸುತ್ತಿದ್ದಾರೆ.

ವೈಯಕ್ತಿಕವಾಗಿ ಅವರ ನಮ್ಮ ಆತ್ಮೀಯ ಸಂಬಂಧದ ಕರೆಗೆ ಓಗೊಟ್ಟು ನಮ್ಮ ಮಗಳು ಸಹನಾಳ ನೃತ್ಯ ರಂಗಪ್ರವೇಶದಲ್ಲಿ ಖ್ಯಾತ ಕವಿ ಪು. ತಿ. ನರಸಿಂಹಾಚಾರ್ಯರು ರಚಿಸಿದ 'ಶ್ರೀರಾಮ ಪಟ್ಟಾಭಿಷೇಕ' ದಿಂದ ಆರಿಸಿದ ನೃತ್ಯ ರೂಪಕಕ್ಕೆ ರಾಜು ಶ್ರೀರಾಮನ ಪಾತ್ರದ ಸಾಲುಗಳನ್ನು ಸೊಗಸಾಗಿ ಹಾಡಿದ್ದರು.

ರಾಜು ಸಂಗೀತ-ಸಾಹಿತ್ಯ ಪ್ರಿಯರಷ್ಟೇ ಅಲ್ಲ, ಪಾಕಶಾಸ್ತ್ರ ಪ್ರಿಯರೂ ಸಹ ಆಗಿದ್ದರು! ಅವರು ರುಚಿಯಾಗಿ ಸಾರು, ಚಿತ್ರಾನ್ನ ಹೀಗೆ ಹಲವಾರು ಅಡಿಗೆಗಳನ್ನು ಆಸ್ಥೆಯಿಂದ ಮಾಡುತ್ತಿದ್ದರು. ಸುಶ್ರಾವ್ಯವಾಗಿ ಹಾಡುತ್ತಿದ್ದರು, ಕೆಲವೊಮ್ಮೆ ಹಾಡಲು ಸ್ವಲ್ಪ ಹಿಂಜರಿಯುತ್ತಿದ್ದರು – ಪತ್ನಿ ವಿಮಲಾ ಅವರು ಪ್ರೋತ್ಸಾಹದಿಂದ ಅವರೊಡನೆ ಹಾಡುತ್ತಿದ್ದರು.

ನನ್ನ ಅವರ ಒಂಬತ್ತು ವರ್ಷಗಳ ಕಸಾರಂ ಸಂಸ್ಥೆಯ ಒಡನಾಟದಲ್ಲಿ ರಾಜುವಿನ ಸ್ನೇಹ ಹತ್ತಿರವಾಗಿತ್ತು. ರಾಜುವಿನ ಸಾಹಿತ್ಯದ ಬೆಳವಣಿಗೆಯಲ್ಲಿದ್ದ ಕಾಳಜಿ, ಹಗಲು-ರಾತ್ರಿ ಕೆಲಸ ಮಾಡುವ ಉತ್ಸಾಹ, ಜೊತೆಗೆ ಅವರ ತಿಳಿ ಹಾಸ್ಯ ಪ್ರವೃತ್ತಿ ನನಗೆ ಇಷ್ಟವಾಗುತ್ತಿತ್ತು. ಅವರ ನೆನಪು ಕನ್ನಡ ಸಾಹಿತ್ಯ ಕ್ಷೇತ್ರದ ಜ್ಯೋತಿಯಾಗಿರಲೆಂದು ಆಶಿಸುತ್ತೇನೆ. ಕನ್ನಡ ಸಾಹಿತ್ಯ ರಂಗವೇ ರಾಜುವಿನ ಉಸಿರು – ಎಂದು ನನ್ನ ಅನಿಸಿಕೆ.

■

# ಕನ್ನಡದ ನೆಂಟು - ನೆನಪುಗಳ ಗಂಟು

–ಡಾ. ಮೈ. ಶ್ರೀ. ನಟರಾಜ

ಉನ್ನತ ವ್ಯಾಸಂಗಕ್ಕೆಂದು ಭಾರತವನ್ನು ಬಿಡುವ ಕೆಲದಿನಗಳ ಮುನ್ನ, ಮುಂಬೈನಲ್ಲಿ ಮೈಸೂರ್ ಅಸೋಸಿಯೇಶನ್ ಮಿತ್ರರನ್ನು ಭೇಟಿ ಮಾಡಲು ಹೋಗಿದ್ದೆ. ಆಗ, ಅವರಲ್ಲಿ ಕೆಲವರು ಅಮೆರಿಕಕ್ಕೆ ವಿದ್ಯಾಭ್ಯಾಸಕ್ಕಾಗಿ ಹೋಗಿದ್ದ ತಮಗೆ ತಿಳಿದಿದ್ದವರ ಹೆಸರು ವಿಳಾಸಗಳನ್ನು ಕೊಟ್ಟಿದ್ದನ್ನು ನೋಟ್ ಬುಕ್ಕಿನಲ್ಲಿ ಬರೆದುಕೊಂಡಿದ್ದೆ. ಆ ದಿನಗಳಲ್ಲಿ, ನಮ್ಮ ಕಲ್ಪನೆಯಲ್ಲಿ ಇಡೀ ಅಮೆರಿಕ ಒಂದೂರು; ನಾನು ನ್ಯೂಯಾರ್ಕಿನಲ್ಲಿ ಬಂದಿಳಿದು ಫೋನ್ ಮಾಡಿಬಿಟ್ಟರೆ, ಬಾಸ್ಟನ್ ನಗರದಲ್ಲಿದ್ದವರು ಬಂದು ನನ್ನನ್ನು ಏರ್ಪೋರ್ಟಿನಲ್ಲಿ ಬಂದು ಇಳಿಸಿಕೊಳ್ಳುತ್ತಾರೆ ಎಂಬ ಭ್ರಾಂತಿ! ಇರಲಿ, ಬೇಕಾಗಬಹುದು ಎಂದು ಹಲವಾರು ವಿಳಾಸಗಳನ್ನು ಬರೆದುಕೊಂಡಿದ್ದೆ, ಆ ಪಟ್ಟಿಯಲ್ಲಿದ್ದ ಯಾರನ್ನೂ ನಾನು ಆಗಿನವರೆಗೆ ನೋಡಿರಲಿಲ್ಲ, ಅವರ ಬಗ್ಗೆ ಕೇಳಿ ಸಹ ಇರಲಿಲ್ಲ. ಪಿಟ್ಸ್‌ಬರ್ಗ್ ವಿಶ್ವವಿದ್ಯಾಲಯದಲ್ಲಿ ಒಂದು ಸೆಮೆಸ್ಟರ್ ಕಳೆದು ಕ್ರಿಸ್ಮಸ್ ರಜೆ ಬಂದಾಗ, ನಾನೂ ನನ್ನ ಗೆಳೆಯನೂ ನಮ್ಮಣ್ಣನ ಸಹಪಾಠಿಯಾಗಿದ್ದ, ಡಾ. ನರಹರಿ ಆಚಾರ್ ಎಂಬುವರನ್ನು ಭೇಟಿ ಮಾಡಲು ಪೆನ್ಸಿಲ್ವೇನಿಯಾ ಸ್ಟೇಟ್ ಯೂನಿವರ್ಸಿಟಿ ಇರುವ ಸ್ಟೇಟ್ ಕಾಲೇಜ್ ಎಂಬ ಊರಿಗೆ ಬಸ್ಸಿನಲ್ಲಿ ಹೋದೆವು. ದಾರಿ ಉದ್ದಕ್ಕೂ ಹಿಮಪಾತ, ಹಾಗಾಗಿ

ಪ್ರಯಾಣ ನಿಧಾನವಾಗೇ ಸಾಗಿತ್ತು. ಇದು ಸುಮಾರು ಐವತ್ತು ವರ್ಷಗಳ ಹಿಂದಿನ ಮಾತು!

ನರಹರಿ ಅವರ ಮಿತ್ರರ ವೃಂದ ಅವರ ಮನೆಯಲ್ಲಿ ಸೇರಿತ್ತು, ಅವರ ಪೈಕಿ ಎಚ್. ವೈ. (ಹೊಳೇನರಸೀಪುರ ಯೋಗನರಸಿಂಹಂ) ರಾಜಗೋಪಾಲ್, ಅವರ ಧರ್ಮಪತ್ನಿ ವಿಮಲಾ ಮತ್ತು ಮೂರು ವರ್ಷದ ಮಗು ಮಾಧವಿ ಸಹ ಇದ್ದರು. ನನ್ನ ಕಿಸೆಯಲ್ಲೇ ಇದ್ದ ನೋಟ್ ಬುಕ್ ತೆಗೆದು ನೋಡುತ್ತೇನೆ, ರಾಜಗೋಪಾಲ್ ವಿಳಾಸ ಸಹ ಅಲ್ಲಿದೆ! ಅವರ ಊರು ಹೊಳೇನರಸೀಪುರ ಅಂದ ಕೂಡಲೇ ನನಗೆ ಅವರ ಮೇಲೆ ಎಲ್ಲಿಲ್ಲದ ಪ್ರೀತಿ ಉಕ್ಕಿತು, ಏಕೆಂದರೆ ನಾನು ಹಾಸನದವ, ನರಸೀಪುರ ನಮ್ಮ ಜಿಲ್ಲೆಯ ಊರು. ಮಾತು ಆಡುತ್ತ ಆಡುತ್ತ ತಿಳಿಯಿತು, ಅವರ ಹಿರೀಕರ ಊರು ನರಸೀಪುರವಾದರೂ ಅವರು ಮೈಸೂರಿನವರು ಎಂದು. ನಾನು ಮೈಸೂರು ಶ್ರೀನಿವಾಸ ನಟರಾಜ (ಆದರೂ ಮೈಸೂರಿನಲ್ಲಿ ಯಾವತ್ತೂ ಇರಲಿಲ್ಲ!) ಎಂದು (ಬ್ರ್ಯಾಕೆಟ್ಟಿನೊಳಗೇ) ಸಮಾಧಾನಮಾಡಿಕೊಳ್ಳುತ್ತ, ಅವರ ಮೇಲೆ ಉಕ್ಕಿದ್ದ ಪ್ರೀತಿಯನ್ನು ಹಾಗೇ ಉಳಿಸಿಕೊಂಡೆ! ವಿಮಲಾ ಅವರು ಹಿರಿಯ ಕನ್ನಡ ಲೇಖಕ ಮತ್ತು ಪ್ರಸಿದ್ಧ ಪ್ರಾಧ್ಯಾಪಕ ಎಲ್. ಗುಂಡಪ್ಪನವರ ಮಗಳು ಎಂದು ತಿಳಿದು ಅವರು ಮತ್ತಷ್ಟು ಹತ್ತಿರದವರು ಎನಿಸಿತ್ತು; ಅದಕ್ಕೆ ಮತ್ತೊಂದು ಕಾರಣವೂ ಇತ್ತು, ಗುಂಡಪ್ಪನವರ ಸೋದರ ಪ್ರಸಿದ್ಧ ಜಾನಪದ ಸಾಹಿತ್ಯದ ಸಂಶೋಧಕ ಮತಿಘಟ್ಟ ಕೃಷ್ಣಮೂರ್ತಿ ಹಾಸನದಲ್ಲಿದ್ದರು, ಮತ್ತು ಅವರ ಮಗಳು ನನ್ನ ಸಹಪಾಠಿಯೂ ಆಗಿದ್ದಳು.

ಮಾರನೆಯ ದಿನ ನರಹರಿ ಮತ್ತು ರಾಜಗೋಪಾಲ್ ಕುಟುಂಬ ಕೆನಡ ಕಡೆಗೆ ಹೊರಡುವವರಿದ್ದರು. ನಾನೂ ಸಹ ಅದೇ ದಿಕ್ಕಿನಲ್ಲಿ ನ್ಯೂಯಾರ್ಕ್ ರಾಜ್ಯದ ಜೇಮ್ಸ್ ಟೌನ್ ಎಂಬ ಊರಿಗೆ ನನ್ನ ಮತ್ತೊಬ್ಬ ಹಿರಿಯ ಮಿತ್ರ, ಮತ್ತೂರು ಬಾಲಕೃಷ್ಣ ಅವರ ಮನೆಗೆ ಹೊರಟಿದ್ದೆನಾಗಿ, ಅವರೊಂದಿಗೆ ಪಯಣಿಸುವ ಇಚ್ಛೆಯನ್ನು ವ್ಯಕ್ತಪಡಿಸಿದೆ. ಅಂದು ಭೂಮಿಯ ಮೇಲೆ ಒಂದು ಅಡಿಗಿಂತ ಹೆಚ್ಚು ಹಿಮಪಾತವಾಗಿತ್ತು. ನರಹರಿ ಅವರ ಕಾರಿನಲ್ಲಿ ಜೇಮ್ಸ್ ಟೌನ್ ತಲುಪಲು ಹಲವಾರು ಘಂಟೆಗಳ ಪಯಣ. ಕನ್ನಡದಲ್ಲಿ ಸರಿಯಾಗಿ ಮಾತಾಡದೇ ನಾಲ್ಕು ತಿಂಗಳೇ ಕಳೆದಿತ್ತು, ಇಡೀ ಕಾರಿನ ತುಂಬ ಕನ್ನಡ. ರಾಜಗೋಪಾಲ್ ದಂಪತಿ ಸಾಹಿತ್ಯ ಮತ್ತು ಸಂಗೀತಪ್ರಿಯರು. ನನಗೂ ಅದೇ ಗೀಳು, ಸರಿ, ನಾನ್-ಸ್ಟಾಪ್ ಮಾತು ಸಾಗಿತ್ತು. ಅದೇ ತಾನೆ ಪ್ರಕಟವಾಗಿ ಸಾಕಷ್ಟು ಸುದ್ದಿ ಮಾಡಿದ್ದ ಯು. ಆರ್. ಅನಂತಮೂರ್ತಿಗಳ ಸಂಸ್ಕಾರದ ಚರ್ಚೆ ಶುರುವಾಯಿತು. ಅವರು ನಮ್ಮ ಮೇಷ್ಟ್ರು ಬೇರೆ ಎಂಬ ಅಭಿಮಾನ, ಅದನ್ನು ವ್ಯಕ್ತಪಡಿಸಲು ಅವಕಾಶ ಸಿಕ್ಕಿತಲ್ಲಾ ಎಂಬ ಹಿಗ್ಗು, ನನಗೆ ಬ್ರೇಕ್ ಹಾಕುವವರು ಯಾರೂ ಇದ್ದಂತಿರಲಿಲ್ಲ! ವಿಮಲಾ ಸಹ ಮಾತಿನ ಪೈಕಿಯವರೇ. ಚಕಮಕಿ ಜೋರಾಗಿತ್ತೆಂದೇ ನನ್ನ ನೆನಪು.



ವಿಮಲಾ ಇಂಗ್ಲಿಷ್ ಲಿಟರೇಚರ್ ಓದಿಕೊಂಡವರು, ಅದನ್ನು ನಾನು ಲೆಕ್ಕಕ್ಕೆ ತೆಗೆದುಕೊಳ್ಳದೇ ಭಾಷಣ ಹೊಡೆಯುತ್ತಿದ್ದೆ. ಮಧ್ಯೆ ಮಧ್ಯೆ ರಾಜಗೋಪಾಲ್ ಹಿತವಾದ, ಮಿತವಾದ, ಘನವಾದ, ಕೆಲವೇ ಮಾತುಗಳನ್ನಾಡುತ್ತಿದ್ದರು. ಪುಟ್ಟ ಮಗು ಮಾಧವಿ ತನ್ನ ಬೇಬಿ–ಟಾಕ್‌ನಿಂದ ಎಲ್ಲರನ್ನೂ ಖುಷಿಪಡಿಸುತ್ತಿದ್ದಳು. ಮಧ್ಯ ವಿರಾಮದ ನಂತರ ಕರ್ನಾಟಕ ಸಂಗೀತದತ್ತ ಹೊರಳಿತು ನಮ್ಮ ಚರ್ಚೆ. ಬಾಲಮುರಳಿಯವರನ್ನು ನಾನು ಅಗಾಧವಾಗಿ ಮೆಚ್ಚುತ್ತಿದ್ದ ಕಾಲವದು. ವಿಜಯವಾಡದಲ್ಲಿ ಆಕಾಶವಾಣಿಯಲ್ಲಿ ಕೆಲಸಮಾಡಿದ್ದ ವಿಮಲಾ, ಅವರನ್ನು ಹತ್ತಿರದಿಂದ ಬಲ್ಲವರಾಗಿದ್ದರು, ಅವರ ಶಿಷ್ಯೆ (ಹೀಗೆಂದು ವಿಮಲಾ ಅವರೇ ಹೇಳಿದ್ದರೆಂದು ನನ್ನ ನೆನಪು?) ಶ್ರೀರಂಗಂ ಗೋಪಾಲರತ್ನಂ ವಿಜಯವಾಡದಲ್ಲೇ ಇದ್ದರಂತೆ. ಸರಿ ದಾರಿ ಸವೆದಿದ್ದೇ ಗೊತ್ತಾಗಲಿಲ್ಲ. ನನಗಿಂತ ಸುಮಾರು ಏಳೆಂಟು ವರ್ಷ ಸೀನಿಯರ್ ಆಗಿದ್ದ ರಾಜಗೋಪಾಲ್, ಮೈಸೂರಿನ ಎನ್‌ಐಇನಲ್ಲಿ ಸಿವಿಲ್ ಇಂಜಿನಿಯರಿಂಗ್ ಮತ್ತು ಐಐಎಸ್ಸಿಯಲ್ಲಿ ಎಮ್.ಇ. ಮುಗಿಸಿ ಹಲವು ವರ್ಷ ಭಾರತದಲ್ಲಿ ಸೇವೆ ಸಲ್ಲಿಸಿ ಪಿಎಚ್.ಡಿ. ಪಡೆಯಲು ಅಮೆರಿಕಕ್ಕೆ ಬಂದು, ಪೆನ್ ಸ್ಟೇಟ್‌ನಲ್ಲಿ ತಮ್ಮ ವ್ಯಾಸಂಗದ ಕೊನೆಯ ಹಂತವನ್ನು ತಲುಪಿದ್ದರು. ನಾನು ಬೆಂಗಳೂರಿನ ಯುಸಿಇ (ಇಂದು ಯುವಿಸಿಇ) ಮತ್ತು ಮುಂಬೈ ಐಐಟಿಯಲ್ಲಿ ಸಿವಿಲ್ ಇಂಜಿನಿಯರಿಂಗ್ ಎಂಟೆಕ್ ಮುಗಿಸಿ ಪಿಟ್ಸ್‌ಬರ್ಗ್‌ನಲ್ಲಿ ಅದೇ ತಾನೇ ನನ್ನ ಪಿಎಚ್ಡಿ ವ್ಯಾಸಂಗ ಪ್ರಾರಂಭಿಸಿದ್ದೆ. ನಮ್ಮಿಬ್ಬರಲ್ಲಿ ಸಾಕಷ್ಟು ಸಾಮ್ಯಗಳಿದ್ದವು ಎಂಬುದು ನಮ್ಮ ಮೊದಲ ಭೇಟಿಯಲ್ಲೇ ನನಗೆ ಖಾತ್ರಿಯಾಯಿತು.

ಮುಂದಿನ ಸುಮಾರು ಐದಾರು ವರ್ಷಗಳು ನಮ್ಮ ಸಂಪರ್ಕ ಕಡಿದೇ ಹೋಯಿತೆನ್ನಬಹುದು. ೧೯೭೩ರಲ್ಲಿ ಪಿಎಚ್.ಡಿ. ಮುಗಿಸಿದ ನಂತರ ನಾನು ಡೇಮ್ಸ್ ಎಂಡ್ ಮೂರ್ ಎಂಬ ಖಾಸಗೀ ಕಂಪನಿಯಲ್ಲಿ ನನ್ನ ಮೊದಲ ಕೆಲಸಕ್ಕಾಗಿ ನ್ಯೂ ಜೆರ್ಸಿ ಸೇರಿದಾಗ ರಾಜಗೋಪಾಲ್ ಪೆನ್ಸಿಲ್ವೇನಿಯಾದ ಫಿಲಡೆಲ್ಫಿಯಾ ನಗರದ ಬಳಿ ಯುನೈಟೆಡ್ ಇಂಜಿನಿಯರ್ಸ್ ಎಂಬ ಖಾಸಗೀ ಕಂಪನಿಯಲ್ಲಿ ದುಡಿಯುತ್ತಿದ್ದರು. ಡೆಲವೇರ್ ಪ್ರಾಂತ್ಯದಲ್ಲಿ ಕಟ್ಟಬೇಕಿದ್ದ ಅಣುಶಕ್ತಿ ಸ್ಥಾವರದ ಮೊದಲ ಎರಡು ಘಟಕಗಳಿಗೆ ತಳಪಾಯದ ವಿನ್ಯಾಸವನ್ನು ನಮ್ಮ ಕಂಪನಿಗೆ ವಹಿಸಲಾಗಿತ್ತು. ರಾಜಗೋಪಾಲ್ ಕೆಲಸ ಮಾಡುತ್ತಿದ್ದ ಯುನೈಟೆಡ್ ಇಂಜಿನಿಯರ್ಸ್ ಕಂಪನಿ ಮಿಕ್ಕ ವಿನ್ಯಾಸಗಳ ಕಾಂಟ್ರ್ಯಾಕ್ಟ್ ಪಡೆದಿತ್ತು. ರಾಜಗೋಪಾಲ್ ಅವರು ಸ್ಥಾವರದ ಸುತ್ತಮುತ್ತಲ ಅಂತರ್ಜಲದ ಕುರಿತು ಪಂಪಿಂಗ್ ಟೆಸ್ಟ್ ಮುಂತಾದ ಕ್ಷೇತ್ರ ಕಾರ್ಯದಲ್ಲಿ ತೊಡಗಿದ್ದಾಗ, ನಾನು ಸ್ಥಾವರದ ತಳಪಾಯದಡಿಯಲ್ಲಿ ಆಗಬಹುದಾದ ಬದಲಾವಣೆಗಳನ್ನು ಅಧ್ಯಯನ ಮಾಡಲು ಬೇಕಾದ ಉಪಕರಣಗಳನ್ನು ವಿವಿಧ ಆಳಗಳಲ್ಲಿ ಹೂತಿಡುವ ಜಿಯೋಟೆಕ್ನಿಕಲ್ ಇನ್ಸ್ಟ್ರುಮೆಂಟೇಷನ್ ವಿನ್ಯಾಸದ ಮುಖ್ಯಸ್ಥನಾಗಿದ್ದೆ. ಹಾಗಾಗಿ, ನಾವಿಬ್ಬರೂ ಫೀಲ್ಡ್

ವರ್ಕ್ ಸಂಬಂಧದಲ್ಲಿ ಡೆಲವೇರಿನಲ್ಲಿ ಸಂಧಿಸುತ್ತಿದ್ದುದೂ ಉಂಟು. ನಂತರ ಅವರು ವಿಲನೋವ ವಿವಿಯಲ್ಲಿ ಪ್ರಾಧ್ಯಾಪಕರಾಗಿ ಹುದ್ದೆ ಬದಲಾಯಿಸಿಕೊಂಡರು, ನಾನು ನನ್ನ ಕಂಪನಿಯಲ್ಲೇ ವರ್ಗವಾಗಿ ೧೯೭೭ರಲ್ಲಿ ರಾಷ್ಟ್ರದ ರಾಜಧಾನಿಯಾದ ವಾಷಿಂಗ್ಟನ್ನಿಗೆ ಹೊರಟೆ.

ಮೊಟ್ಟ ಮೊದಲ ಈಶಾನ್ಯ ಅಮೆರಿಕಾ ಕನ್ನಡ ಸಮ್ಮೇಳನ ನ್ಯೂ ಯಾರ್ಕ್ ನಗರದ ಕನ್ನಡ ಕೂಟದ ಆಶ್ರಯದಲ್ಲಿ ನಡೆದಾಗ ಪ್ರಾರಂಭವಾದ ನಮ್ಮ ಸಾಹಿತ್ಯಿಕ ನಂಟು ಅವರು ಕೊನೆಯುಸಿರು ಎಳೆಯುವತನಕ ಮುಂದುವರೆಯಿತು. ನಾವು ನ್ಯೂ ಯಾರ್ಕ್ ಕನ್ನಡ ಕೂಟದ ಸಮಾರಂಭಗಳಲ್ಲಿ ಆಗಾಗ್ಗೆ ಭೇಟಿಯಾಗುತ್ತಿದ್ದೆವು. ಮುಂದಿನ ಎಂಟು ಹತ್ತು ವರ್ಷಗಳಲ್ಲಿ ನಾನು ಆಗಾಗ್ಗೆ ಬರೆಯುತ್ತಿದ್ದ ಕವನ, ಕಥೆ ಮತ್ತು ನಾಟಕಗಳ ಬಗ್ಗೆ ರಾಜಗೋಪಾಲ್ ತಮ್ಮ ಮೆಚ್ಚುಗೆ ವ್ಯಕ್ತಪಡಿಸುತ್ತಿದ್ದರು. ನನ್ನ ನಾಟಕಗಳು ನ್ಯೂ ಯಾರ್ಕ್, ನ್ಯೂ ಜೆರ್ಸಿ, ಬಾಸ್ಟನ್, ವಾಷಿಂಗ್ಟನ್ ಮೊದಲಾದ ನಗರಗಳಲ್ಲಿ ಪ್ರದರ್ಶನಗೊಂಡಾಗ ಅವರು ನಾಟಕಗಳ ಬಗ್ಗೆ ಅಭಿಪ್ರಾಯ ವ್ಯಕ್ತಪಡಿಸಿ ಹಲವು ಸಲಹೆಗಳನ್ನೂ ಕೊಡುತ್ತಿದ್ದರು. ದಿವಂಗತ ಹರಿಹರೇಶ್ವರರು ಪ್ರಾರಂಭಿಸಿದ 'ಅಮೆರಿಕನ್ನಡ' ಪತ್ರಿಕೆಗೆ ನಾನು ಬರೆಯುತ್ತಿದ್ದಂತೆ ಅವರೂ ಬರೆಯುತ್ತಿದ್ದರು. ಪರಸ್ಪರ ಲೇಖನಗಳ ಬಗ್ಗೆ ಚರ್ಚಿಸುತ್ತಿದ್ದೆವು. ರಾಜಗೋಪಾಲ್ ಅವರದ್ದು ಕನ್ನಡ ಗದ್ಯದಲ್ಲಿ ಪಳಗಿದ ಕೈ. ಅವರಂತೆ ಕನ್ನಡ ಗದ್ಯ ಬರೆಯುವವರು ಬಲು ವಿರಳ ಎಂದು ನಾನು ದೃಢವಾಗಿ ನಂಬಿದ್ದೇನೆ.

ಆ ದಿನಗಳಲ್ಲಿ ಹಲವಾರು ಕನ್ನಡ ಕೂಟಗಳಲ್ಲಿ ಸಾಕಷ್ಟು ಕನ್ನಡ ಚಟುವಟಿಕೆಗಳು ನಡೆಯುತ್ತಿದ್ದರೂ, ಅಕ್ಕ ಸಂಸ್ಥೆಯಂಥಾ ಒಕ್ಕೂಟದಲ್ಲಿ ಸಹಸ್ರಾರು ಕನ್ನಡಿಗರು ಒಟ್ಟಾಗಿ ಸೇರಿ ಸಮ್ಮೇಳನಗಳನ್ನು ನಡೆಸಿ ಸಂಭ್ರಮಿಸಿದರೂ ಕನ್ನಡ ಸಾಹಿತ್ಯದ ಬಗ್ಗೆ ಏನಾದರೋ ಗಂಭೀರವಾಗಿ ಚಿಂತಿಸುವ ಸಂಸ್ಥೆಯೊಂದರ ಅಗತ್ಯವಿದೆ ಎನ್ನುವುದನ್ನು ಕಂಡುಕೊಂಡ ಹಲವರಲ್ಲಿ ರಾಜಗೋಪಾಲ್ ಹಿರಿಯರು. ಅವರ ಮುಂದಾಳತ್ವದಲ್ಲಿ ಅಮೆರಿಕದ ಮೂಲೆ ಮೂಲೆಗಳಲ್ಲಿ ಹಂಚಿಹೋಗಿರುವ ಕನ್ನಡ ಸಾಹಿತ್ಯ ಪ್ರಿಯರ ಒಂದು ಸಂಸ್ಥೆ ೨೦೦೩/೪ರಲ್ಲಿ ಹುಟ್ಟಿಕೊಂಡಿತು. ಅದೇ ಕನ್ನಡ ಸಾಹಿತ್ಯ ರಂಗ! ಆ ಒಕ್ಕೂಟ ಸ್ಥಾಪಿತವಾದಂದಿನಿಂದಲೂ ನಾನು ಅವರೊಂದಿಗೆ ಬೇರೆ ಬೇರೆ ಜವಾಬ್ದಾರಿಗಳನ್ನು ಹೊತ್ತು ನನ್ನ ಸಹಯೋಗ ನೀಡಿದ್ದೇನೆ. ಅವರ ಆರೋಗ್ಯ ಕೆಟ್ಟು ಗಂಭೀರ ಸ್ವರೂಪ ತಾಳುವ ಮುನ್ನ, ನನ್ನನ್ನು ಕರೆದು ಸಂಘದ ಸಾರಥ್ಯ ವಹಿಸಿಕೊಳ್ಳಬೇಕೆಂದು ಆಗ್ರಹಿಸಿದರು. ಅವರೊಂದಿಗೆ ಹತ್ತಿರವಾಗಿದ್ದು ದುಡಿದು ಅವರ ಕಾರ್ಯವೈಖರಿಯನ್ನು ಒಗ್ಗೂಡಿಸಿಕೊಂಡಿದ್ದರಿಂದ ಈಗ ನನಗೆ ಕಸಾರಂ ಸಂಸ್ಥೆಯ ಮುಖಂಡತ್ವ ವಹಿಸಲು ಸಾಧ್ಯವಾಗಿದೆ. ಅವರ ಎಂಬತ್ತು ವರ್ಷಗಳ ಹುಟ್ಟುಹಬ್ಬವನ್ನು ರಾಜಗೋಪಾಲ್



ಕುಟುಂಬ ಆಚರಿಸಿದಾಗ ಸಂಭ್ರಮದಲ್ಲಿ ಕಸಾರಂ ಪರವಾಗಿ ಭಾಗವಹಿಸುವ ಅವಕಾಶ ದೊರಕಿದಾಗ ಎಷ್ಟು ಸಂತಸವಾಗಿತ್ತೋ ಅಷ್ಟೇ ದುಃಖ ಅವರ ಮರಣೋತ್ತರ ಸ್ಮರಣಾಚರಣೆಯಲ್ಲಿ ಭಾಗವಹಿಸಿದಾಗ ಆಯಿತು. ಅವರು ಬಂಧುಗಳನ್ನೇ ಅಲ್ಲದೇ ಹಲವಾರು ಮಿತ್ರರನ್ನು ಅಗಲಿದ್ದಾರೆ. ಹಲವಾರು ಜನರ ಜೀವನದಲ್ಲಿ ತಮ್ಮ ಸ್ಥಾನವನ್ನು ಗಳಿಸಿಕೊಂಡಿದ್ದಾರೆ.

ಸಾಹಿತ್ಯದ ಜೊತೆಗೆ ಅವರಿಗೆ ಕರ್ನಾಟಕ ಸಂಗೀತದಲ್ಲೂ ಸಾಕಷ್ಟು ಅಭಿರುಚಿಯೇ ಅಲ್ಲದೇ ಜ್ಞಾನವೂ ಇತ್ತು. ಅವರ ತಂದೆಯವರು ವಾಗ್ಗೇಯಕಾರರು, ಸಂಸ್ಕೃತ ವಿದ್ವಾಂಸರು. ತಂದೆಯವರ ಕೃತಿಗಳನ್ನು ಮಕ್ಕಳೆಲ್ಲ ಸೇರಿ ಧ್ವನಿಸಂಪುಟಗಳಲ್ಲಿ ಮುದ್ರಿಸಿ ಮುಂದಿನ ಪೀಳಿಗೆಗೆ ಉಳಿಯುವಂತೆ ಮಾಡಿದ್ದಾರೆ. ರಾಜಗೋಪಾಲರ ತಂಗಿ ಮತ್ತು ತಂಗಿಯ ಮಗಳು ಸುಶ್ರಾವ್ಯವಾಗಿ ಹಾಡಿರುವ ಈ ಧ್ವನಿಮುದ್ರಿಕೆಗಳಲ್ಲಿ ಅಪೂರ್ವ ರಾಗಗಳ ಕೃತಿಗಳಿವೆ (ಕೆಲವಂತೂ ಕೇವಲ ಪುಸ್ತಕಗಳಲ್ಲಿ ಮಾತ್ರ ಸಿಗುವಂಥ ರಾಗಗಳು!) ಶ್ರೀಯುತ ಯೋಗನರಸಿಂಹಂ ರಚಿಸಿರುವ ಆ ಕೃತಿರತ್ನಗಳು ನಿಜಕ್ಕೂ ಅಮೋಘವಾದವು. ಅವುಗಳ ಬಗ್ಗೆ ನಾವಿಬ್ಬರೂ ಹಲವು ಬಾರಿ ಚರ್ಚಿಸಿದ್ದೆವು.

ರಾಜಗೋಪಾಲ್ ಮತ್ತು ನಾನು ಫೋನಿನಲ್ಲಿ ಮಾತಾಡುತ್ತಿದ್ದ ವಿಷಯಗಳೆಂದರೆ ಕನ್ನಡ ಸಾಹಿತ್ಯ ಮತ್ತು ಕರ್ನಾಟಕ ಸಂಗೀತ. ದೀಕ್ಷಿತರ ಕೃತಿಗಳ ಬಗ್ಗೆ ಅವರು ಬರೆದಿದ್ದ ತಮ್ಮ ಅಪ್ರತಿಮವಾದ ಒಂದು ಪ್ರಬಂಧವನ್ನು ನನ್ನೊಡನೆ ಹಂಚಿಕೊಂಡಿದ್ದರು: 'ದೀಕ್ಷಿತರ ಕೃತಿಗಳನ್ನು ಕೇಳುವುದೆಂದರೆ, ದಿವ್ಯವಾದೊಂದು ದೇಗುಲದ ಸುತ್ತ, ಪ್ರಾಕಾರದೊಳಗೆ ಸಾವಕಾಶವಾಗಿ ಪ್ರದಕ್ಷಿಣೆ ಮಾಡಿ ನಂತರ ಗರ್ಭಗುಡಿಯಲ್ಲಿರುವ ಭಗವಂತನ ದರ್ಶನ ಪಡೆಯುವ ಅನುಭವ, ಮೊದಲು ವಿಳಂಬಗತಿಯಲ್ಲಿ ಸಾಗಿ ಕೊನೆಯಲ್ಲಿ ಮಧ್ಯಮಗತಿ ಮತ್ತು ತೀವ್ರಗತಿಗಳನ್ನು ಮುಟ್ಟಿ ಪರಾಕಾಷ್ಠೆಯನ್ನು ಮುಟ್ಟುವ ಸುಖಾಂತ್ಯದ ಅನುಭವ!' ಅವರ ಪ್ರಬಂಧದ ಮಾತುಗಳನ್ನು ಭಟ್ಟಿ ಇಳಿಸಿ ಸಂಕುಚಿತಗೊಳಿಸಿದ ಮಾತುಗಳಿವು; ಎಂಥಾ ಉಪಮೆ, ಎಂಥಾ ಪ್ರತಿಮೆ!

ಕನ್ನಡ ಸಾಹಿತ್ಯ ರಂಗದ ಪ್ರತಿಯೊಂದು ಸಮ್ಮೇಳನದಲ್ಲೂ ಸಕ್ರಿಯವಾಗಿ ಪಾಲ್ಗೊಂಡಿದ್ದ ರಾಜಗೋಪಾಲ್, ತೀವ್ರ ಅನಾರೋಗ್ಯದ ಕಾರಣ ಸೆಯಿಂಟ್ ಲೂಯಿಸ್ ನಗರದ ಸಮ್ಮೇಳನದಲ್ಲಿ ಭಾಗವಹಿಸಲಾಗದೇ ಚಡಪಡಿಸಿದ್ದನ್ನು ವರ್ಣಿಸುವುದು ಕಷ್ಟ. ಬಹಳ ನಿರಾಸೆಯಿಂದ ನೊಂದುಕೊಂಡಿದ್ದರು. ಅವರಿಗೆ ಕೊಂಚವಾದರೂ ಸಮಾಧಾನ ಸಿಗಲೆಂದು, ನಮ್ಮ ಕಾರ್ಯಕ್ರಮದ ಉದ್ಘಾಟನೆಯ ಮೊದಲ ಅರ್ಧ ಘಂಟೆ ಅವರೂ ಸಹ ನಮ್ಮೊಂದಿಗೆ ದೂರವಾಣಿ/ವೀಕ್ಷಣೆಗಳ ಸಹಾಯದಿಂದ ಸೇರಿಕೊಳ್ಳುವಂತೆ ಮಾಡಿದಾಗ ಅವರಿಗಾದ ಆನಂದ ಅಷ್ಟಿಷ್ಟಲ್ಲ! ಎರಡು ವರ್ಷಗಳ ನಂತರ ನಡೆದ ಬಾಸ್ಟನ್ ಸಮ್ಮೇಳನದ ಹೊತ್ತಿಗೆ ಅವರು ಸಾಕಷ್ಟು ಚೇತರಿಸಿಕೊಂಡಿದ್ದರು, ಹಾಗಾಗಿ

ಅವರೂ ಆ ಸಮಾರಂಭದಲ್ಲಿ ಪಾಲ್ಗೊಳ್ಳಲು ಸಾಧ್ಯವಾಯಿತು. ಆ ಸಮ್ಮೇಳನದಲ್ಲಿ, ಕನ್ನಡದ ಹಲವು ಹಿರಿಯ ಗಣ್ಯರಿಗೆ ಶ್ರದ್ಧಾಂಜಲಿ ಅರ್ಪಿಸುವ ಒಂದು ಕಾರ್ಯಕ್ರಮವನ್ನು ನಡೆಸಿಕೊಡುವಂತೆ ಅವರನ್ನು ಕೇಳಿಕೊಳ್ಳಲಾಗಿತ್ತು. ಅತ್ಯಂತ ಹುರುಪಿನಿಂದ ತಯಾರಾಗಿ ಬಂದಿದ್ದ ರಾಜಗೋಪಾಲ್ ರಂಗದ ಮೆಟ್ಟಿಲುಗಳನ್ನೇರುವ ಉಮೇದಿನಲ್ಲಿ ಹೆಜ್ಜೆ ತಪ್ಪಿ ಅನಾಮತ್ತಾಗಿ ಮುಗ್ಗರಿಸಿ ಮೇಲಿನ ಮೆಟ್ಟಿಲ ಮೂಲೆಯೊಂದು ಅವರ ಹಣೆಗೆ ತಾಗಿ ಬೋರೆ ಬಂದು ಅವರು ಸ್ಥಳದಲ್ಲೇ ಕುಸಿದು ಪ್ರಜ್ಞೆ ತಪ್ಪಿದರು. ಮಹಾ ಅನಾಹುತವಾದದ್ದು ಸುತ್ತ ಮುತ್ತ ಜೊತೆಯಲ್ಲಿದ್ದವರ ಗಮನಕ್ಕೆ ಬಂದು ಪಕ್ಕದಲ್ಲೇ ಇದ್ದ ಕಸಾರಂ ಉಪಾಧ್ಯಕ್ಷ ಗುರುಪ್ರಸಾದ್ ಕಾಗಿನೆಲೆ (ಇವರು ತುರ್ತು ವೈದ್ಯಕೀಯದಲ್ಲಿ ಪರಿಣಿತರು!) ಅವರನ್ನು ಉಪಚರಿಸಿ ಎಚ್ಚರಗೊಳಿಸಿದರು. ಪರಿಸ್ಥಿತಿ ಐದೇ ನಿಮಿಷಗಳಲ್ಲಿ ಸಂಪೂರ್ಣ ಹತೋಟಿಗೆ ಬಂದು, ಏನೂ ನಡೆಯಲೇ ಇಲ್ಲವೆಂಬಂತೆ ರಾಜಗೋಪಾಲ್ ತಮ್ಮ ಇಡೀ ಒಂದೂವರೆ ಘಂಟೆಯ ಕಾರ್ಯಕ್ರಮವನ್ನು ಶಿಸ್ತಿನಿಂದ ನಡೆಸಿಕೊಟ್ಟರು! ಇದನ್ನು ನೆನೆಸಿಕೊಂಡಾಗಲೆಲ್ಲ ಅವರ ಸಮಯಪ್ರಜ್ಞೆ, ಅವರ ಸಂಯಮ ಮತ್ತು ಮನೋದಾರ್ಢ್ಯಗಳನ್ನು ನೆನೆದು ಅವರ ಬಗ್ಗೆ ಅಭಿಮಾನ ಮತ್ತು ಗೌರವಗಳು ಉಮ್ಮಳಿಸುತ್ತವೆ.

ಇಷ್ಟೆಲ್ಲಾ ಹೇಳಿ ಕೆಲವು ಸಣ್ಣ ಪುಟ್ಟ ವಿಷಯಗಳಲ್ಲಿ ನಮ್ಮಲ್ಲಿದ್ದ ಅಭಿಪ್ರಾಯ ಭೇದಗಳ ಬಗ್ಗೆ ಹೇಳದಿದ್ದರೆ ಈ ಒಂದು ಸ್ಮರಣೆ ಅಪೂರ್ಣವಾಗೇ ಉಳಿದುಬಿಡುತ್ತದೆ. ಕನ್ನಡ ಸಾಹಿತ್ಯ ರಂಗವನ್ನು ನಡೆಸಿಕೊಂಡುಹೋಗುವ ವಿಚಾರದಲ್ಲಿ ಅವರೊಂದಿಗೆ ಹಲವು ಬಾರಿ ವಾದಕ್ಕೂ ನಾನು ಇಳಿದಿದ್ದೆ. ವೈಚಾರಿಕ ಸ್ವಾತಂತ್ರ್ಯ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯಗಳ ಬಗ್ಗೆ ಗೌರವವಿದ್ದ ರಾಜಗೋಪಾಲ್ ಇತರರ ಅಭಿಪ್ರಾಯಗಳನ್ನು ಸಮಿತಿಯ ಮೀಟಿಂಗುಗಳಲ್ಲಿ ತಾಳ್ಮೆಯಿಂದ ಕೇಳಿಸಿಕೊಳ್ಳುತ್ತಿದ್ದರು. ಆದರೂ ನಿರ್ಧಾರಕ್ಕೆ ಬಂದ ವಿಷಯಕ್ಕೆ ಒಮ್ಮೊಮ್ಮೆ ಕಟ್ಟುಬಿದ್ದು ಅದರ ಪುನರ್ಪರಿಶೀಲನೆಗೆ ವಿರೋಧ ವ್ಯಕ್ತಪಡಿಸುತ್ತಿದ್ದ ಸಂದರ್ಭಗಳೂ ಇದ್ದವು. ತಮ್ಮ ನಿಲವುಗಳಲ್ಲಿ ಒಂದಿಷ್ಟು 'ಸಡಿಲ'ವಾಗಬಾರದೇ ಎನ್ನಿಸುತ್ತಿತ್ತು! (ಹೀಗೆ ಅನ್ನಿಸುವುದಕ್ಕೆ ನನ್ನ ಹಟದ ಸ್ವಭಾವವೂ ಕಾರಣವಾಗಿದ್ದಿರಬಹುದು.) ಆದರೆ ನಾನು ಖಾಸಗಿಯಾಗಿ ಮತ್ತೆ ಮತ್ತೆ ನನ್ನ ವಾದಗಳನ್ನು ಮಂಡಿಸಿ ಅವರ ಮನಸ್ಸನ್ನು ಗೆಲ್ಲಲು ಯತ್ನಿಸಿದ್ದೇನೆ. ಎಷ್ಟರಮಟ್ಟಿಗೆ ಗೆಲುವು ಸಿಕ್ಕಿದೆಯೋ ಹೇಳಲಾರೆ. ಒಂದಂತೂ ಸತ್ಯ, ಅವರು ಭಿನ್ನಾಭಿಪ್ರಾಯವಿದ್ದಾಗಲೂ ಅತ್ಯಂತ ನಾಗರಿಕ ವರ್ತನೆಯನ್ನೇ ತೋರುತ್ತಿದ್ದರೆಂಬುದು ಸತ್ಯ. ಅವರ ವ್ಯಕ್ತಿತ್ವ, ಮೈಸೂರಿನ ಅರಸರ ಕಾಲದ ಸುಸಂಸ್ಕೃತ ವಾತಾವರಣದಲ್ಲಿ ಬೆಳೆದು, ಉತ್ತಮ ಗುರುಗಳ ಮಾರ್ಗದರ್ಶನ ಪಡೆದು ಪಕ್ವವಾಗಿತ್ತು. ತಮ್ಮ ವಾದವನ್ನು ಮಂಡಿಸುವ ರೀತಿ, ಇತರರನ್ನು ತಮ್ಮದೇ ಚಿಂತನಾಕ್ರಮದ ಕಡೆಗೆ ತಿರುಗಿಸಿಕೊಳ್ಳುವ ಪರಿ, ಪ್ರಜಾಪ್ರಭುತ್ವ ಮಾರ್ಗದಲ್ಲಿ ನಡೆದು ಒಂದು ಸಂಸ್ಥೆಯನ್ನು ನಡೆಸಿಕೊಂಡು ಹೋಗುವ ಅವರ ನಾಯಕತ್ವ, ಮುಂತಾದ



ಸದ್ಗುಣಗಳು ಅನುಕರಣೀಯ. ಪುಸ್ತಕ ಸಂಪಾದನೆಯ ವಿಷಯದಲ್ಲಿ ಅವರು ತೋರುತ್ತಿದ್ದ ಕಟ್ಟುನಿಟ್ಟಿನ ಸ್ವಭಾವ, ಕಣ್ಣಲ್ಲಿ ಕಣ್ಣಿಟ್ಟು ಓದಿ ತಿದ್ದುವಿಕೆ, ಸೂಕ್ತವಾದ ಪದಗಳ ಪ್ರಯೋಗ, ಒಟ್ಟಾರೆ ಪರಿಪೂರ್ಣತೆಯೆಡೆಗೆ ನಡೆವ ಯತ್ನ, ಇವುಗಳ ಬಗ್ಗೆ ನಮ್ಮೆಲ್ಲರಿಗೂ ಮೇಲ್ಪಂಕ್ತಿಯಾಗಿದ್ದರು. ಅವರ ಕೊಡುಗೆಯನ್ನು ಗುರುತಿಸಿ ಕನ್ನಡ ಸಾಹಿತ್ಯ ರಂಗವು ಅವರಿಗೆ ಕಳೆದ ಸಾಹಿತ್ಯೋತ್ಸವದಲ್ಲಿ ಮಾಡಿದ ಸಮ್ಮಾನ ಅವರ ಜೀವಿತಕಾಲದಲ್ಲೇ ನಡೆದದ್ದು ಸಾರ್ಥಕವಾಯಿತು! ಸುಮಾರು ಐದು ದಶಕಗಳ ನಮ್ಮಿಬ್ಬರ ಮೈತ್ರಿ ಮತ್ತು ಸಾಹಚರ್ಯ ನನ್ನ ಅಮೆರಿಕಾ ಜೀವನದ ಒಂದು ಸವಿಯಾದ ನೆನಪಾಗಿಯೇ ಕೊನೆಯ ತನಕ ಉಳಿಯುವಂಥದು! ಮುಂದಿನ ಸಮ್ಮೇಳನದಲ್ಲಿ ಅವರಿರುವುದಿಲ್ಲ; ಇದು ತುಂಬಲಾಗದ ನಷ್ಟ.



# ರಾಜಮಾರ್ಗದಲ್ಲಿ ನಡೆದ ರಾಜಗೋಪಾಲರು

–ನಳಿನಿ ಮೈಯ

ಅದು ಇಸವಿ ೨೦೦೦ದ 'ಅಕ್ಕ' ಸಮ್ಮೇಳನ. ಅಲ್ಲಿಯ ಸಾಹಿತ್ಯ ಗೋಷ್ಠಿಯಲ್ಲಿ ಭಾಗವಹಿಸಿ ಹೊರಬರುತ್ತಿರುವಾಗ ತಾವಾಗಿ ಬಂದು ನನ್ನನ್ನು ಮಾತನಾಡಿಸಿದರು ಅವರು. ನೋಡುತ್ತಿದ್ದ ಹಾಗೇ ಗೌರವ ಮೂಡಿಸುವಂಥ ವ್ಯಕ್ತಿತ್ವ ಅವರದ್ದು. ಹಾಗೆಂದು ಕಣ್ಣು ಕೋರೈಸುವಂಥ ನಿಲುವು ಎನ್ನಲಾಗದು. ಅವರನ್ನು ಹೋಲಿಸಬಹುದಾದರೆ ಮಲ್ಲಿಗೆ ಹೂವಿಗೆ ಮಾತ್ರ. ಹೇಳಿಕೊಳ್ಳುವಂಥ ಗಾತ್ರವಿಲ್ಲದ, ಒಮ್ಮೆಲೆ ಗಮನ ಸೆಳೆಯುವ ಬಣ್ಣವಿಲ್ಲದ ಬಿಳಿಯ ಮಲ್ಲಿಗೆ. ಅದರ ಸಾನ್ನಿಧ್ಯದಲ್ಲಿ ಇದ್ದವರಿಗೆ ಮಾತ್ರ ಗೊತ್ತು ಆ ಪರಿಮಳ! ರಾಜಗೋಪಾಲರದ್ದೂ ಹಾಗೇ. ಅವರೊಂದಿಗೆ ಕೆಲಕಾಲ ಕಳೆದವರಿಗೆ ಮಾತ್ರ ಗೊತ್ತು– ಹಳೆ ಮೈಸೂರಿನ ಸೌಜನ್ಯ, ಕಳಕಳಿ, ಸಂಸ್ಕಾರ, ರಸಿಕತೆ, ವಿದ್ವತ್ತು, ಕಲಾಭಿಮಾನ ಎಲ್ಲವೂ ಮೇಳೈಸಿದ ಅಪರೂಪದ ಆ ವ್ಯಕ್ತಿತ್ವ!

ತಮ್ಮ ಗುರುತು ಹೇಳಿಕೊಂಡ ಅವರು ಸಾಹಿತ್ಯದ ಬಗ್ಗೆ ಸ್ವಲ್ಪ ಮಾತುಕಥೆ ನಡೆಸಿ ಅಮೆರಿಕಾದಲ್ಲಿ ಸಾಹಿತ್ಯಕ್ಕಾಗಿಯೇ ಮೀಸಲಾದ ಒಂದು ಸಂಸ್ಥೆ ಬೇಕು ಎಂಬಂತೆ ಏನೋ ಹೇಳಿದರು. ಈಗಾಗಲೆ ಹಲವಾರು ಕನ್ನಡ ಕೂಟಗಳು, ಜಾತಿಯನ್ನು ಆಧರಿಸಿದ ಸಂಘಗಳು, ಈ 'ಅಕ್ಕ' ಎಲ್ಲವೂ ಇರುವಾಗ ಸಾಹಿತ್ಯಕ್ಕೆ ಇನ್ನೊಂದು ಸಂಸ್ಥೆ ಶುರು ಮಾಡುವುದು ಬೇಕೆ? ಎಂಬರ್ಥದಲ್ಲಿ ಏನೋ ಹೇಳಿದೆ ನಾನು. ತಮಗೆ ಸ್ವಭಾವತಃ



ಇರುವ ವಿನಯಪೂರ್ವಕ ಒತ್ತಾಯದಲ್ಲೇ 'ಅಂಥ ಸಂಸ್ಥೆ ಇದ್ದರೆ ಒಳ್ಳೆಯದು' ಎಂಬ ಮಾತನ್ನು ನನ್ನ ಬಾಯಲ್ಲಿ ಹೊರಡಿಸಿದರು ಅವರು! ಆಮೇಲೆ 'ಅಕ್ಕ' ಸ್ಮರಣ ಸಂಚಿಕೆಯಲ್ಲಿ ಅವರ ಲೇಖನ 'ಶ್ರೀನಿವಾಸನ ಭಾರತ ಪ್ರಯಾಣ' ಓದಿದ ನಾನು 'ಎಂಥ ಪ್ರತಿಭಾನ್ವಿತ ಬರಹಗಾರರು ಈತ!' ಎಂದು ದಂಗಾದೆ. ಅವರನ್ನು ಕೇಳಿ ಆ ಲೇಖನ ತರಿಸಿಕೊಂಡು ನನ್ನ ಸಂಪಾದಕತ್ವದಲ್ಲಿ ಹೊರಬಂದ ಶಿಕಾಗೊ ಕನ್ನಡ ಪತ್ರಿಕೆ 'ಸಂಗಮ' ದಲ್ಲಿ ಪ್ರಕಟಿಸಿದ್ದೂ ಆಯಿತು. ಹೀಗೆ ಶುರುವಾಯಿತು ನಮ್ಮಿಬ್ಬರ ಸ್ನೇಹ. ಆಮೇಲೆ ಅದೆಷ್ಟೋ ಬಾರಿ ಸಂಧಿಸಿದೆವು, ೨೦೦೩ರಲ್ಲಿ ಹುಟ್ಟಿದ 'ಕನ್ನಡ ಸಾಹಿತ್ಯರಂಗ'ದ ಚಟುವಟಿಕೆಗಳನ್ನು ರೂಪಿಸಿ ಕಾರ್ಯಗತಗೊಳಿಸಿದೆವು, ಫೋನಿನಲ್ಲಿ ಎಷ್ಟೋ ಮಾತುಕಥೆ ನಡೆಸಿದೆವು. ಒಮ್ಮೆಯಾದರೂ ಮೊದಲ ಬಾರಿ ನನ್ನಲ್ಲಿ ಮೂಡಿಸಿದ ಆ ಗೌರವದ ಭಾವಕ್ಕೆ ಧಕ್ಕೆಯಾಗುವ ರೀತಿಯಲ್ಲಿ ನಡೆದುಕೊಂಡಿದ್ದೇ ಇಲ್ಲ ಅವರು. ಬದಲಿಗೆ ಗೌರವ ಇನ್ನೂ ಜಾಸ್ತಿಯಾಯಿತು. ೨೦೦೩-೨೦೧೧ರವರೆಗೆ ಕನ್ನಡ ಸಾಹಿತ್ಯ ರಂಗದ ಕಾರ್ಯಕಾರಿ ಸಮಿತಿಯ ಅಧ್ಯಕ್ಷರಾಗಿ ಅವರು ನಡೆಸಿಕೊಟ್ಟ ಐದು ಸಮ್ಮೇಳನಗಳಲ್ಲಿ ಅವರ ಕಾರ್ಯಕ್ಷಮತೆ, ದಕ್ಷತೆ ಅಮೆರಿಕನ್ನಡಿಗರನ್ನು ನಿಬ್ಬೆರಗಾಗಿಸಿತ್ತು!

ಅವರಲ್ಲಿ ನಾನು ಮೆಚ್ಚುವ ಮೊದಲ ಗುಣವೆಂದರೆ ಪ್ರಾಮಾಣಿಕತೆ. ಇನ್ನೊಬ್ಬರನ್ನು ಮೆಚ್ಚಿಸಬೇಕೆಂದು ಮನಸ್ಸಿನಲ್ಲಿ ಒಂದನ್ನಿಟ್ಟುಕೊಂಡು ಬಾಯಲ್ಲಿ ಮತ್ತೊಂದನ್ನು ಹೇಳುವವರಲ್ಲ ಅವರು. ಈ ಪ್ರಾಮಾಣಿಕತೆ ಅವರ ಬರಹಗಳಲ್ಲೂ ಎದ್ದು ಕಾಣುತ್ತದೆ. ಕಾರಂತರ ಬಗ್ಗೆ ಐತಾಳರು ಹೊರತಂದ ಪುಸ್ತಕ 'ಕಾರಂತ ಚಿಂತನ'ದಲ್ಲಿ ರಾಜಗೋಪಾಲರು ಎತ್ತಿಕೊಂಡ ವಸ್ತು 'ಕಾರಂತರ ಕಣ್ಣಲ್ಲಿ ಇತರರು'. ಕಾರಂತರು ಹೇಗೆ ಖಾರಾಂತರೂ ಹೌದು ಎಂದು ಹಲವು ಉದಾಹರಣೆಗಳೊಡನೆ ನಿರೂಪಿಸಿದ ಅವರು ಮುಂದೆ ಅವರ ಒಳ್ಳೆಯ ಗುಣಗಳ ಬಗ್ಗೆಯೂ ವಿಶದವಾಗಿ ಬರೆದಿದ್ದರು. 'ಹಲವು ಮಕ್ಕಳ ತಾಯಿ' ಎಂಬ ತಮ್ಮ ತಾಯಿಯ ಬಗ್ಗೆ ರಾಜಗೋಪಾಲ್ ಮತ್ತಿತರರು ತಂದ ಪುಸ್ತಕದಲ್ಲಿ ಕೂಡಾ ಸ್ವತಃ ತಮ್ಮ ತಾಯಿಯ ಬಗ್ಗೆ ಬರೆದ ಲೇಖನದಲ್ಲಿ ವಸ್ತುನಿಷ್ಠವಾಗಿ ನಮ್ಮ ತಾಯಿಯೂ ಇತರರಂತೆ ಉದಾತ್ತ ಗುಣಗಳ ಜೊತೆಗೆ ಲೋಪ ದೋಷಗಳನ್ನು ಒಳಗೊಂಡ ವ್ಯಕ್ತಿ ಎಂದಿದ್ದಾರೆ. 'ಕನ್ನಡ ಸಾಹಿತ್ಯ ರಂಗ'ದ 'ಅವರವರ ಭಕುತಿಗೆ' ಪುಸ್ತಕದಲ್ಲಿ ಬರೆದ 'ಬಸವಣ್ಣ ಒಂದು ಬೆರಗು' ಲೇಖನದಲ್ಲಿ ಅತಿಥಿ ಸತ್ಕಾರದಲ್ಲಿ ತನ್ನ ಮಡದಿಯನ್ನೂ ಎಲ್ಲ ಬಗೆಯ 'ಸೇವೆ' ಗಾಗಿ ಅರ್ಪಿಸಲು ತಯಾರಿದ್ದ ಬಸವಣ್ಣನ ನೈತಿಕತೆಯ ಬಗ್ಗೆ ಬೆರಗು ತಾಳಿದ್ದಾರೆ! ಇಂಥ ದಾಷ್ಟಿಕತೆ ಹೆಚ್ಚಿಗೆ ಎಲ್ಲೂ ಕಂಡುಬರುವುದಿಲ್ಲ. ಕನ್ನಡ ಸಾಹಿತ್ಯ ರಂಗದ ಮೀಟಿಂಗುಗಳಲ್ಲೂ ಸಮಯಕ್ಕೆ ಸರಿಯಾಗಿ ಮೀಟಿಂಗಿಗೆ ಹಾಜರಾಗದವರನ್ನು ತರಾಟೆಗೆ ತೆಗೆದುಕೊಳ್ಳುವುದರಿಂದ ಹಿಡಿದು ಇತರ ವಿಷಯಗಳಲ್ಲೂ ಮುಲಾಜಿಲ್ಲದೆ ತಮ್ಮ ಅನಿಸಿಕೆಯನ್ನು ಮಂಡಿಸುವುದನ್ನು ಕಂಡಿದ್ದೇನೆ ನಾನು.

ಇನ್ನೊಂದು ಅವರಲ್ಲಿ ಎದ್ದು ಕಾಣುವ ಅಂಶವೆಂದರೆ 'ಅಟೆನ್ಷನ್ ಟು ಡೀಟೇಲ್ಸ್. ಪ್ರತಿಯೊಂದು ವಿಚಾರವನ್ನೂ ಕೂಲಂಕಷವಾಗಿ ಬಗೆದು ನೋಡುವ ಜಾಯಮಾನ ಅವರದ್ದು. ಇದು ಅವರ ಲೇಖನಗಳಲ್ಲೂ ಕಾಣುತ್ತದೆ. ಅವರು 'ಕುವೆಂಪು ಸಾಹಿತ್ಯ ಸಮೀಕ್ಷೆ' ಪುಸ್ತಕಕ್ಕಾಗಿ ಕಿಂದರಿ ಜೋಗಿ ಪದ್ಯದ ಮೇಲೆ ಬರೆದ ಲೇಖನ ಎಲ್ಲರಿಂದಲೂ ಶಹಭಾಸ್‌ಗಿರಿ ಪಡೆದಿತ್ತು. ಅಷ್ಟು ಆ ಕವನದ ಹಿಂದೆ, ಅದರ ಮೂಲ ಇಂಗ್ಲಿಷ್ ಕವನದ ಹಿಂದೆ ಇರುವ ಐತಿಹ್ಯವನ್ನೆಲ್ಲ ಜಾಲಾಡಿದ್ದರು ಅವರು. ಕರ್ನಾಟಕದಲ್ಲಿ ಹಿರಿಯ ಸಾಹಿತಿಗಳು ಕೂಡಾ 'ನೀವು ಓದಲೇಬೇಕಾದ ಲೇಖನ ಇದು' ಅಂತ ಒಬ್ಬರಿಗೊಬ್ಬರು ಹೇಳಿಕೊಂಡರಂತೆ! ಹಾಗೆಯೇ 'ಬೇರು-ಸೂರು' ಪುಸ್ತಕಕ್ಕಾಗಿ ಬರೆದ ಲೇಖನದಲ್ಲಿ ಅಮೆರಿಕಾದಲ್ಲಿ ಮಕ್ಕಳನ್ನು ಬೆಳೆಸುವ ಬಗ್ಗೆ ಸೂಕ್ಷ್ಮಾತಿಸೂಕ್ಷ್ಮ ವಿವರಗಳನ್ನು ಕೊಟ್ಟಿದ್ದಾರೆ. ಎರಡು ವರ್ಷಗಳ ಹಿಂದೆ ಅವರು ಪ್ರಕಟಿಸಿದ 'ಸೃಷ್ಟಿ-ನಾಲ್ಕು ಜಗತ್ತು' ಪುಸ್ತಕ ಓದುವಾಗ ಅಮೆರಿಕನ್ ರೆಡ್ ಇಂಡಿಯನ್ನರ ಬಗ್ಗೆ ಎಷ್ಟು ರಿಸರ್ಚ್ ಮಾಡಿದ್ದಾರೆ ಅಂತ ಆಶ್ಚರ್ಯವಾಗುತ್ತದೆ! ಶಿಕಾಗೊದಲ್ಲಿ 'ಕನ್ನಡ ಸಾಹಿತ್ಯ ರಂಗ' ಸಮ್ಮೇಳನವಾದಾಗ ವ್ಯವಹಾರದಲ್ಲೂ ಅಷ್ಟೇ ನಿಷ್ಠುರವಾಗಿ ಪ್ರತಿಯೊಂದು ಡೀಟೇಲ್ ಕೂಡಾ ಗಮನಿಸುತ್ತಾರೆ ಎಂಬುದು ನನ್ನ ಅನುಭವಕ್ಕೆ ಬಂದಿತ್ತು!

ತಮ್ಮ ಅನಾರೋಗ್ಯದಲ್ಲೂ ಕನ್ನಡದ ಬಗ್ಗೆ ಅತೀವ ಕಾಳಜಿ ಇಟ್ಟುಕೊಂಡಿದ್ದ ಅವರು ಈಗ ಕೆಲವು ತಿಂಗಳ ಕೆಳಗೆ ಫೋನ್ ಮಾಡಿ 'ಅಮೆರಿಕಾದಲ್ಲಿ 'ಕನ್ನಡ ಸಾಹಿತ್ಯ ರಂಗ'ದ ಪುಸ್ತಕಗಳ ಪ್ರಚಾರದ ಕಡೆಗೆ ಹೆಚ್ಚು ಗಮನ ಕೊಡಬೇಕು. 'ನಾವು ಏನು ಪ್ರಕಟಿಸಿದ್ದೇವೆ ಅಂತಲೇ ಯಾರಿಗೂ ತಿಳಿಯದಿದ್ದರೆ ಹೇಗೆ?' ಅಂದಿದ್ದರು. ಕಳೆದ ಏಪ್ರಿಲ್‌ನಲ್ಲಿ ನಡೆದ 'ಕನ್ನಡ ಸಾಹಿತ್ಯ ರಂಗ'ದ ವಸಂತೋತ್ಸವದಲ್ಲಿ ಮಡದಿ ವಿಮಲಾ ಅವರ ಜೊತೆ ಸಕ್ರಿಯವಾಗಿ ಭಾಗವಹಿಸಿದ್ದಲ್ಲದೆ ಒಂದು ಕಾರ್ಯಕ್ರಮವನ್ನು ಪ್ರಾಯೋಜಿಸಿದ್ದರು. ನನ್ನ ಇತ್ತೀಚಿನ ಪುಸ್ತಕ 'ಬಂದೀತು ಆ ದಿನ' ದಲ್ಲಿ ಅ. ರಾ. ಮಿತ್ರ ಅವರ ಮುನ್ನುಡಿಯನ್ನು ಮೆಚ್ಚಿಕೊಂಡು 'ವಿದೇಶಿ ಕನ್ನಡ ಮಹಿಳೆಯರು ಯಾವ ರಿಯಾಯಿತಿಯನ್ನೂ ಕೋರದೆ ಸ್ವತಂತ್ರವಾಗಿ ಬರೆಯುವ ಮನೋಭಾವವನ್ನು ಬೆಳೆಸಿಕೊಳ್ಳುತ್ತಿದ್ದಾರೆ' ಎಂಬ ಮಾತನ್ನು ಇಷ್ಟ ಪಟ್ಟಿದ್ದರು. ಅವರನ್ನು ಅರಸಿ ಬಂದ ಪ್ರಶಸ್ತಿಗಳು-ಕನ್ನಡ ರಾಜ್ಯೋತ್ಸವ ಪ್ರಶಸ್ತಿ ಮತ್ತು ಆಳ್ವಾಸ್ ನುಡಿಸಿರಿ ಪ್ರಶಸ್ತಿಗಳಿಂದ ಆ ಪ್ರಶಸ್ತಿಗಳಿಗೇ ಹೆಚ್ಚಿನ ಮನ್ನಣೆ ಅಂದರೆ ಅತಿಶಯೋಕ್ತಿಯಲ್ಲ.

ಹೆಂಗಸರ ಬಗ್ಗೆ ಇನ್ನಿಲ್ಲದ ಗೌರವ ಇಟ್ಟುಕೊಂಡಿದ್ದ ಅವರು ಮಹಿಳೆಯನ್ನು ಅಡಿಗೆಮನೆ ಮತ್ತು ಮಕ್ಕಳ ಚೌಕಟ್ಟಿನಲ್ಲಿ ಸೀಮಿತಗೊಳಿಸುವ ನುಡಿಗಟ್ಟುಗಳನ್ನು ಸಹ ವಿರೋಧಿಸುತ್ತಿದ್ದರು. ನನ್ನ ಪುಸ್ತಕ ಪ್ರಕಟವಾದಾಗ ಯಾರೋ 'ನಳಿನಿ ಮೈಯ ಅವರ



ಪುಸ್ತಕ ಪ್ರಸವ' ಅಂತ ಬರೆದಿದ್ದು ನೋಡಿ ಸಿಡಿಮಿಡಿಗೊಂಡಿದ್ದರು ಅವರು. ಫೋನ್ ಮಾಡಿ ನನ್ನ ಹತ್ತಿರ ತಮ್ಮ ಅಸಮಾಧಾನವನ್ನು ಹೇಳಿಕೊಂಡರು.

ಶಿಕಾಗೊದಲ್ಲಿ ಜೋರಾಗಿ ಸ್ನೋ ಬಿದ್ದರೆ ಕಾಲ್ ಮಾಡಿ ವಿಚಾರಿಸಿಕೊಳ್ಳುವವರು. ಸ್ನೇಹ, ಬಾಂಧವ್ಯಕ್ಕೆ ಜೀವನದಲ್ಲಿ ದೊಡ್ಡ ಸ್ಥಾನ ಕೊಟ್ಟವರು. ಮೆಲುಮಾತಿನ, ಗಟ್ಟಿ ಮನಸ್ಸಿನ, ಅವರು 'ವಜ್ರಾದಪಿ ಕಠೋರಾಣಿ, ಮೃದೂನಿ ಕುಸುಮಾದಪಿ' ಎಂಬ ಉಕ್ತಿಯನ್ನು ನೆನಪಿಗೆ ತರುತ್ತಾರೆ. 'To know him is to love him' ಎಂದು ಇಂಗ್ಲೀಷಿನಲ್ಲಿ ವಾಕ್ಯ ಒಂದಿದೆ. ಅದನ್ನು ಇವರಿಗಾಗಿಯೇ ಬರೆದರೇನೋ ಅನ್ನಿಸುತ್ತದೆ. ಅಂದಹಾಗೆ 'ರಾಜಗೋಪಾಲ್' ಎಂಬ ಅವರ ಹೆಸರು ಅನ್ವರ್ಥನಾಮ! ರಾಜನಂತೆ 'ಕನ್ನಡ ಸಾಹಿತ್ಯರಂಗ'ದಂಥ ಸಂಸ್ಥೆಯನ್ನು ನಡೆಸುವ ಗುರುತರ ಜವಾಬ್ದಾರಿಯನ್ನು ಅಧ್ಯಕ್ಷನಾಗಿ ನಿರ್ವಹಿಸಿದವರು. ಗೋಪಾಲನಂತೆ ಜೀವನವನ್ನು ವಿನೋದಮಯವಾಗಿ ನೋಡುವವರು. ನೇರ ಮಾತಿನವರು, ಧೀರ ನಡೆಯವರು, ಹಿಂದೊಂದು ಮುಂದೊಂದು ಇಲ್ಲದವರು. ಕಪಟ ಕುಹಕಗಳನ್ನು ಕಂಡರಿಯದವರು. ಒಟ್ಟಿನಲ್ಲಿ ರಾಜಮಾರ್ಗದಲ್ಲಿ ನಡೆದ ರಾಜಗೋಪಾಲ ಇವರು. ಅಂಥವರನ್ನು ಕಳೆದುಕೊಂಡ ಮೇಲೆ ಸಾಹಿತ್ಯಾಸಕ್ತ ಅಮೆರಿಕನ್ನಡಿಗರನ್ನು ಏನೋ ಒಂದು ಅನಾಥಪ್ರಜ್ಞೆ ಕಾಡುತ್ತಿದೆ. ಅವರು ನಮ್ಮೆಲ್ಲರ ಹೃದಯದಲ್ಲಿ ಬಿಟ್ಟುಹೋದ ಶೂನ್ಯವನ್ನು ತುಂಬುವುದು ಸಾಧ್ಯವೇ ಇಲ್ಲ. ಆದರೆ ಅವರ ನೆನಪುಗಳು ಮಾತ್ರ ನಮ್ಮ ಹತ್ತಿರ ಇದ್ದೇ ಇವೆ. ಒಂದು ಮಗು ಅಮ್ಮ ಇಲ್ಲದಾಗ ಅವಳ ಸೀರೆಯನ್ನೇ ಎದೆಗೆ ಅವಚಿಕೊಂಡು ಮಲಗಿದಂತೆ ಅವರ ನೆನಪುಗಳನ್ನು ಅವಚಿಕೊಂಡು ನಾವಿದ್ದೇವೆ.



## 'ತಾಯಿ ಸರಸ್ವತಿ'
## 'ಹಲವು ಮಕ್ಕಳ ತಾಯಿ' ಪುಸ್ತಕಕ್ಕೆ ನಮಿಸುತ್ತ...

**–ಡಾ. ಮೈ. ಶ್ರೀ. ನಟರಾಜ**

**ಮೊದಲ ಮಾತು:** ಹಿರಿಯರೂ ಹಿತೈಷಿಗಳೂ ಪ್ರಿಯ ಮಿತ್ರರೂ ಆಗಿದ್ದ ಶ್ರೀಯುತ ಎಚ್. ವೈ. ರಾಜಗೋಪಾಲ್ ಮತ್ತು ಕುಟುಂಬದವರು ಪ್ರಕಟಿಸಿದ 'ಹಲವು ಮಕ್ಕಳ ತಾಯಿ' ಗ್ರಂಥದ ಲೋಕಾರ್ಪಣೆಯ ಎರಡು ಸಮಾರಂಭಗಳು ನ್ಯೂ ಜೆರ್ಸಿ ಪ್ರದೇಶದಲ್ಲಿ ೨೦೧೬ರ ಜೂನ್ ೪ ಮತ್ತು ೧೧ರಂದು ಏರ್ಪಾಟಾಗಿದ್ದವು. ಆ ಸಮಾರಂಭಗಳಲ್ಲಿ ಒಂದಕ್ಕಾದರೂ ಬಂದು ಪುಸ್ತಕದ ಬಗ್ಗೆ ಮಾತಾಡಿ ಸಮಾರಂಭದಲ್ಲಿ ಭಾಗವಹಿಸಬೇಕೆಂದು ರಾಜಗೋಪಾಲ್ ಆಹ್ವಾನಿಸಿದ್ದರು. ಆದರೆ, ಹಲವಾರು ಕಾರಣಗಳಿಂದ, ಸಮಾರಂಭದಲ್ಲಿ ಖುದ್ದಾಗಿ ಭಾಗವಹಿಸಲಾಗದೇ, ಸಣ್ಣದೊಂದು ಟಿಪ್ಪಣಿಯೊಂದಿಗೆ ಪುಸ್ತಕದ ಬಗ್ಗೆ ನನ್ನ ಅಭಿಪ್ರಾಯಗಳನ್ನು ಬರೆದು ಕಳಿಸಿದ್ದೆ. ಅದನ್ನು ಸಭೆಯಲ್ಲಿ ರಾಜಗೋಪಾಲ್ ಉಪಸ್ಥಿತರಿದ್ದ ಮಿತ್ರರೊಂದಿಗೆ ಹಂಚಿಕೊಂಡರು. ಆ ಸಂದರ್ಭದಲ್ಲಿ ಅವರಿಗೆ ಬರೆದ ಪತ್ರವನ್ನು ಯಥಾವತ್ತಾಗಿ ಇಲ್ಲಿ ಪ್ರಸ್ತುತಪಡಿಸಿದ್ದೇನೆ.



**ಪ್ರಿಯ ರಾಜಗೋಪಾಲ್,**

ನೀವು ಕಳಿಸಿದ ಪುಸ್ತಕ ಕೈಸೇರಿತು, ಕಾರ್ಯಕ್ರಮಕ್ಕೆ ನೀವು ಕಳಿಸಿದ ಆಹ್ವಾನವೂ ಕೈಸೇರಿದೆ. ಆದರೆ, ಈ ತಿಂಗಳ ವಾರಾಂತ್ಯಗಳೆಲ್ಲ, ಒಂದಿಲ್ಲ ಒಂದು ಕಾರಣಕ್ಕೆ ಪರ ಊರಿಗೆ ಪ್ರಯಾಣ ಮಾಡುವುದಕ್ಕೆ ಅನುವಾಗಿಲ್ಲ. ನಿಮ್ಮ ತಾಯಿಯವರ ಬಗ್ಗೆ ನೀವು ಪ್ರೀತಿಯಿಂದ ಪ್ರಕಟಿಸಿರುವ ಪುಸ್ತಕವನ್ನು ಸಂಪೂರ್ಣವಾಗಿ ಓದಿ, ಅದರ ಬಗ್ಗೆ ಕೆಲವು ಮಾತುಗಳನ್ನಾಡಲು ಸಮಯದ ಮಿತಿಯಿಂದ ಸಾಧ್ಯವಾಗುತ್ತಿಲ್ಲ ಎಂಬುದು ಖೇದದ ಸಂಗತಿ. ಆದರೂ ನಿಮ್ಮ ಸಮಾರಂಭಕ್ಕೆ ಬಂದು ಇತರರ ಪ್ರತಿಕ್ರಿಯೆಗಳನ್ನಾದರೂ ಕೇಳಬೇಕೆಂಬ ಆಸೆ ಇತ್ತು. ಆದರೆ ಅದೂ ಸಾಧ್ಯವಾಗುತ್ತಿಲ್ಲವಾಗಿ, ಸಾಧ್ಯವಾದಷ್ಟು ಪುಟಗಳನ್ನು ಓದಿ, ಮತ್ತಿತರ ಪುಟಗಳ ಮೇಲೆ ಕಣ್ಣಾಡಿಸಿ ಸಂತಸಪಟ್ಟಿದ್ದೇನೆ. ಮಿಕ್ಕ ಭಾಗಗಳನ್ನೂ ಸಮಯ ಸಿಕ್ಕಿದಂತೆ ಓದಿ ಮುಗಿಸುತ್ತೇನೆ. ಈಗ ನಾನು ಓದಿರುವಷ್ಟರ ಬಗ್ಗೆ ಮತ್ತು ಇಡೀ ನಿಮ್ಮ ಯೋಜನೆಯ ಕುರಿತು ನನಗೆ ತಕ್ಷಣದಲ್ಲಿ ಅನ್ನಿಸಿದ ಪ್ರತಿಕ್ರಿಯೆಗಳನ್ನು ಈ ಕೆಳಗೆ ನಮೂದಿಸಿದ್ದೇನೆ. ಇದನ್ನು ತಮ್ಮೊಡನೆ ಹಂಚಿಕೊಳ್ಳುವುದು ಮುಖ್ಯ, ಸಾಧ್ಯವಾದರೆ, ಸಮಾರಂಭಕ್ಕೆ ಬಂದ ಇತರರೊಂದಿಗೂ ಹಂಚಿಕೊಂಡರೆ ಸಂತೋಷ. (ಈ ಪುಟ್ಟ ಲೇಖನವನ್ನು ಯಾರಾದರೂ ನನ್ನ ಪರವಾಗಿ ಓದಬಹುದು, ಅಥವಾ, ಇದನ್ನು ಪ್ರತಿಮಾಡಿ ಹಂಚಲೂಬಹುದು. ಅದು ನಿಮ್ಮ ಅನುಕೂಲಕ್ಕೆ ಬಿಟ್ಟದ್ದು.)

ಇಂತು, ಪ್ರೀತಿಯಿಂದ,

**ಮೈತ್ರೀನ**

ಕೆಲವೇ ದಿನಗಳ ಹಿಂದೆ ಪ್ರಿಯ ಮಿತ್ರರಾದ ಶ್ರೀ ಎಚ್. ವೈ. ರಾಜಗೋಪಾಲ್ ತಮ್ಮ ತಾಯಿ ಶ್ರೀಮತಿ ಎಚ್. ವೈ. ಸರಸ್ವತಿ ಅವರ ಬಗ್ಗೆ ತಮ್ಮ ಕುಟುಂಬದವರೆಲ್ಲ ಜೊತೆಗೂಡಿ ಅತ್ಯಂತ ಶ್ರದ್ಧೆಯಿಂದ ಹೊರತಂದಿರುವ 'ಹಲವು ಮಕ್ಕಳ ತಾಯಿ' ಎಂಬ ಪುಸ್ತಕವನ್ನು ಅಂಚೆಯ ಮೂಲಕ ನನಗೆ ತಲುಪಿಸಿದ್ದಾರೆ. ಈ ತಮ್ಮ ಯೋಜನೆಯ ವಿಚಾರದಲ್ಲಿ ಮುಂಚೆಯೇ ನನಗೆ ತಿಳಿಸಿದ್ದರು, ಆದರೆ ಈ ಪುಸ್ತಕದ ಗಾತ್ರ ನೋಡಿ ನನಗೆ ಆಶ್ಚರ್ಯವಾಯಿತು! ಕ್ರೌನ್ -೧/೪ ಆಕಾರದ ೩೫೦ಕ್ಕೂ ಮಿಕ್ಕು ಪುಟಗಳು! ಈ ಯೋಜನೆಯ ಹಿಂದೆ ಎಂತಹ ತಯಾರಿ ನಡೆದಿರಬಹುದು, ಎಷ್ಟು ಜನರ ಸಹಕಾರ ಪಡೆದಿರಬಹುದು, ಎಷ್ಟು ತಾಳ್ಮೆಯಿಂದ ಸಂಪಾದಕರೂ ಪ್ರಕಾಶಕರೂ ದುಡಿದಿರಬಹುದು, ಇದನ್ನೆಲ್ಲ ಊಹಿಸಿಕೊಂಡರೇ ತಲೆ ಕೆಟ್ಟುಹೋಗುತ್ತದೆ. ಅದರಿಂದ ಎಲ್ಲಕ್ಕೂ ಮೊದಲು 'ಹಲವು ಮಕ್ಕಳ ತಾಯಿ' ಪುಸ್ತಕಕ್ಕೆ ನನ್ನ ನಮನಗಳು!

ಮೊಟ್ಟ ಮೊದಲಿಗೆ, ಈ ಕೃತಿಯನ್ನು ಬರಹದ ಯಾವ ಪ್ರಕಾರ ('ಜ಼ಾನ್ರ') ದಲ್ಲಿ ಸೇರಿಸಬೇಕೆಂಬುದನ್ನು ತೀರ್ಮಾನಿಸುವುದೇ ಕಷ್ಟವಾಗುತ್ತದೆ. ಇದನ್ನು ಚರಿತ್ರೆ, ಆತ್ಮಚರಿತ್ರೆ, ಜೀವನಚರಿತ್ರೆ, ಸಮರ್ಪಣಾ-ಪ್ರಬಂಧ-ಮಾಲಿಕೆ, ನೆನಕೆಗಳು, ಶ್ರದ್ಧಾಂಜಲಿ, ಕೃತಜ್ಞತೆಗಳ

ಅರ್ಪಣೆ ಅಥವಾ ಇವೆಲ್ಲವನ್ನೂ ಒಳಗೊಂಡ (ಪ್ರಸಿದ್ಧ ಬರಹಗಾರ್ತಿ, ಶ್ರೀಮತಿ ವೈದೇಹಿ ಅವರು ಈ ಪುಸ್ತಕದ ಬೆನ್ನುಡಿಯಲ್ಲಿ ಬರೆದಿರುವಂತೆ) 'ಬರಹಗುಚ್ಛ' ಎಂದೇ ಕರೆಯಬಹುದಾಗಿದೆ. ಈ ಕೃತಿಯ ಕೇಂದ್ರ ವ್ಯಕ್ತಿ, ಕುಟುಂಬದ ಕೇಂದ್ರ ಶಕ್ತಿಯೂ ಆಗಿದ್ದ ಒಬ್ಬ ಬಹುಮುಖ ಪ್ರತಿಭೆಯ ತಾಯಿ. ಆದರೆ ಕೇವಲ ತಾವು ಹೆತ್ತ ಮಕ್ಕಳ ತಾಯಿ ಮಾತ್ರವಲ್ಲ, ಅನೇಕ ಮಕ್ಕಳ ಜೀವನವನ್ನು ರೂಪಿಸುವ ಮಹತ್ಕಾರ್ಯದಲ್ಲಿ ತಮ್ಮನ್ನು ತಾವೇ ತೊಡಗಿಸಿಕೊಂಡ ಧೀಮಂತ ವ್ಯಕ್ತಿ. ಸ್ವಂತ ಮಕ್ಕಳಿಗೆ, ವಿಸ್ತೃತ ಕುಟುಂಬದ ಬಂಧುಗಳಿಗೆ, ಬಾಲ್ಯದಲ್ಲಿ ತಮ್ಮನ್ನು ಪ್ರೀತಿ ಮತ್ತು ಶಿಸ್ತಿನಿಂದ ರೂಪಿಸಿದ ಬಾಲಕ/ಬಾಲಕಿಯರಿಗೆ ಕಂಡ ಇವರ ಬಹುಮುಖ ವ್ಯಕ್ತಿತ್ವದ ಸಮಗ್ರ ಪರಿಚಯವನ್ನು ಈ ಕೃತಿಯಲ್ಲಿನ ಬರಹಗಳು ಮಾಡಿಕೊಡುವುದರಲ್ಲಿ ಗೆದ್ದಿವೆಯೆಂದು ಧಾರಾಳವಾಗಿ ಹೇಳಬಹುದು. (ಇಡೀ ಪುಸ್ತಕವನ್ನು ಇನ್ನೂ ಓದದೆಯೇ ಈ ಮಾತನ್ನು ನಾನು ಧೈರ್ಯವಾಗಿ ಹೇಳುತ್ತಿದ್ದೇನೆ.)

ಇಲ್ಲಿನ ಬರಹಗಳನ್ನು ಓದುವಾಗ, 'ಇವು ನಾನು ಹಲವು ದಶಕಗಳಿಂದ ನೋಡುತ್ತಾ ಬಂದಿರುವ ಮತ್ತು ಅವರೊಂದಿಗೆ ಜೊತೆಗೂಡಿ ಕೆಲಸ ಮಾಡಿರುವ ನಮ್ಮ ಹಿರಿಯ ಮಿತ್ರರಾದ ರಾಜಗೋಪಾಲ್ ಅವರ ಮನೆತನಕ್ಕೆ ಸಂಬಂಧಪಟ್ಟದ್ದು, ಅವರು ತಮ್ಮ ತಂದೆತಾಯಿಗಳ ಬಗ್ಗೆ ಇಟ್ಟಿರುವ ಪ್ರೀತಿ ಮತ್ತು ಗೌರವಗಳನ್ನು ವ್ಯಕ್ತಪಡಿಸಲು, ಅದಕ್ಕಿಂತ ಹೆಚ್ಚಾಗಿ ನೆನಪಿನಲ್ಲಿರುವ ಎಷ್ಟೋ ವಿಷಯಗಳು ಕಳೆದುಹೋಗುವ ಮುನ್ನ ದಾಖಲೆ ಮಾಡಲು ಯತ್ನಿಸಿರುವ ಒಂದು ಕೌಟುಂಬಿಕ ಉದ್ಗ್ರಂಥ' ಎಂಬುದನ್ನು ಹಿನ್ನೆಲೆಯಲ್ಲಿಟ್ಟು ಕೊಂಡೇ ಓದಿದ್ದೇನೆ. ಏಕೆಂದರೆ, ಕರ್ನಾಟಕ ಸಂಗೀತದ ವಾಗ್ಗೇಯಕಾರರಾಗಿದ್ದ ಇವರ ತಂದೆ ಶ್ರೀ ಯೋಗಾನರಸಿಂಹಂ ಅವರಾಗಲಿ, ಮೈಸೂರಿನಲ್ಲಿ ಮಕ್ಕಳಕೂಟವನ್ನು ಸ್ಥಾಪಿಸಿ ಪ್ರಸಿದ್ಧರಾಗಿದ್ದ ಶ್ರೀಮತಿ ಸರಸ್ವತಿಯವರಾಗಲೀ ರಾಜಗೋಪಾಲ್ ಮುಖತಃ ತಿಳಿಸಿರುವ ಮಾತುಗಳ ಮೂಲಕವೇ, ಮತ್ತು ಈಗ ಈ ಪುಸ್ತಕದ ಬರಹಗಳ ಮೂಲಕವೇ, ನನಗೆ ಪರಿಚಿತರಾಗಿರುವುದು. ನಾನು ಹೆಸರಿಗೆ ಮೈಸೂರಿನವನಾದರೂ ಅಲ್ಲಿ ಯಾವಾಗಲೂ ಇದ್ದಿರಲಿಲ್ಲವಾಗಿ ಅಲ್ಲಿನ ಪ್ರಸಿದ್ಧ ವ್ಯಕ್ತಿಗಳ ವಿವರಗಳು ಗೊತ್ತಿಲ್ಲವೆಂದೇ ಹೇಳಬೇಕು.

ಈ ಹಿನ್ನೆಲೆಯಲ್ಲಿಯಲ್ಲಿಯೂ ಈ ಪುಸ್ತಕದ ಬರಹಗಳಿಂದ ನನಗೆ ಸರಸ್ವತಿಯವರ ಜೀವನದ ಒಂದು ಸ್ಪಷ್ಟ ಚಿತ್ರ ಪುಸ್ತಕದಲ್ಲಿ ಸಿಗುವ ವಿವರಗಳಿಂದ ಕಣ್ಮುಂದೆ ಬಂದಿತು. ಇಲ್ಲಿನ ಕಥಾನಕ ಓದುಗರನ್ನು ರಂಜಿಸಲು ಬರೆದದ್ದಲ್ಲವಾದರೂ ಅಗತ್ಯ ಮಾಹಿತಿಗಳನ್ನು ಸಂಗ್ರಹಿಸಿ ಇಲ್ಲಿ ಮಂಡಿಸಿರುವವರಲ್ಲಿ ಹಲವರು ಶ್ರೇಷ್ಠ ಬರಹಗಾರರೂ ಆಗಿರುವುದರಿಂದ ವರ್ಣನೆಗಳು ಅತ್ಯಂತ ಮನೋಜ್ಞವಾಗಿ ಮೂಡಿ ಬಂದಿವೆ. ಹೀಗೆ ಓದುವಾಗ ನನಗೆ ಹಲವು ಪ್ರಶ್ನೆಗಳು ಮುಂದೆ ಬಂದವು. ಹಿಂದಿನ ಅನುಭವಗಳನ್ನು ನೆನಪಿನ ಸಹಾಯದಿಂದ



ದಾಖಲೆ ಮಾಡಹೊರಟಾಗ ವಿವರಗಳು ಮಸಕಾಗುವುದಂತೂ ಖಂಡಿತ. ಹಳೆಯದನ್ನು ಅನೇಕ ವರ್ಷಗಳ ನಂತರ ಮೆಲುಕುಹಾಕುತ್ತಾ ಬರೆಯ ಹೊರಟಾಗ ಅಂದು ನಡೆದ ಘಟನೆಗಳು ಮನಸ್ಸಿನ ಮೇಲೆ ಮಾಡಿದ ಪರಿಣಾಮಗಳು ಮತ್ತು ಅವಕ್ಕೆ ಸಂಬಂಧಪಟ್ಟ ಪ್ರತಿಕ್ರಿಯೆಗಳನ್ನು ಯಥಾವತ್ತಾಗಿ ಪುನಃ ನಿರ್ಮಿಸುವುದು ಸಾಧ್ಯವೋ ಅಥವಾ, ಬರಹಗಾರರ ಇಂದಿನ ಅನುಭವದ ಮೂಸೆಯಲ್ಲಿ ಅವು (ಸ್ವಲ್ಪಮಟ್ಟಿಗೆ) ವ್ಯತ್ಯಾಸ-ಗೊಳ್ಳುವುವೋ ಎಂಬುದನ್ನು ನಿರ್ಧರಿಸುವುದು ಕಷ್ಟ. ಇಂತಹ ಇತಿಮಿತಿಗಳನ್ನು ಅರಿತೇ ಲೇಖಕರು ಸಾಕಷ್ಟು ಮುತುವರ್ಜಿವಹಿಸಿ, ಹಲವಾರು ಜನರ ಸಹಾಯದಿಂದ ಪರಸ್ಪರ ತಾಳೆ ನೋಡಿ, ತಾರ್ಕಣೆ ಮಾಡಿಯೇ ಮುಂದುವರೆದಿದ್ದಾರೆ. ಇದು ಅತ್ಯಂತ ಶ್ಲಾಘನೀಯ.

ಮತ್ತೊಂದು ನನಗಾದ ಪ್ರತಿಕ್ರಿಯೆಯ ಬಗ್ಗೆಯೂ ಬರೆಯಬೇಕು. ಓದುಗರೂ ಸಹ ತಮ್ಮ ಬಾಲ್ಯ, ತಮ್ಮ ತಾಯಿ, ತಮ್ಮ ತಂದೆ, ತಮ್ಮ ಹಳೆಯ ಅನುಭವಗಳಿಂದ ಲೇಪಗೊಂಡ (ಬಣ್ಣದ) ಕನ್ನಡಕದಿಂದಲೇ ಓದುವ ಸಾಧ್ಯತೆ ಇದೆ (ಅದನ್ನು ಮೀರಿ ಹೋಗುವುದು ಸಾಧ್ಯವಿಲ್ಲವೆಂದಲ್ಲ, ಆದರೆ ಕಷ್ಟಸಾಧ್ಯ!) ಉದಾಹರಣೆಗೆ, ರಾಜಗೋಪಾಲ್ ಬರೆದ ದೀರ್ಘ ಪ್ರಬಂಧವನ್ನೋದುವಾಗ ನನಗೆ ನೆನಪಾದದ್ದು: ನಮ್ಮ ತಾಯಿಯೂ ಹಾರ್ಮೋನಿಯಮ್ ನುಡಿಸಿಕೊಂಡು ತ್ಯಾಗರಾಜರ ಕೀರ್ತನೆಗಳನ್ನು, ದಾಸರ ಪದಗಳನ್ನು ಹಾಡುತ್ತಿದ್ದರು, ಅವರೂ ಏಳೆಂಟನೆಯ ತರಗತಿಗಿಂತ ಹೆಚ್ಚು ಓದಿದವರಲ್ಲ, ಅವರಿಗೂ ಹನ್ನೆರಡು ಹದಿಮೂರರ ವಯಸ್ಸಿನಲ್ಲೇ ಮದುವೆಯಾಗಿತ್ತು, ಅವರೂ ರಾಮಾಯಣ, ಮಹಾಭಾರತಗಳ ಕಥೆಗಳನ್ನು ಕಣ್ಮುಂದೆ ನಿಲ್ಲುವಂತೆ ಹೇಳುತ್ತಿದ್ದರು, ನಮ್ಮ ಹಿರಿಯಣ್ಣನೂ ಸ್ವಾತಂತ್ರ್ಯದ ಚಳುವಳಿಯಲ್ಲಿ (೧೯೪೬-೪೭) ಪೊಲೀಸರಿಂದ ಲಾಠಿ ಏಟು ತಿಂದಿದ್ದ (ಆಗ ನಾವು ಶಿವಮೊಗ್ಗದಲ್ಲಿದ್ದೆವು, ನಾನಿನ್ನೂ ಮೂರು ವರ್ಷದ ಬಾಲಕ, ಆದರೂ ಮನೆಯಲ್ಲಿ ನಡೆದ ರಂಪ, ಗೋಳಾಟ ಮುಂತಾದ ಹಲವು ಘಟನೆಗಳು ಚಿತ್ತಪಟಲದಿಂದ ಮಾಸಿಲ್ಲ). ನಮ್ಮ ತಾಯಿ ಮತ್ತು ಅಣ್ಣನ ವಿಷಯ ಇಲ್ಲಿ ಹೇಳುವುದಕ್ಕೆ ಕಾರಣ ಪ್ರಸ್ತುತ ಕೇಂದ್ರ ವ್ಯಕ್ತಿಯ ಸುತ್ತಲ ಕಥೆಯಿಂದ ಹೊರನಡೆಯುವುದಕ್ಕಲ್ಲ, ಆದರೆ, ಸಾಮ್ಯತೆಯ ಕಾರಣ ಒಂದು ರೀತಿ ಓದುತ್ತಿದ್ದ ವಿವರಗಳು ಆಪ್ತವಾಗುತ್ತ ಹೋದವು ಎಂದು ತಿಳಿಸಲಿಕ್ಕಷ್ಟೆ! ಮುಂದೆ ನಡೆಯುವ ಕಥಾನಕದಲ್ಲಿ ಸರಸ್ವತಿಯವರ ಪಾತ್ರ ಹಿರಿದಾಗುತ್ತ ಹೋಗುತ್ತದೆ, ಹೊಸ ಹೊಸ, ಆಯಾಮಗಳನ್ನು ಪಡೆದುಕೊಳ್ಳುತ್ತದೆ.

ರಾಜಗೋಪಾಲರ ಅಣ್ಣ ಶ್ರೀ ಶಾರದಾ ಪ್ರಸಾದ್ ('ಶೌರಿ'} ಅವರು ಪ್ರಸಿದ್ಧ ವ್ಯಕ್ತಿ, ರಾಷ್ಟ್ರೀಯ ಮಟ್ಟದ ಸಾಧಕ, ಹೀಗಾಗಿ ಅವರ ಜೀವನದ ಬಗ್ಗೆ ಕೊಂಚವಾದರೂ ನನಗೆ ತಿಳಿದಿತ್ತು. ರಾಜಗೋಪಾಲ್ ಅಂತೂ ನಮಗೆ ಚೆನ್ನಾಗಿಯೇ ಪರಿಚಿತರು, ಹೀಗಾಗೀ ಅವರ ಬಗ್ಗೆಯೂ ಸಾಕಷ್ಟು ಮಾಹಿತಿಯಿತ್ತು. ಆದರೆ, ಇವರ ಕುಟುಂಬದ ಮಿಕ್ಕವರ ಸಾಧನೆಗಳ ಬಗ್ಗೆ ಗೊತ್ತಿರದೇ ಇದ್ದ ಕಿರುಪರಿಚಯವೂ ನನಗೆ ಈ ಪುಸ್ತಕದಿಂದ

ದೊರಕಿತು. ಸರಸ್ವತಿ ಮತ್ತು ಯೋಗಾನರಸಿಂಹಂ ಅವರ ಮಕ್ಕಳಿಗೆ ಮನೆಯಲ್ಲಿ ಎಂತಹ ವಾತಾವರಣವಿತ್ತು, ಎಂತಹ ತಂದೆತಾಯಿಗಳ ಮಾರ್ಗದರ್ಶನ ಸಿಕ್ಕಿತ್ತು ಇವೇ ಮುಂತಾದ ವಿವರಗಳಿಂದ ಶೌರಿ, ರಾಜಗೋಪಾಲ್ ಮುಂತಾದವರ ಕಟ್ಟುನಿಟ್ಟಿನ ಧೋರಣೆಗಳು, ಸಂಘ-ಸಂಸ್ಥೆಗಳಲ್ಲಿ ವಹಿಸುವ ಮುಂದಾಳತ್ವದ ಪರಿ, ಇವರುಗಳ ಕಾರ್ಯ-ವೈಖರಿ, ಕಾರ್ಯ-ತತ್ಪರತೆ ಮತ್ತು ಅಚ್ಚುಕಟ್ಟುತನದ ಹಿಂದೆ ಇವರಿಗೆ ಚಿಕ್ಕ ವಯಸ್ಸಿನಲ್ಲೇ ದೊರೆತ ಅನುಭವ, ಮಾರ್ಗದರ್ಶನ ಮತ್ತು ಶಿಸ್ತಿನ ಪಾಠ ಮುಂತಾದವು ಹೇಗೆ ಪ್ರಭಾವ ಬೀರಿವೆ ಎಂಬುದು ಮನದಟ್ಟಾಗುತ್ತದೆ.

ಈ ಪುಸ್ತಕ ಮತ್ತು ಇಂಥಾ ಪುಸ್ತಕಗಳ ಸ್ಥಾನವೇನು ಎಂಬ ಪ್ರಶ್ನೆ ಎದ್ದೇ ಏಳುತ್ತದೆ. ಇದಕ್ಕೆ ಜವಾಬು ಕೊಡುವುದು ಕಷ್ಟ. ಕುಟುಂಬದವರಿಗೆ ಮತ್ತು ಅವರ ಸುತ್ತಮುತ್ತಲ ಅಭಿಮಾನೀ ವರ್ಗಕ್ಕಂತೂ ಇದು ಬಹು ಬೆಲೆಬಾಳುವ ಕೊಡುಗೆ. ವಂಶವೃಕ್ಷದ ದಾಖಲೆ ಮತ್ತು ವಂಶದ ಪ್ರಮುಖರ ಸಾಧನೆಗಳನ್ನು ಲಿಖಿತರೂಪದಲ್ಲಿ ಶೇಖರಿಸಿಡುವುದು ಅತ್ಯಂತ ಉಪಯುಕ್ತ ಕೆಲಸ ಅನ್ನುವುದರಲ್ಲಿ ಅನುಮಾನವಿಲ್ಲ. ಪುಸ್ತಕದ ಕೊನೆಯ ಭಾಗದಲ್ಲಿರುವ ಅಪರೂಪದ ಚಿತ್ರಗಳಂತೂ ತುಂಬ ಬೆಲೆಬಾಳುವಂತಹವು. ಇನ್ನು 'ಇಂಗ್ಲಿಷ್ ಮತ್ತು ಕನ್ನಡ ಎರಡೂ ಒಟ್ಟಿಗೆ ಇರಬೇಕೇ ಅಥವಾ ಬೇರೆ ಬೇರೆ ಪುಸ್ತಕಗಳಾಗಿ ಪ್ರಕಟವಾಗಬೇಕೇ?' ಎಂಬ ಪ್ರಶ್ನೆಯೂ ಏಳುತ್ತದೆ. ಅಷ್ಟೊಂದು ಜನ ಬರೆಯುವಾಗ ಪುನರುಕ್ತಿಗಳಾಗುವುದು ಸ್ವಾಭಾವಿಕ (ಇದನ್ನು ಸಂಪಾದಕರೂ ಒಪ್ಪಿಕೊಳ್ಳುತ್ತಾರೆ), ಇದನ್ನು ಕನಿಷ್ಠಗೊಳಿಸಲು ಮಾರ್ಗಗಳಿವೆಯೇ? ಇದ್ದರೂ ಅದರ ಬಗ್ಗೆ ತಲೆಕೆಡಿಸಿಕೊಳ್ಳಬೇಕೇ?

ಪುಸ್ತಕದ ಮುದ್ರಣ ಅಂದವಾಗಿದೆ, ರೂಪರೇಷೆಗಳೂ ಉತ್ತಮವಾಗಿವೆ, ವಿಭಜನೆಯೂ ಸಮರ್ಪಕವಾಗಿಯೇ ಇದೆ. ಆದಿಯಲ್ಲಿ ಸೇರಿಸಿರುವ 'ತಾಯಿ'ಯನ್ನು ಕುರಿತ ಮೂರು ಮಹತ್ವದ ಕವನಗಳು ಪುಸ್ತಕದ ಘನತೆಯನ್ನು ಮೇಲಕ್ಕೇರಿಸುತ್ತವೆ. ನಮ್ಮೆಲ್ಲರ ಮೊದಲ ಗುರು ತಾಯಿ, ಅಂಥಾ ತಾಯಿ ಇನ್ನೂ ಹಲವರಿಗೂ ತಾಯಿಯಾದಾಗ ಆಕೆಯ ಪಾತ್ರ ಹಿರಿದಾಗುತ್ತದೆ. ಅಂಥವಳ ಜೀವನ, ದರ್ಶನ ಮತ್ತು ಸಾಧನೆಗಳನ್ನು ಗುರುತಿಸುವ, ಗೌರವಿಸುವ ಮತ್ತು ಇತರರೊಂದಿಗೆ ಹಂಚಿಕೊಳ್ಳುವ ಯತ್ನ ಖಂಡಿತವಾಗಿಯೂ ಸ್ತುತ್ಯರ್ಹ. ಇಂಥಾ ಒಂದು ಸತ್ಕಾರ್ಯವನ್ನು ರಾಜಗೋಪಾಲ್ ಮತ್ತು ಅವರ ಒಡಹುಟ್ಟಿದವರು ಕೈಗೊಂಡು ಅದಕ್ಕಾಗಿ ಕಷ್ಟಪಟ್ಟು ಶ್ರದ್ಧೆಯಿಂದ ಬೇಕಾದ ವಿಷಯಸಾಮಗ್ರಿಯನ್ನು ಶೇಖರಿಸಿ, ಬೇರ್ಪಡಿಸಿ, ಕೇರಿ, ತೂರಿ, ತೊಳೆದು, ಜಾಲಿಸಿ, ಹದಮಾಡಿ, ಅಟ್ಟು ಉಣಬಡಿಸಿದ್ದಾರೆ. ಇದಕ್ಕಾಗಿ ಅವರೆಲ್ಲಾ ವಂದನಾರ್ಹರು!



**ಕೊನೆಯದಾಗಿ:** ಜೂನ್ ೪/೧೧ರಂದು ನಡೆಯಲಿರುವ ಖಾಸಗೀ ಸಭೆಗಳಲ್ಲಿ ಇತರರೊಂದಿಗೆ ಹಂಚಿಕೊಳ್ಳಲು ಆತುರದಲ್ಲಿ ಬರೆದು ಮುಗಿಸಿದ ಕಿರುಲೇಖನವಿದು. ಪುಸ್ತಕದ ಸಾಕಷ್ಟು ಲೇಖನಗಳನ್ನು ಓದಿ ಮುಗಿಸಿದ್ದರೂ ಇನ್ನೂ ಓದಬೇಕಾದ ಲೇಖನಗಳು ಬಾಕಿ ಇವೆ. ಈ ಅವಕಾಶಕ್ಕಾಗಿ ಮತ್ತು ರಾಜಗೋಪಾಲ್ ನನ್ನ ಮೇಲಿಟ್ಟಿರುವ ಪ್ರೀತಿ ಅಭಿಮಾನಗಳಿಗಾಗಿ ನಾನು ಸದಾ ಋಣಿ.



# ಮನದಾಳಕ್ಕೆ ಇಳಿದ 'ಸರಸ್ವತಿ'

**–ನಳಿನಿ ಮೈಯ**

ನಾವು ಓದಿದ ಪುಸ್ತಕಗಳಲ್ಲಿ ಕೆಲವು ಮಾತ್ರ ಬಹಳ ಕಾಲ ಮನದಲ್ಲಿ ಅಚ್ಚೊತ್ತಿ ನಿಲ್ಲುವ ಗುಣವನ್ನು ಪಡೆದಿರುತ್ತವೆ. ಯಾಕೆ? ಆ ಪುಸ್ತಕದ ವಸ್ತುವೇ ಹಾಗಿರಬಹುದು. ಅದು ನಮ್ಮ ಮನದಾಳದಲ್ಲಿ ಭಾವನೆಗಳ ಬಾಗಿಲನ್ನು ತಟ್ಟಿದ್ದು ಆ ರೀತಿಯಾಗಿರಬಹುದು ಅಥವಾ ಅದನ್ನು ಬರೆದ ವಸ್ತುನಿಷ್ಠ ಪ್ರಾಮಾಣಿಕತೆ ಇರಬಹುದು. ಹೀಗೆ ಅನೇಕ ಗುಣಗಳನ್ನೊಳಗೊಂಡು, ತನ್ನ ವೈಶಿಷ್ಟ್ಯಪೂರ್ಣತೆಯಿಂದ ನನ್ನ ಮನದಲ್ಲಿ ಶಾಶ್ವತವಾಗಿ ಸ್ಥಾನಗಳಿಸಿದ ಪುಸ್ತಕ 'ಹಲವು ಮಕ್ಕಳ ತಾಯಿ'.

ಮೊಟ್ಟಮೊದಲು ನನ್ನ ಗಮನ ಸೆಳೆದದ್ದು ಇದು ತಮ್ಮ ತಾಯಿಯ ಬಗ್ಗೆ ಮಕ್ಕಳು ಬರೆದ ಕಥೆ! ಎಂಬುದು. ತಂದೆಯ ಬಗ್ಗೆ ಅದರಲ್ಲೂ ಪ್ರಸಿದ್ಧ ತಂದೆಯ ಬಗ್ಗೆ ಬಹಳಷ್ಟು ಜನ ಗ್ರಂಥಗಳನ್ನು ಬರೆದಿದ್ದಾರೆ. ಕುವೆಂಪು ಅವರ ಬಗ್ಗೆ ತೇಜಸ್ವಿ ಬರೆದ 'ಅಣ್ಣನ ನೆನಪುಗಳು' ಒಂದು ಉದಾಹರಣೆ. ಆದರೆ ತಾಯಿಯ ಬಗ್ಗೆ? ಬೆನ್ನುಡಿಯಲ್ಲಿ ವೈದೇಹಿ ಅವರು ಬರೆದಂತೆ 'ಸಂಬಂಧದ ಅತಿ ನಿಕಟತೆಯೇ ಕಾರಣವಾಗಿ ಸಹಜವೋ ಎಂಬಂತೆ ಅವಜ್ಞೆಗೆ ವಿಸ್ಮರಣೆಗೆ ತುತ್ತಾಗುವ ಮಹಿಳಾ ಜಗತ್ತಿಗೆ ಪ್ರೀತಿ ಗೌರವ ಕೃತಜ್ಞತೆಯಿಂದ ಸಲ್ಲಿಸಿದ ನಮನ' ಈ ಕೃತಿ. 'ಸಾಧಾರಣ'ವೆಂಬಂತೆ ಕಂಡದ್ದರಲ್ಲಿ



ಒಂದು ಅಸಾಧಾರಾಣ ಶಕ್ತಿ ಇದೆ ಎಂಬುದನ್ನು ಗುರುತಿಸಿದ್ದೇ ಈ ಕೃತಿಯ ಹೆಗ್ಗಳಿಕೆ. ಆ ಕಾರಣಕ್ಕಾಗಿ ಈ ಪುಸ್ತಕ ನನ್ನ ಹೃದಯಕ್ಕೆ ಮೊದಲು ಹತ್ತಿರವಾಯಿತು.

ಹೀಗೆ ತಾಯಿಯನ್ನು ಮೆಚ್ಚಿಕೊಳ್ಳುವುದರಲ್ಲೂ ಒಂದು ಅಪಾಯವಿದೆ. ಅದೆಂದರೆ ಅತಿಯಾದ ವೈಭವೀಕರಣ. ಅದೂ ಗತಿಸಿದ ತಾಯಿಯನ್ನು ನೆನೆಯುವಾಗ ಅವಳ ಸದ್ಗುಣಗಳ ಪ್ರಖರ ಬೆಳಕಿನಲ್ಲಿ ಅವಳಲ್ಲಿ ಇದ್ದಿರಬಹುದಾದ ಕುಂದು ಕೊರತೆಗಳು, ನ್ಯೂನತೆಗಳು ಎಲ್ಲದಕ್ಕೂ ಕುರುಡಾಗಿ ವಿಪರೀತ ಗುಣಗಾನ ಮಾಡುವ ಸಾಧ್ಯತೆ ಇರುತ್ತದೆ. ಆದರೆ ಇಲ್ಲಿ ಹಾಗಾಗಿಲ್ಲ ಎಂಬುದು ನನ್ನ ಗಮನವನ್ನು ಸೆಳೆದ ಮತ್ತು ನಾನು ಮೆಚ್ಚಿಕೊಂಡ ಮತ್ತೊಂದು ಅಂಶ. 'ನೆನಪಿನ ಬೇವು-ಬೆಲ್ಲ' ಎಂಬ ರಾಜಗೋಪಾಲ್ ಅವರು ಬರೆದ ತಾಯಿಯ ಜೀವನ ಚರಿತ್ರೆಯಲ್ಲಿ ಅವರು ಹೀಗೆ ಹೇಳುತ್ತಾರೆ. 'ತಾಯ ಬಗ್ಗೆ ಬರೆದುದೆಲ್ಲ ಕೇವಲ ಪೂಜನವಷ್ಟೇ ಅಲ್ಲದೆ ಬೇರೇನಾದರೂ ಆಗಬಲ್ಲುದೆ? ತಾಯಿ ಈ 'ಪವಿತ್ರ ವಸ್ತು'ವೇ ಅಲ್ಲದೆ ಒಬ್ಬ ವ್ಯಕ್ತಿ- ಒಬ್ಬ ಜೀವಂತ ವ್ಯಕ್ತಿ, ತ್ಯಾಗ-ಪ್ರೇಮಗಳ, ಕೋಪ-ತಾಪಗಳ, ಕಷ್ಟ-ನಿಷ್ಠುರಗಳಲ್ಲಿ ಬೆಂದ, ಮಾರ್ದವತೆ-ಕಾಠಿಣ್ಯಗಳ ಒಬ್ಬ ಸಂಕೀರ್ಣ ವ್ಯಕ್ತಿಯೂ ಆಗಬಲ್ಲಳೆ? ಬರೆಯುವವರು ಹೇಗೇ ಬರೆಯಲಿ ತಾಯಂದಿರು ಬಹುಮಟ್ಟಿಗೆ ಇಂಥ ವ್ಯಕ್ತಿಗಳೇ ಅನ್ನಿಸುತ್ತದೆ ನನಗೆ.' ಹೀಗೆ ತಮ್ಮ ತಾಯಿಯನ್ನು ಒಬ್ಬ ದೇವಿಯನ್ನಾಗಿ ಮಾಡದೆ ಮನುಷ್ಯಳನ್ನಾಗಿ ಚಿತ್ರಿಸಿದ ಕೃತಿ ಇದು. ವಸ್ತುನಿಷ್ಠವಾದ, ಅತ್ಯಂತ ಪ್ರಾಮಾಣಿಕವಾದ ದೃಷ್ಟಿಯಿಂದ ತಾಯಿಯ ಜೀವನವನ್ನು ಅವಲೋಕಿಸಿ ಅವಳ ಸದ್ಗುಣಗಳನ್ನು ಮೆಚ್ಚಿ, ಅವಳ ಲೋಪದೋಷಗಳ ಬಗ್ಗೆ ಅನುಕಂಪದ ನಿಲುವನ್ನು ತಾಳುವ ಈ ಕೃತಿ ಎಚ್. ವೈ. ಸರಸ್ವತಿ ಎಂಬ ಒಬ್ಬ ಧೀಮಂತ ಮಹಿಳೆಯ ಬದುಕಿನ ನೈಜ ಚಿತ್ರಣವನ್ನು ಕಟ್ಟಿಕೊಡುತ್ತದೆ.

ಗ್ರಂಥದ ಶುರುವಿನಲ್ಲೇ ತಾಯಿಯ ಬಗ್ಗೆ ಮೂವರು ಬರೆದ ಕವನಗಳಿವೆ. ಅರಮನೆ ಜಯರಾಜಾಚಾರ್ಯ ಅವರು ಬರೆದ 'ಮಾತಾಪಿತೃ ಭಕ್ತಿ'. 'ಹಾಲನೀಯುತಲೆನ್ನ ಲೀಲೆಗೆ ಸಂತಸ ತಾಳಿದರಾರೆನ್ನ ತಾಯಿ' ಎಂದು ತಾಯ್ತನದ ಒಂದು ಆಯಾಮವನ್ನು ತೋರಿಸುತ್ತದೆ. ಮುಂದಿನ ಕವನ ಎಲ್. ಗುಂಡಪ್ಪನವರ 'ತಾಯಿ'. 'ತಾಯಿ ದೇವರೆಂದು ವೇದ ಬಾಯಿ ಬಿಟ್ಟು ಹೇಳುತಿಹುದು' ಎಂದು ತಾಯ್ತನದ ಹಿರಿಮೆಯನ್ನು ಸಾರುತ್ತದೆ. ಮೂರನೆಯದು ಲಂಕೇಶ್ ಅವರ 'ಅವ್ವ'. 'ನೊಂದ ನಾಯಿಯ ಹಾಗೆ ಬೈದು ಗೊಣಗಿ ಗುದ್ದಾಡಿದಳು; ಸಣ್ಣತನ, ಕೊಂಕು, ಕೆರೆದಾಟ ಕೋತಿಯ ಹಾಗೆ; ಎಲ್ಲಕ್ಕೆ ಮನೆತನದ ಉದ್ಧಾರ ಸೂತ್ರ' ಎಷ್ಟು ವಿಭಿನ್ನವಾದ ತಾಯ್ತನ! ಆದರೂ ಎಷ್ಟು ಅಸಲಿ! ಎಷ್ಟು ನಿಜಕ್ಕೂ ನಿಜ! ಮೇಲೆ ತೋರಿದ ತಾಯ್ತನದ ಎಲ್ಲ ಆಯಾಮಗಳೂ ಬದುಕಿನಲ್ಲಿ ಕಂಡುಬರುವಂಥವೇ. ಇಲ್ಲೇ ಈ ಗ್ರಂಥದ ಒಳ ತಿರುಳು ಬಿಚ್ಚಿಕೊಳ್ಳುತ್ತದೆ. ಹೆಣ್ಣು ಮನೆಯ ಆಧಾರ ಸ್ತಂಭ. ಆದರೆ ಜನರ ಕಣ್ಣಿಗೆ ಕಾಣುವುದು ಮನೆಯ ಹೆಬ್ಬಾಗಿಲೇ

ಅಲ್ಲವೆ? ಒಳಗಿನ ಕಂಭ ಯಾರು ನೋಡುತ್ತಾರೆ? ಒಳಗಿನ ಒಳಗಾಗಿ ಕುಟುಂಬದ ಎಲ್ಲ ಸದಸ್ಯರ ಪ್ರತಿಭೆ ಸಾಧನೆಗಳ ಹಿಂದಿನ ಕೇಂದ್ರ ಶಕ್ತಿಯಾಗಿ ಬೆಳಗಿದ ಹೆಣ್ಣು ಶ್ರೀಮತಿ ಎಚ್. ವೈ. ಸರಸ್ವತಿ. ಪತಿ ಯೋಗಾನರಸಿಂಹಂ, ಮಗ ಎಚ್. ವೈ ಶಾರದಾ ಪ್ರಸಾದ್, ಎಲ್ಲರೂ ತಮ್ಮ ತಮ್ಮ ಕ್ಷೇತ್ರಗಳಲ್ಲಿ ವಿಶೇಷ ಸಾಧನೆಗಳನ್ನು ಮಾಡಿದವರು. ಅವರೆಲ್ಲರ ಒಡಲಿನ, ಆತ್ಮದ ಹಸಿವನ್ನು ತಣಿಸುವ ಅನ್ನವಿಕ್ಕಿದ ಕೈ ಈಕೆಯದು. ಹಾಗೆಂದು ಕುಟುಂಬದ ಪಾಲನೆ ಪೋಷಣೆಯಲ್ಲೇ ಜೀವನ ಸವೆಸಿದವರಲ್ಲ. ವೈದೇಹಿಯವರು ಹೇಳಿದಂತೆ 'ಎಲ್ಲರಂತಿದ್ದೂ ಎಲ್ಲರಂತಿಲ್ಲದ ಚೇತನ' ಈಕೆ. ಸ್ವಾತಂತ್ರ್ಯದ ಹೋರಾಟದಲ್ಲಿ ಮನೆಮಂದಿಗೆ ಪೂರಕಶಕ್ತಿಯಾಗಿದ್ದವರು, ಸಂಗೀತ, ಸಾಹಿತ್ಯ, ಸಮಾಜ ಸೇವೆ ಎಲ್ಲದರಲ್ಲೂ ತಮ್ಮನ್ನು ತೊಡಗಿಸಿಕೊಂಡು ಸಾರ್ಥಕ ಬದುಕನ್ನು ಬಾಳಿದಾಕೆ. ಈಕೆಗೆ ಮನೆಯೇ ಪ್ರಪಂಚ, ಪ್ರಪಂಚವೇ ಮನೆ. ತಮ್ಮ ಪರಿಧಿಯೊಳಗೆ ಬಂದ ಎಲ್ಲರನ್ನೂ ತಾಯ್ತನದ ವಾಂಛೆಯಿಂದ ಕಂಡವರು. ಸ್ವತಃ ತಾನು ತಾಯಿ ಇಲ್ಲದ ಮಗುವಾಗಿದ್ದರೂ ಮುಂದೆ ಮಕ್ಕಳ ಕಲ್ಯಾಣ ಕೇಂದ್ರದಲ್ಲಿ ದುಡಿಯುತ್ತಾ ಎಷ್ಟೋ ಜನ ಹೆಣ್ಣು ಮಕ್ಕಳ ಜೀವನದಲ್ಲಿ 'ತಾಯಿ' ಸ್ಥಾನವನ್ನು ತುಂಬಿದವರು.

ಇಂತಹ ಒಂದು ಭವ್ಯ ಬದುಕಿಗೆ ವಿನೀತ ಭಾವದಲ್ಲಿ ಸಲ್ಲಿಸಿದ ಅಕ್ಷರ ನಮನವಾಗಿದೆ ಈ ಕೃತಿ. ಇಲ್ಲಿ ಆಕೆಯ ಬದುಕಿನ ವಿವಿಧ ಆಯಾಮಗಳನ್ನು ನೆನೆಸಿಕೊಳ್ಳುತ್ತಾ ಆರ್ದ್ರ ಭಾವದಲ್ಲಿ ಮಿಡಿದ ಮನಸ್ಸುಗಳೆಷ್ಟೋ ಇವೆ. ಮಕ್ಕಳು, ಮೊಮ್ಮಕ್ಕಳು, ಸೊಸೆಯಂದಿರು, ಇತರ ಬಂಧು ಬಾಂಧವರು, ಸ್ನೇಹಿತರು, ಸಹ ಕಾರ್ಯಕರ್ತರು, ಮಕ್ಕಳ ಕೂಟದ ಅಂದಿನ ಕಿರಿಯ ಸದಸ್ಯರು ಎಲ್ಲರೂ ಆಕೆ ತಮ್ಮ ಜೀವನದಲ್ಲಿ ಬಿಟ್ಟುಹೋದ ಹೆಜ್ಜೆ ಗುರುತುಗಳನ್ನು ಪ್ರೀತಿಯಿಂದ ನೇವರಿಸಿದ್ದಾರೆ. ಅಲ್ಲಲ್ಲಿ ಚಿನಕುರಳಿಯಂತೆ ಕೆಲವು ಚಿಕ್ಕಪುಟ್ಟ ಘಟನೆಗಳು– ಸರೋಜಿನಿ ನಾಯ್ಡು ಭೇಟಿ ಇತ್ತಾಗ ಕೋಣೆ ಚೊಕ್ಕ ಮಾಡುವ ಭರದಲ್ಲಿ ಹುಡುಗಿ ಸರಸ್ವತಿ ಪೊರಕೆಯನ್ನು ಕುರ್ಚಿಯ ಮೇಲೆ ಬಿಟ್ಟು ಸರೋಜಿನಿನಾಯ್ಡು ಅವರು ಅದರ ಮೇಲೆ ಕುಳಿತಿದ್ದು, ತಂಗಿಯ ಮಗ ಕಾಶಿನಾಥನಿಗೆ ಕಾಬೂಲಿವಾಲಾ ಚಿತ್ರ ನೋಡಲು ಅವಸರ ಮಾಡಿ, ತಾನೇ ದುಡ್ಡು ಕೊಟ್ಟು ಕಳಿಸಿದ್ದು...ಹೀಗೇ– ನಮಗೆ ಕಚಗುಳಿ ಇಟ್ಟು ನಗಿಸಿ ಆಕೆಯ ಬಗ್ಗೆ ಒಳನೋಟಗಳನ್ನು ನೀಡುತ್ತವೆ.

'ಸರಸ್ವತಿ ಅವರನ್ನು ಪ್ರಭಾವಿಸಿದ ವ್ಯಕ್ತಿಗಳು' ಎಂಬ ಅಂಕಣದಲ್ಲಿ ಅವರ ತಂದೆ ವಾಜಪಾಯಂ ವೆಂಕಟಸುಬ್ಬಯ್ಯ ಮತ್ತು ಮಕ್ಕಳ ಕೂಟದ ಆರ್. ಕಲ್ಯಾಣಮ್ಮ ಅವರ ಬಗ್ಗೆ ವಿವರವಾದ ಲೇಖನಗಳಿವೆ. ಸರಸ್ವತಿ ಅವರೇ ಬರೆದ ಕೆಲವು ಲೇಖನಗಳು ಮತ್ತು ಪತ್ರಗಳಿವೆ. ಹೀಗೆ ಅಂದು ಬದುಕಿದ್ದು ಇಂದು ಕಣ್ಮರೆಯಾದ ಎಚ್. ವೈ. ಸರಸ್ವತಿ ಎಂಬ ಸ್ತ್ರೀಶಕ್ತಿಯ ವ್ಯಕ್ತಿತ್ವವನ್ನು, ಆ ವ್ಯಕ್ತಿತ್ವ ರೂಪಿತವಾದ ಬಗೆಯನ್ನು ಪದರ ಪದರವಾಗಿ ಬಿಡಿಸಿಟ್ಟ ಒಂದು ಕಲಾ ಕೃತಿ ಇದು.



ಈ ಗ್ರಂಥದ ಇನ್ನೊಂದು ವೈಶಿಷ್ಟ್ಯವೆಂದರೆ ತಮ್ಮ ತಾಯಿಯ ಬದುಕಿಗೆ ಯಾವ ಪ್ರತ್ಯಕ್ಷವಾದ ಕೊಂಡಿ ಇಲ್ಲದಿದ್ದರೂ ಆಕೆಗೆ ಪ್ರಿಯವಾದ ವಸ್ತು ಎಂಬ ಕಾರಣದಿಂದ ಕೆಲವು ಲೇಖನಗಳನ್ನು ಕೊಟ್ಟಿರುವುದು. ಎಚ್. ವೈ ಸರಸ್ವತಿ ಅವರಿಗೆ ಮಹಿಳಾ ಸಾಹಿತ್ಯ ಮತ್ತು ಮಕ್ಕಳ ಸಾಹಿತ್ಯದ ಬಗ್ಗೆ ವಿಶೇಷ ಒಲವು ಇತ್ತಂತೆ. ಹಾಗಾಗಿ ಎಚ್. ಎಸ್. ವೆಂಕಟೇಶಮೂರ್ತಿ ಅವರು ಬರೆದ ಶಿಶು ಸಾಹಿತ್ಯದ ಮೇಲಿನ 'ಪಕ್ವತೆಯ ಹೆಗಲ ಮೇಲೆ ಮುಗ್ಧತೆಯ ಮೆರವಣಿಗೆ' ಮತ್ತು ಎಚ್. ಎಸ್. ರಾಘವೇಂದ್ರರಾವ್ ಬರೆದ 'ಕರ್ನಾಟಕದಲ್ಲಿ ಮಹಿಳಾ ವ್ಯಕ್ತಿತ್ವವು ವಿಕಾಸವಾಗಿರುವ ಬಗೆ ಮತ್ತು ಸಾಹಿತ್ಯದಲ್ಲಿ ಅದರ ಪ್ರತಿಫಲನ' ಎಂಬ ವಿದ್ವತ್ಪೂರ್ಣ ಲೇಖನಗಳಿವೆ. ಅಲ್ಲದೆ ಪ್ರೊಫೆಸರ್ ಎಸ್. ಆನಂದಲಕ್ಷ್ಮಿ ಅವರು ಬರೆದ 'Reminiscences from a Teacher's Diary' ಎಂಬ ಲೇಖನ ಉಪಾಧ್ಯಾಯಿನಿಯರ ಜೀವನದ ಮೇಲೆ ಬೆಳಕು ಚೆಲ್ಲುತ್ತದೆ.

ಸಾಮಾನ್ಯ ಬದುಕಿನಲ್ಲಿ ಅಸಾಮಾನ್ಯತೆಯನ್ನು ಮೆರೆದ ಎಚ್. ವೈ. ಸರಸ್ವತಿ ಅವರಿಗೆ ಧನ್ಯತೆಯ ವಂದನೆಗಳು. ಅವರು ಹಚ್ಚಿದ ದೀಪವನ್ನು ಶ್ರದ್ಧೆಯಿಂದ ಕಾಯ್ದುಕೊಂಡು ಕೃತಜ್ಞತೆಯ ಕಣ್ಣೀರನ್ನು ಪುಸ್ತಕ ರೂಪದಲ್ಲಿ ಅರ್ಪಿಸಿದ ಸಂಪಾದಕವರ್ಗ –ಎಚ್. ವೈ. ರಾಜಗೋಪಾಲ್, ಎಚ್. ವೈ. ಮೋಹನರಾಂ ಮತ್ತು ನೀರಜಾ ಅಚ್ಯುತರಾವ್– ಅವರಿಗೆ ಅಭಿನಂದನೆಗಳು.



# ಎಚ್.ವೈ.ಆರ್. ಅವರ 'ಪ್ರಸ್ತಾಪ'

–ಶ್ರೀಕಾಂತಬಾಬು

ನನ್ನ ಮತ್ತು ರಾಜಗೋಪಾಲ್ ಅವರ ಪರಿಚಯ ಸುಮಾರು ೨೦ ವರ್ಷಗಳದ್ದು. ಮೊದಲೈದು ವರ್ಷಗಳು ಕೇವಲ ಪರಿಚಯವಾಗಿದ್ದು ನಂತರದ ೧೫ ವರ್ಷಗಳು ಸ್ನೇಹದಲ್ಲಿ ಮಾರ್ಪಾಡಾಗಿ ಅವರೊಡನೆ ಸನಿಹದಲ್ಲಿ ಕೆಲಸ ಮಾಡುವ ಅವಕಾಶವಾಗಿದ್ದು ನನ್ನ ಸುಯೋಗವೆಂದು ಭಾವಿಸುತ್ತೇನೆ. ಅವರು ಕನ್ನಡಕ್ಕೆ ಸಂಬಂಧಿಸಿದ ಕೆಲಸಗಳಲ್ಲಿ ಇಲ್ಲಿನ ಕನ್ನಡ ಕೂಟಗಳಲ್ಲಿ ಬಹಳ ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ಅದರಲ್ಲೂ ಸಾಹಿತ್ಯಕ್ಕೆ ಸಂಬಂಧಿಸಿದ ಕಾರ್ಯಕ್ರಮಗಳಿಗೆ ಅವರೇ ರೂವಾರಿಯಾಗಿರುತ್ತಿದ್ದರು. ಈ ಸಮಾರಂಭಗಳಲ್ಲೇ ನನಗೆ ಅವರ ಪರಿಚಯವಾದದ್ದು.

ಕ್ರಿ.ಶ. ೨೦೦೦ರಲ್ಲಿ ರಾಜಗೋಪಾಲ್ ಅವರು ಡಾ. ಚಂದ್ರಶೇಖರ್, ರಂಗಾಚಾರ್ ಮತ್ತು ಕೆಲವು ಸ್ನೇಹಿತರ ಸಹಕಾರದಿಂದ 'ಪ್ರಸ್ತಾಪ' ಎನ್ನುವ ಅನೌಪಚಾರಿಕ ಸಂಸ್ಥೆಯನ್ನು ಸ್ಥಾಪಿಸಿದರು. ಇದರ ಉದ್ದೇಶ ಕನ್ನಡ ಸಾಹಿತ್ಯಕ್ಕೆ ಸಂಬಂಧಿಸಿದ ಕಾರ್ಯಕ್ರಮಗಳನ್ನು ನಡೆಸುವುದು. ಕನ್ನಡ ಸಾಹಿತಿಗಳೊಂದಿಗೆ ಚರ್ಚೆ, ಕನ್ನಡ ಸಾಹಿತ್ಯಕ್ಕೆ ಸಂಬಂಧಿಸಿದ ಕೃತಿಗಳನ್ನು ಕುರಿತು ಚರ್ಚಿಸುವುದು, ಇತ್ಯಾದಿ. ಮೊದಲ ಕಾರ್ಯಕ್ರಮವನ್ನು ಡಾ. ಯು. ಆರ್. ಅನಂತಮೂರ್ತಿಯವರು ನಡೆಸಿಕೊಟ್ಟರು. ಸುಮಾರು ೩೦–೪೦



ಕನ್ನಡ ಸಾಹಿತ್ಯಾಭಿಮಾನಿಗಳು ವರ್ಷಕ್ಕೆ ೪-೫ ಬಾರಿಯಾದರೂ ಭೇಟಿಯಾಗಿ ನಡೆಸುತ್ತಿದ್ದ ಈ ಕಾರ್ಯಕ್ರಮಗಳು ಕಾಲಕ್ರಮೇಣ ಜನಪ್ರಿಯವಾಯಿತು.

ರಾಜಗೋಪಾಲ್ ಅವರ ಆಪ್ತಮಿತ್ರ ಶ್ರೀನಿವಾಸರಾಯರ ಅಕಾಲಿಕ ಮರಣದಿಂದ ದುಃಖಿತರಾಗಿದ್ದ ರಾಜಗೋಪಾಲ್ ಅವರು ಶ್ರೀನಿವಾಸರಾಯರ 'ಪ್ರಸ್ತಾಪ' ಎನ್ನುವ ಪುಸ್ತಕದ ಹೆಸರನ್ನು ಅವರ ನೆನಪಿಗಾಗಿ ಆರಿಸಿಕೊಂಡರು. ಪ್ರಸ್ತಾಪವನ್ನು ಒಂದು ದೊಡ್ಡ ಸಂಸ್ಥೆಯಾಗಿ ಬೆಳೆಸುವ ಉದ್ದೇಶ ಅವರಿಗಿರಲಿಲ್ಲ. ಈ ವೇದಿಕೆ ಕನ್ನಡ ಸಾಹಿತ್ಯದಲ್ಲಿ ತಮಗಿರುವ ತುಡಿತವನ್ನು ಸಮಾನಾಸಕ್ತರ ಜೊತೆಯಲ್ಲಿ ಅಭ್ಯಾಸದ ಮೂಲಕ ಪೂರೈಸಿಕೊಳ್ಳುವುದು ಮಾತ್ರವಾಗಿತ್ತು. ಹಾಗಾಗಿ ಇದನ್ನು ಅನೌಪಚಾರಿಕ ಸಂಸ್ಥೆ-ಯನ್ನಾಗಿಸಿದ್ದರು. ಇಲ್ಲಿ ಅಧ್ಯಕ್ಷರು, ಕಾರ್ಯದರ್ಶಿ, ಖಜಾಂಚಿಗಳ ಸ್ಥಾನವಾಗಲೀ, ಸದಸ್ಯತ್ವದ ಶುಲ್ಕ ಇತ್ಯಾದಿಗಳಾವುದೂ ಇಲ್ಲ. ಅವರ ಆಗಿನ ದೂರದರ್ಶಿತ್ವದ ಪ್ರಸ್ತಾಪ ಈ ಹದಿನೆಂಟು ವರ್ಷಗಳಲ್ಲಿ ೭೮ ಕಾರ್ಯಕ್ರಮಗಳನ್ನು ನಡೆಸಿ ಸದ್ದಿಲ್ಲದೆ ಮುನ್ನಡೆಯುತ್ತಿದೆ. ಕನ್ನಡದ ಬಹುತೇಕ ಹೆಸರಾಂತ ಸಾಹಿತಿಗಳು ಪ್ರಸ್ತಾಪದ ಅತಿಥಿಗಳಾಗಿ ಭಾಗವಹಿಸಿದ್ದಾರೆ.

ಕರ್ನಾಟಕದ ಸಾಹಿತ್ಯವಲಯದಲ್ಲಿ 'ಪ್ರಸ್ತಾಪ'ಕ್ಕೆ ಒಂದು ಗುರುತು ಮತ್ತು ಗೌರವಾನ್ವಿತ ಹೆಸರು ಮಾಡಿಕೊಟ್ಟವರು ಎಚ್‌ವೈಆರ್. ೨೦೧೦ರಲ್ಲಿ ಕನ್ನಡದ ಹೆಸರಾಂತ ಸಾಹಿತಿ ಎಚ್. ಎಸ್. ವೆಂಕಟೇಶಮೂರ್ತಿಯವರು ತಮ್ಮ 'ಅನಾತ್ಮ ಕಥನ'ವನ್ನು 'ಪ್ರಸ್ತಾಪ'ದಲ್ಲಿ ಅಧಿಕೃತವಾಗಿ ಬಿಡುಗಡೆ ಮಾಡಲು ಅಪೇಕ್ಷಿಸಿ ಎಚ್‌ವೈಆರ್ ಅವರಿಂದ ಪುಸ್ತಕ ಬಿಡುಗಡೆ ಮಾಡಿಸಿದರು!

ಬಹುಶಃ ಪ್ರಸ್ತಾಪದ ಯಶಸ್ಸಿನಿಂದ ಉತ್ತೇಜಿತರಾದ ರಾಜಗೋಪಾಲ್ ಕನ್ನಡ ಸಾಹಿತ್ಯದ ವೇದಿಕೆಯ ಕೊರತೆ ಮತ್ತು ಅದರ ಅವಶ್ಯಕತೆ ರಾಷ್ಟ್ರೀಯ ಮಟ್ಟದಲ್ಲೂ ಇರುವುದನ್ನು ಶೀಘ್ರವಾಗಿ ಅರಿತರು. ಇಲ್ಲಿನ ಇತರ ರಾಷ್ಟ್ರೀಯ ಸಂಸ್ಥೆಗಳು ಕೇವಲ ಸಾಂಸ್ಕೃತಿಕ ವೇದಿಕೆಗಳಾಗಿ ಸಾಹಿತ್ಯ ಚಟುವಟಿಕೆಗಳಿಗೆ ಅಷ್ಟಾಗಿ ಗಮನ ಕೊಟ್ಟಿರಲಿಲ್ಲ. ದಕ್ಷಿಣ ಕ್ಯಾಲಿಫೋರ್ನಿಯಾದಲ್ಲಿ ಕನ್ನಡ ಸಾಹಿತ್ಯವನ್ನು ಕುರಿತಾಗಿ ಇದೇ ರೀತಿಯ ಚಟುವಟಿಕೆಗಳನ್ನು ನಡೆಸುತ್ತಿದ್ದ ನಾಗ ಐತಾಳ ಮತ್ತು ಇತರ ಸಮಾನ ಮನಸ್ಕ ಸ್ನೇಹಿತರ ಸಹಕಾರದಿಂದ ೨೦೦೪ರಲ್ಲಿ ಕನ್ನಡ ಸಾಹಿತ್ಯ ರಂಗ (ಕಸಾರಂ) ಎನ್ನುವ ರಾಷ್ಟ್ರೀಯ ಸಂಸ್ಥೆಯನ್ನು ಸ್ಥಾಪಿಸಿದರು. ಪ್ರಸ್ತಾಪ ಮತ್ತು ಕಸಾರಂ ಸಂಸ್ಥೆಗಳು ಅವರ ದೂರದರ್ಶಿತ್ವಕ್ಕೆ ಸಾಕ್ಷಿ. ಒಂದು ಸಣ್ಣ ವಲಯಕ್ಕೆ ಸೀಮಿತವಾಗಿದ್ದ ಪ್ರಸ್ತಾಪಕ್ಕೆ ಸಂವಿಧಾನ ಮತ್ತು ಕಾರ್ಯಕಾರೀ ಸಮಿತಿಯ ಅವಶ್ಯಕತೆಯಿರಲಿಲ್ಲ. ಆದರೆ ಕಸಾರಂ ರಾಷ್ಟ್ರೀಯ ಮಟ್ಟದ ಸಂಸ್ಥೆ. ಅದರ ಬೆಳವಣಿಗೆಗೆ ಸಂವಿಧಾನದ, ಕಾರ್ಯಕಾರೀ ಸಮಿತಿ, ಹಣಕಾಸು ವ್ಯವಸ್ಥೆ ಮತ್ತು ಸದಸ್ಯರ ಅವಶ್ಯಕತೆ ಅಗತ್ಯವಿತ್ತು. ಇದನ್ನರಿತಿದ್ದ ಅವರು ಸೂಕ್ತ ರೀತಿಯಲ್ಲಿ ಕಸಾರಂನ ಶುಭಾರಂಭವನ್ನು ಮಾಡಿದರು. ೨೦೦೪ರಿಂದ ೨೦೧೪ರವರೆವಿಗೆ ಆರು

ಯಶಸ್ವೀ ಸಮ್ಮೇಳನಗಳಿಗೆ ಸೂತ್ರಧಾರರಾಗಿ ಕೆಲಸ ಮಾಡಿ ಕಸಾರಂಗೆ ಭದ್ರ ಅಡಿಪಾಯವನ್ನು ಹಾಕಿಕೊಟ್ಟರು. ಈಗ ೧೩೦ಕ್ಕೂ ಮಿಕ್ಕಿದ ಸದಸ್ಯರಿರುವ ಕಸಾರಂ ಉತ್ತಮ ಪ್ರಗತಿಯ ಪಥದಲ್ಲಿದೆ.

ಕಸಾರಂನ ಮೂಲಕ ಅಮೆರಿಕದ ಕನ್ನಡ ಸಾಹಿತ್ಯಾಭಿಮಾನಿಗಳಿಗೆ ಅವರು ಕೊಟ್ಟ ಅತ್ಯುತ್ತಮ ಕೊಡುಗೆಯೆಂದರೆ, ೨೦೦೬ರಲ್ಲಿ ಖ್ಯಾತ ಸಾಹಿತಿ ಡಾ. ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟ ಅವರ ಸಹಕಾರದೊಂದಿಗೆ 'ಕನ್ನಡ ಸಾಹಿತ್ಯ ಚರಿತ್ರೆ'ಯ ಶಿಬಿರವನ್ನು ಅಮೆರಿಕದ ೧೦ ವಿವಿಧ ಸ್ಥಳಗಳಲ್ಲಿ ನಡೆಸಿದರು. ಒಂದೂವರೆ ದಿನದ ಈ ಶಿಬಿರ ಎಲ್ಲ ಕಡೆಯಲ್ಲೂ ಅತ್ಯಂತ ಯಶಸ್ವಿಯಾಗಿ ನಡೆದವು.

ಇದೇ ಸಮಯದಲ್ಲಿ ಅಂದರೆ ೨೦೦೬ ರಲ್ಲಿ ಕಸಾರಂನ ಚಟುವಟಿಕೆಗಳಲ್ಲಿ ನಿರತರಾಗಿದ್ದ ಅವರು ಪ್ರಸ್ತಾಪದ ಜವಾಬ್ದಾರಿಯನ್ನು ನನಗೆ ರವಾನಿಸಿದರು. ಆಗಿನಿಂದ ನನಗೆ ರಾಜಗೋಪಾಲ್ ಅವರೊಡನೆ ಸನಿಹದಲ್ಲಿ ಕೆಲಸ ಮಾಡುವ ಅವಕಾಶ ದೊರಕಿತು. ಮುಂದೆ ೨೦೧೧ರಲ್ಲಿ ಕಸಾರಂ ಸದಸ್ಯನಾಗಿ ಮತ್ತು ೨೦೧೪ರಲ್ಲಿ ಅದರ ಕಾರ್ಯದರ್ಶಿಯಾಗಿ ಅವರೊಡನೆ ಇನ್ನೂ ನಿಕಟವಾಗಿ ಕೆಲಸ ಮಾಡುವ ಅದೃಷ್ಟ ಒದಗಿಬಂದಿತು. ಈ ಅವಕಾಶಗಳಿಂದ ರಾಜಗೋಪಾಲ್ ಅವರು ಕೆಲಸ ಮಾಡುವ ರೀತಿ, ಅವರ ಯೋಚನಾ ವಿಧಾನ, ಇತ್ಯಾದಿಗಳು ನನ್ನನ್ನು ಆಕರ್ಷಿಸಿದವು. ಅವರ ಕೆಲವು ಗುಣಗಳನ್ನು ಇಲ್ಲಿ ನೆನಪಿಸಿಕೊಳ್ಳುವುದು ಸೂಕ್ತವೆಂದು ಭಾವಿಸುತ್ತೇನೆ.

ರಾಜಗೋಪಾಲ್ ಅವರದು ಸರಳ, ನೇರ, ದೃಢ ಮತ್ತು ಸ್ಪಷ್ಟ ವ್ಯಕ್ತಿತ್ವ. ಅವರ ನಡೆ, ನುಡಿಗಳನ್ನು ಯಾವುದೇ ಕಾರಣಕ್ಕೂ ಅಪಾರ್ಥ ಮಾಡಿಕೊಳ್ಳಲು ಸಾಧ್ಯವೇ ಇಲ್ಲ. ಏಕೆಂದರೆ ಅವರ ನಡೆ ಮತ್ತು ನುಡಿಗಳಲ್ಲಿ ವ್ಯತ್ಯಾಸವಿರಲಿಲ್ಲ.

ರಾಜಗೋಪಾಲ್ ಅವರು Ideal Manager ಆಗಿದ್ದರು. ಯಾವುದೇ ಕಾರ್ಯಕ್ರಮವನ್ನಾಗಲೀ ಅದನ್ನು ನಿಷ್ಠೆಯಿಂದ ಚೆನ್ನಾಗಿ ನಡೆಸಬೇಕೆನ್ನುವುದು ಅವರ ನಿಯಮ. ಇದರಲ್ಲಿ 'ನಿಷ್ಠೆ'ಯೆನ್ನುವ ಪದವನ್ನು ಗಮನಿಸಬೇಕು. ಅವರಿಗೆ 'ಜವಾಬ್ದಾರಿ' ತೆಗೆದುಕೊಂಡ ಮೇಲೆ ಅದನ್ನು ಚೆನ್ನಾಗಿ ನಡೆಸಲೇ ಬೇಕು. ಅದರಲ್ಲಿ ಇತರ ಮುಖ್ಯ ವಿಷಯಗಳಾದ – ಎಷ್ಟು ಜನ ಬರುತ್ತಾರೆ, ಯಾರ್ಯಾರು ಬರುತ್ತಾರೆ, ಎಷ್ಟು ಹಣ ಸಂಗ್ರಹಿಸಿದ್ದೇವೆ, ಇತ್ಯಾದಿಗಳು ಮುಖ್ಯವಲ್ಲ. ಸಭೆಗೆ ಬಂದ ಎಲ್ಲರಿಗೂ ಒಂದು ಒಳ್ಳೆಯ ಅನುಭವವನ್ನು ಕೊಡುವುದು ಮಾತ್ರ ಅವರ ಉದ್ದೇಶವಾಗಿತ್ತು. ಉಳಿದ ಸಮಸ್ಯೆಗಳನ್ನು ಪರಿಹರಿಸುವುದಕ್ಕೂ ಸಭೆಯನ್ನು ಉತ್ತಮವಾಗಿ ನಡೆಸುವುದಕ್ಕೂ ಸಂಬಂಧವಿರಬಾರದು. ಇದೇ ಅವರ 'ನಿಷ್ಠೆ'. ಈ 'ನಿಷ್ಠೆ'ಯೇ ನನಗೆ ಬಹಳ ಇಷ್ಟವಾದದ್ದು. ಅವರ 'ನಿಷ್ಠೆ'ಗೆ ಕಾರಣ ಹತ್ತು ಹಲವು – ಕಾರ್ಯಕ್ರಮ ನೋಡಲು ಬರುವವರ



ಸಮಯಕ್ಕೆ 'ನಿಷ್ಠೆ', ಅವರು ಮಾಡುವ ಧನ ಸಹಾಯಕ್ಕೆ 'ನಿಷ್ಠೆ', ಸ್ವಯಂಸೇವಕರ ಸೇವೆಗೆ 'ನಿಷ್ಠೆ', ಆಹ್ವಾನಿತ ಅತಿಥಿಗಳ ಸಮಯ ಮತ್ತು ಗೌರವಕ್ಕೆ 'ನಿಷ್ಠೆ', ಇತ್ಯಾದಿ. ಈ ಕಾರಣಗಳಿಗಾಗಿಯೇ ಅವರು ನಿರ್ವಹಿಸಿದ ಕಾರ್ಯಕ್ರಮಗಳ ಯಶಸ್ಸು ಶತಃಸಿದ್ಧವಾಗಿತ್ತು!

ಅವರಿಗೆ ವೈಭವೀಕರಣದಲ್ಲಿ, ದುಂದು ವೆಚ್ಚದಲ್ಲಿ ಸ್ವಲ್ಪವೂ ಆಸಕ್ತಿಯಿರಲಿಲ್ಲ. ಅದರಲ್ಲೂ ಸಂಗ್ರಹಿಸಿದ ಹಣವನ್ನು ವೆಚ್ಚಮಾಡುವುದರಲ್ಲಿ ತಮ್ಮ ಸ್ವಂತ ಹಣಕ್ಕಿಂತಲೂ ಹೆಚ್ಚು ಜಾಗ್ರತೆ ವಹಿಸುತ್ತಿದ್ದರು. ಹಾಗೆಂದು ಯಾವುದಕ್ಕೂ ಕೊರತೆ ಮಾಡುತ್ತಿರಲಿಲ್ಲ. ಗೌರವ ಮತ್ತು ಘನತೆ ಕೂಡ ಅವರಿಗೆ ಮುಖ್ಯವಾಗಿತ್ತು.

ಅವರು ಕಾರ್ಯಕ್ರಮಗಳನ್ನು ನಿಯೋಜಿಸುವುದು ಅದ್ಭುತವಾಗಿತ್ತು. ಆಕಸ್ಮಿಕ ತಪ್ಪುಗಳನ್ನು ಹೊರತುಪಡಿಸಿದರೆ ಬೇರೆ ಯಾವ ರೀತಿಯ ಪ್ರಮಾದಕ್ಕೂ ಆಸ್ಪದವಿರಲಿಲ್ಲ. ಕಾರ್ಯಕ್ರಮದ ಪ್ರತಿ ನಿಮಿಷದ ವಿವರವನ್ನು ಮುಂಚೆಯೇ ಚರ್ಚಿಸಿ ನಿರ್ಧರಿಸುತ್ತಿದ್ದರು.

ಒಮ್ಮೆ ಮಾಡಿದ ತಪ್ಪನ್ನು ಮತ್ತೆ ಮಾಡಿದರೆ ಅವರಿಗೆ ತುಂಬಾ ಅಸಮಾಧಾನ-ವಾಗುತ್ತಿತ್ತು. ಕಾರ್ಯಕ್ರಮದ ನಂತರ ಅಭಿಪ್ರಾಯಗಳನ್ನು ಸಂಗ್ರಹಿಸಿಡುತ್ತಿದ್ದರು. ಅದು ಅವರಿಗೆ ಮುಂದಿನ ಕಾರ್ಯಕ್ರಮದಲ್ಲಿ ಉಪಯೋಗಕ್ಕೆ ಬರುತ್ತಿತ್ತು.

ನನಗೆ ಅವರು ಪ್ರತಿ ಪ್ರಸ್ತಾಪ ಕಾರ್ಯಕ್ರಮದ ಹಿಂದಿನ ದಿನ ಮತ್ತು ಮಾರನೆಯ ದಿನ ತಪ್ಪದೇ ಫೋನ್ ಮಾಡುತ್ತಿದ್ದರು. ಹಿಂದಿನ ದಿನ ಕಾರ್ಯಕ್ರಮದ ವ್ಯವಸ್ಥೆಯನ್ನು ಕುರಿತು ವಿವರವಾಗಿ ವಿಚಾರಿಸುತ್ತಿದ್ದರು. ಮತ್ತೆ ಮಾರನೆಯ ದಿನ ಕಾರ್ಯಕ್ರಮ ಹೇಗೆ ನಡೆಯಿತು ಎಂದು ತಮ್ಮ ಸ್ಪಷ್ಟ ಅನಿಸಿಕೆಗಳನ್ನು ತಿಳಿಸುತ್ತಿದ್ದರು. ಚೆನ್ನಾಗಿ ನಡೆದಿದ್ದಲ್ಲಿ ಬಹಳ ಮೆಚ್ಚುಗೆ ವ್ಯಕ್ತಪಡಿಸುತ್ತಿದ್ದರು. ಏನಾದರೂ ಲೋಪ ದೋಷಗಳಾಗಿದ್ದಲ್ಲಿ ಅದನ್ನು ತೋರಿಸಿಕೊಡುತ್ತಿದ್ದರು.

ರಾಜಗೋಪಾಲ್ ಅವರಿಗೆ ಸಾಹಿತ್ಯದ ಮೇಲಿನ ಆಸಕ್ತಿಯಷ್ಟೇ ರುಚಿಯಾದ ಅಡುಗೆಯ ಮೇಲೂ ಇತ್ತು. ಪ್ರಸ್ತಾಪದ ಇನ್ನೊಂದು ವಿಶೇಷವೆಂದರೆ – ಮಧ್ಯಾಹ್ನದ ಊಟ. ಮುಂಚೆಯೇ ನಿರ್ಧರಿಸಿದಂತೆ ಪ್ರಸ್ತಾಪದ ಸದಸ್ಯರು ರುಚಿ-ರುಚಿಯಾದ ವಿವಿಧ ಅಡುಗೆಯ ಪದಾರ್ಥಗಳನ್ನು ತರುತ್ತಾರೆ. ಒಳ್ಳೆಯ ಸಾಹಿತ್ಯದ ಚರ್ಚೆಯ ನಂತರ ಒಳ್ಳೆಯ ಊಟ ಪ್ರಸ್ತಾಪದ ವೈಶಿಷ್ಟ್ಯ! ರಾಜಗೋಪಾಲ್ ಊಟದ ಸಮಯದಲ್ಲಿ ಅವರಿಗಿಷ್ಟವಾದ ಅಡುಗೆ ಪದಾರ್ಥವನ್ನು ತಂದವರನ್ನು ತಪ್ಪದೇ ಅಭಿನಂದಿಸಿ ಮೆಚ್ಚುಗೆ ವ್ಯಕ್ತಪಡಿಸುತ್ತಿದ್ದರು. ಅವರಿಗೆ ನಮ್ಮಮ್ಮ ಮಾಡುತ್ತಿದ್ದ ನಿಂಬೆಹಣ್ಣಿನ ಉಪ್ಪಿನಕಾಯಿ ತುಂಬಾ ಇಷ್ಟವಾಗಿತ್ತು. ಅವಕಾಶ ಸಿಕ್ಕಾಗಲೆಲ್ಲಾ ಅದರ ರುಚಿಯನ್ನು ಕೊಂಡಾಡುತ್ತಿದ್ದರು.

ರಾಜಗೋಪಾಲ್, ಗುಂಡು ಮತ್ತು ನಾನು ಕಸಾರಂನ ಸಂವಿಧಾನವನ್ನು ಸರಳೀಕರಿಸುವ ಕೆಲಸದಲ್ಲಿ ಸುಮಾರು ದಿನ ಹಲವಾರು ಘಂಟೆಗಳು ಫೋನಿನಲ್ಲಿಯೂ

ಮತ್ತು ಕೆಲವು ಸಲ ಮುಖತಃ ಭೇಟ್ಟಿಯಾಗಿಯೂ ಚರ್ಚೆ ನಡೆಸುತ್ತಿದ್ದೆವು. ಆಗ ಅವರಿಗೆ ಕಸಾರಂ ಬಗೆಗಿದ್ದ ಕಳಕಳಿ ನಮಗೆ ಎದ್ದು ಕಾಣುತ್ತಿತ್ತು. ಹಲವಾರು By-Law ಪುಸ್ತಕಗಳನ್ನು ಲೈಬ್ರರಿಯಿಂದ ತಂದು, ಓದಿ ನಮಗೆ ವಿವರಿಸುತ್ತಿದ್ದರು. ಸಂಸ್ಥೆಯ ಹಿತಾಸಕ್ತಿಗಳನ್ನು ಕುರಿತು ಸದಾಕಾಲ ಯೋಚಿಸುತ್ತಿದ್ದರು. ಭವಿಷ್ಯದ ದೃಷ್ಟಿಯಿಂದ ರಾಜಕೀಯ ಮತ್ತು ಸ್ವಹಿತಾಸಕ್ತಿಯ ವ್ಯಕ್ತಿಗಳಿಂದ ಕಸಾರಂನ್ನು ಸಂರಕ್ಷಿಸುವುದು ತುಂಬಾ ಮುಖ್ಯವೆಂದು ಅವರು ಭಾವಿಸಿದ್ದರು.

ರಾಜಗೋಪಾಲ್ ಅವರ ಹಲವಾರು ಗುಣಗಳು ಅತ್ಯಂತ ಅನುಕರಣೀಯ–ವಾಗಿದ್ದರೂ ಅವರ ಎರಡು ಗುಣಗಳು ನನಗೆ ತುಂಬಾ ಮೆಚ್ಚುಗೆಯಾಗಿದ್ದವು. ಅವುಗಳು – Attention to details ಮತ್ತು expressing himself clearly with least word. ನಾನು ಮೇಲೆ ಹೇಳಿದಂತೆ ಅವರು ವಿವರಗಳಿಗೆ ಬಹಳ ಮಹತ್ವ ಕೊಡುತ್ತಿದ್ದರು. ವಿವರಗಳು ನಮಗೆ ಸ್ಪಷ್ಟವಾಗಿಲ್ಲದಿದ್ದಲ್ಲಿ ಯಾವುದೇ ಕಾರ್ಯ ಸುಗಮವಾಗಿ ನಡೆಯುವುದಿಲ್ಲವೆಂದು ಅವರು ನಂಬಿದ್ದರು. ಅವರಿಗೆ ಹೇಗೋ ನಡೆಯುತ್ತದೆ ಅಥವಾ ಆಮೇಲೆ ನೋಡಿಕೊಳ್ಳೋಣ ಎನ್ನುವ ಧೋರಣೆ ಸ್ವಲ್ಪವೂ ಇಷ್ಟವಾಗುತ್ತಿರಲಿಲ್ಲ.

ಇನ್ನು ಅವರ ಮಾತು ಮತ್ತು ಬರವಣಿಗೆಗಳನ್ನು ಗಮನಿಸಿದರೆ ಅವರು ಅನಗತ್ಯವಾಗಿ ವಿಷಯಗಳನ್ನು ಎಳೆಯುತ್ತಿರಲಿಲ್ಲ. ಸ್ಪಷ್ಟವಾಗಿ ನೇರವಾದ ಮತ್ತು ಸೂಕ್ತವಾದ ಪದಗಳಿಂದ ತಮ್ಮ ಅನಿಸಿಕೆ ಅಥವಾ ಅಭಿಪ್ರಾಯಗಳನ್ನು ಹೇಳುತ್ತಿದ್ದರು. ಸುತ್ತಿ ಬಳಸಿ ಗೋಜಲು ಮಾಡುವ ಪರಿಪಾಠ ಅವರದಲ್ಲ. ಬಹಳ ಕಡಿಮೆ ಪದಗಳಲ್ಲಿ ತಮ್ಮ ಅನಿಸಿಕೆಯನ್ನು ಸ್ಪಷ್ಟೀಕರಿಸುತ್ತಿದ್ದರು. ಹಾಗಾಗಿ ನನಗೆ ಅವರನ್ನು ಅರ್ಥ ಮಾಡಿಕೊಳ್ಳುವುದು ಸುಲಭವಾಗಿತ್ತು.

ರಾಜಗೋಪಾಲ್ ಅವರಿಗೆ ಸಾಹಿತ್ಯವಲ್ಲದೆ ಸಂಗೀತ, ನಾಟಕ, ಇತ್ಯಾದಿಗಳಲ್ಲೂ ಬಹಳ ಆಸಕ್ತಿ ಮತ್ತು ತಿಳುವಳಿಕೆ ಇತ್ತು. ಆದರೆ ಪ್ರಸ್ತಾಪ ಕಾರ್ಯಕ್ರಮದಲ್ಲಿ ಸಾಹಿತ್ಯಕ್ಕೆ ಪೂರಕವಲ್ಲದ ಸಂಗೀತ, ಹಾಡು, ಇತ್ಯಾದಿಗಳನ್ನು ಸೇರಿಸಲು ಇಷ್ಟಪಡುತ್ತಿರಲಿಲ್ಲ. ಸಭೆಯ ಮೂಲ ಉದ್ದೇಶಗಳಿಗೆ ಚ್ಯುತಿ ತರುವ ಯಾವುದೇ ಪ್ರಕ್ರಿಯೆ ಅವರಿಗೆ ಹಿಡಿಸುತ್ತಿರಲಿಲ್ಲ. ಸಭೆಯಲ್ಲೂ ಕೂಡ ಕೆಲ ಸಮಯ ವಾದ, ವಿವಾದಗಳಾದಲ್ಲಿ ಅವುಗಳನ್ನು ಸಭ್ಯರೀತಿಯಲ್ಲಿ ದನಿಯೇರಿಸದೆ ಹೇಳು–ಕೇಳುವುದನ್ನು ಅವರು ಪ್ರತಿಪಾದಿಸುತ್ತಿದ್ದರು. ಅವರು ಕೆಲ ಬಾರಿ ಕೋಪಿಸಿಕೊಂಡಿರುವುದನ್ನು ಗಮನಿಸಿದ್ದರೂ ಅವರು ಉದ್ರೇಕಕೊಂಡು ಸ್ಥಿಮಿತ ಕಳೆದುಕೊಂಡದ್ದನ್ನು ಎಂದೂ ನೋಡಲಿಲ್ಲ.

ಅವರ ಈ ನೇರ ಮತ್ತು ಸ್ಪಷ್ಟ ನಿಲುವು ಅವರೊಡನೆ ಕೆಲಸ ಮಾಡುತ್ತಿದ್ದ ಹಲಕೆಲವರ ಅಪಾರ್ಥಕ್ಕೆ ಕಾರಣವಾಗಿದ್ದೀತು. ಆದರೆ ಅವರಿಗೆ ಅದು ಅವರ ಸ್ವಾಭಾವಿಕ ಗುಣವಾಗಿತ್ತು. ಯಾವುದೇ ಕಾರಣಕ್ಕೂ ಕೆಲವರನ್ನು ಸಂತೋಷಪಡಿಸಲಿಕ್ಕೆ ಅವರು



ತಮ್ಮ ಈ ಗುಣಗಳನ್ನು ಬದಲಾಯಿಸುವಂತಿರಲಿಲ್ಲ. ಅವರ ಈ ಗುಣಗಳು ನನಗೆ ಕಾರಂತರ ಮತ್ತು ಡಿವಿಜಿ ಅವರ ನೆನಪು ತರುತ್ತಿತ್ತು.

ರಾಜಗೋಪಾಲ್ ಅವರಿಗೆ ತಮ್ಮ ಕೆಲ ನಿಲುವುಗಳು ನಿಷ್ಠುರವೆನಿಸಿ ಹಲವರು ವಿರೋಧಿಸುವುದು ಅವರಿಗೆ ತಿಳಿದಿತ್ತು. ಇದರಿಂದ ಅವರಿಗೆ ಖೇದವಾಗುತ್ತಿತ್ತು ಆದರೆ ಮಾತ್ರ ಅವರು ತಮಗೆ ಸರಿಯೆನಿಸಿರುವ ತಮ್ಮ ನಿರ್ಧಾರವನ್ನು ಬದಲಿಸಲು ಸಿದ್ಧರಿರಲಿಲ್ಲ. ಅಷ್ಟು ಸುಲಭವಾಗಿ ಅವರು compromise ಆಗುತ್ತಿರಲಿಲ್ಲ.

ರಾಜಗೋಪಾಲ್ ಅವರು ತೀರಿಕೊಳ್ಳುವ ಮೊದಲು ಅಕ್ಟೋಬರ್ ೮, ೨೦೧೭ ರಂದು ನಡೆದ ಪ್ರಸ್ತಾಪ – ೭೫ನೆಯ ಕಾರ್ಯಕ್ರಮ, ಅವರನ್ನು ಸನ್ಮಾನಿಸುವುದಕ್ಕಾಗಿತ್ತು. ಅವರ ಪುಸ್ತಕ 'ಹಲವು ಮಕ್ಕಳ ತಾಯಿ' ಗೆ ಪ್ರಕಾಶಕರ ಪ್ರಶಸ್ತಿ ಸಿಕ್ಕಿದುದನ್ನು ಅಭಿನಂದಿಸಲು ಮತ್ತು ಆ ಪುಸ್ತಕವನ್ನು ಕುರಿತು ಸದಸ್ಯರು ತಮ್ಮ ಅಭಿಪ್ರಾಯಗಳನ್ನು ತಿಳಿಸುವುದಕ್ಕಾಗಿ ಆಗಿತ್ತು. ಸಭೆಯಲ್ಲಿ ಅನೇಕರು ಪುಸ್ತಕದ ಕೆಲ ಭಾಗಗಳನ್ನು ಓದಿ ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದರು. ರಾಜಗೋಪಾಲ್ ಆ ದಿನ ತುಂಬಾ ಹರ್ಷಚಿತ್ತರಾಗಿದ್ದರು. ಸಂತೃಪ್ತಿಯಿಂದ ಅವರ ಮನಸ್ಸು ತುಂಬಿ ಬಂದಿತ್ತು. ಹಲವಾರು ಅನುಭವಗಳನ್ನು ನಮ್ಮೆಲ್ಲರೊಂದಿಗೆ ಹಂಚಿಕೊಂಡರು. ಆ ದಿನದ ಕಾರ್ಯಕ್ರಮದ ರೆಕಾರ್ಡಿಂಗನ್ನು ತಮ್ಮ ಸೋದರ–ಸೋದರಿಯರಿಗೆ ತೋರಿಸಲು ನನ್ನಿಂದ ತೆಗೆದುಕೊಂಡರು. ಅವರ ಪ್ರೀತಿಯ 'ಪ್ರಸ್ತಾಪ' ಅವರಿಗೆ ಆ ದಿನ ಅತ್ಯಂತ ಸಂತೋಷ ಕೊಟ್ಟಿದ್ದು ನಮಗೆಲ್ಲ ತುಂಬಾ ತೃಪ್ತಿ ತಂದಿತು. ಆದರೆ ಅದರ ಮುಂದಿನ ಪ್ರಸ್ತಾಪದಲ್ಲೇ ಅವರಿಗೆ ಸಂತಾಪ ಸೂಚಿಸುವಂತಾದದ್ದು ನಮ್ಮ ದುರಾದೃಷ್ಟವೇ ಸರಿ.

ಪ್ರಸ್ತಾಪ ಮತ್ತು ಕಸಾರಂಗಗಳು ಕನ್ನಡ ಸಾಹಿತ್ಯ ಕುರಿತು ಒಳ್ಳೆಯ ಕೆಲಸ ಮಾಡುವುದನ್ನು ಇದೇ ರೀತಿ ಮುಂದುವರೆಸುತ್ತಾ ಎಚ್. ವೈ. ರಾಜಗೋಪಾಲ್ ಅವರ ಶಾಶ್ವತ ನೆನಪಾಗಿ ನಮ್ಮೊಂದಿಗೆ ಹಲಕಾಲ ಉಳಿಯುವುದರಲ್ಲಿ ಸಂದೇಹವಿಲ್ಲ.

ರಾಜಗೋಪಾಲ್ ಅವರೊಂದಿಗೆ ಕೆಲಸ ಮಾಡುತ್ತಾ ಕೆಲಕಾಲ ಕಳೆಯುವ ಸೌಲಭ್ಯ ದೊರಕಿದ್ದು ನನ್ನ ಸೌಭಾಗ್ಯವೆಂದು ಭಾವಿಸುತ್ತೇನೆ. ಅವರು ಗುರುವಿನಂತೆ ನನಗೆ ನೀಡಿದ ಮಾರ್ಗದರ್ಶನ ನನ್ನ ಪಾಲಿಗೆ ಅತ್ಯುತ್ತಮ ಪಾಠವಾಗಿದೆ.

■

# ಕನ್ನಡ ಸಾಹಿತ್ಯ ರಂಗದ ಪಿತಾಮಹನೊಂದಿಗೆ

**–ವಲ್ಲೀಶ ಶಾಸ್ತ್ರಿ**

ನಾನೊಬ್ಬ ಕಂಪ್ಯೂಟರ್ ಕನ್ಸಲ್ಟಂಟ್. ಪ್ರಾಜೆಕ್ಟುಗಳ ಮೇಲೆ ನಾನು ಅಮೆರಿಕದ ಉದ್ದಗಲಕ್ಕೂ ಪ್ರಯಾಣಿಸುತ್ತಿರುತ್ತೇನೆ. ದಕ್ಷಿಣ ಕ್ಯಾಲಿಫೋರ್ನಿಯಾಗೆ ಬಂದು ಸೇರಿದ್ದು ೨೦೦೧ ಇಸವಿಯಲ್ಲಿ. ಇಲ್ಲಿನ ಕನ್ನಡ ಸಂಘಗಳ ಕಾರ್ಯಕ್ರಮಗಳಲ್ಲಿ ಸ್ವಯಂಸೇವಕನಾಗಿ ಸಕ್ರಿಯವಾಗಿ ಭಾಗವಹಿಸುತ್ತಾ ಬಂದಿದ್ದೇನೆ. ಆ ಸಮಯದಲ್ಲಿ ಬಹಳ ಕನ್ನಡಿಗರು ಪರಿಚಯವಾದರು. ಅಂತಹವರಲ್ಲಿ ಡಾ. ನಾಗ ಐತಾಳರೂ ಒಬ್ಬರು. ೨೦೦೩ರ ಸಮಯದಲ್ಲಿ ನ್ಯೂಜೆರ್ಸಿಯಲ್ಲಿ ಒಂದು ಪ್ರಾಜೆಕ್ಟಿನಲ್ಲಿ ಕೆಲಸ ಮಾಡುತ್ತಿದ್ದೆ. ವಾರಾಂತ್ಯದಲ್ಲಿ ಲಾಸ್ ಏಂಜಲಿಸ್ ಹಾಗೂ ನ್ಯೂಜೆರ್ಸಿ ನಡುವೆ ಪ್ರಯಾಣ ಮಾಡುತ್ತಿದ್ದೆ. ಒಂದು ವಾರಾಂತ್ಯ ಐತಾಳರು ನ್ಯೂಜೆರ್ಸಿಯಲ್ಲಿರುವ ತಮ್ಮ ಮೊಮ್ಮಗನ ಹುಟ್ಟು ಹಬ್ಬಕ್ಕೆ ನನ್ನನ್ನು ಆಹ್ವಾನಿಸಿದ್ದರು. ಆ ವಾರಾಂತ್ಯ ಅಲ್ಲೇ ಉಳಿದುಕೊಂಡು ಹುಟ್ಟು ಹಬ್ಬ ಸಮಾರಂಭಕ್ಕೆ ಹೋಗಿದ್ದೆ. ಇದು ನಡೆದಿದ್ದು ಶನಿವಾರ.

ಅದೇ ಸಮಯದಲ್ಲಿ ಐತಾಳರು 'ಶಾಸ್ತ್ರಿಗಳೆ, ನಾಳೆ ಇಲ್ಲೇ ಇರುತ್ತೀರ?' ಎಂದು ಕೇಳಿದರು. ಅದಕ್ಕೆ 'ಹ್ಞೂ' ಎಂದೆ. ಅದಕ್ಕೆ ಅವರು 'ಹಾಗಾದರೆ ನಾಳೆ ಒಂದು ಸಾಹಿತ್ಯಾಸಕ್ತರ ಗುಂಪೊಂದು ಸೇರಿ ಮುಂದಿನ ಒಂದು ಸಾಹಿತ್ಯ ಸಮ್ಮೇಳನ ಮಾಡುವ ಯೋಜನೆ ಇದೆ. ಅದರಲ್ಲಿ ನೀವೇಕೆ ಭಾಗವಹಿಸಬಾರದು?' ಎಂದು ಕರೆ ಕೊಟ್ಟರು.



ಈ ಸಾಹಿತ್ಯಾಸಕ್ತರ ಗುಂಪಿನ ಬಗ್ಗೆ ಮಾಹಿತಿಯನ್ನೂ ಕೊಟ್ಟಿದ್ದರು. ನನಗೂ ಸ್ವಲ್ಪ ಆಸಕ್ತಿ ಬಂದಿತ್ತು. ನಾನು ಸಾಹಿತಿ ಅಲ್ಲದಿದ್ದರೂ, ಸಾಹಿತ್ಯಾಸಕ್ತನಾಗಿ ಹಲವು ಸಾಹಿತ್ಯದ ಪುಸ್ತಕಗಳನ್ನು ಓದುವ ಆಸಕ್ತಿ. ನಾಟಕಕಾರನಾಗಿಯೂ ಸಾಹಿತ್ಯದಲ್ಲಿ ಆಸಕ್ತಿ, ಹಾಗೂ ಭಾನುವಾರ ನ್ಯೂಜೆರ್ಸಿಯಲ್ಲಿ ಏನೂ ಕೆಲಸವಿಲ್ಲದಿದ್ದರಿಂದ ತಪ್ಪದೇ ಆ ಕಾರ್ಯಕ್ರಮಕ್ಕೆ ಹೋಗಿದ್ದೆ. ಅದು ಗುಂಡೂ ಅವರ ಮನೆಯಲ್ಲಿ ಇತ್ತು. ಐತಾಳರು ನನ್ನನ್ನು ಪರಿಚಯಿಸಿದ್ದು ಬಹಳಷ್ಟು ಮೃದುವಾಗಿ ಮಾತನಾಡುವ, ನೋಡಿದರೇ ಗೌರವ ಮೂಡುವ ಒಬ್ಬ ವ್ಯಕ್ತಿಯನ್ನು. ಅವರೇ ಮುಂದೆ ನನ್ನ ಗುರುವಾಗಿ, ನನ್ನ ಮಾರ್ಗದರ್ಶಿಯಾಗಿ, ಒಬ್ಬ ದೂರದೃಷ್ಟಿಯುಳ್ಳ ಸಾಹಿತಿ, ಸಂಘಟಕ ನನ್ನ ಜೀವನದಲ್ಲಿ ಅಚ್ಚಳಿಯದೇ ಉಳಿಯುತ್ತಾರೆ. ಅವರೇ ಎಚ್. ವೈ. ರಾಜಗೋಪಾಲ್. ಐತಾಳರು ಇವರಿಗೆ ನನ್ನನ್ನು ಪರಿಚಯಿಸುವಾಗ, 'ಕನ್ನಡದ ಭಕ್ತ,' 'ಕನ್ನಡದ ಸೇವಕ' ಹೀಗೆ ಸ್ವಲ್ಪ ಉಬ್ಬಿಸಿಯೇ ಪರಿಚಯ ಮಾಡಿಕೊಟ್ಟಿದ್ದರು. ಅಲ್ಲಿಗೆ ಬಂದ ಗೋಪಾಲ ಕುಕ್ಕೆ ಅವರೂ ಸಹ ಬಂದು 'ಇವನು ಸಾಹಿತ್ಯರಂಗಕ್ಕೆ ಒಳ್ಳೇ ಆಸ್ತಿ ಆಗುತ್ತಾನೆ' ಎಂದು ಪರಿಚಯ ಮಾಡಿಸಿ ಕೊಟ್ಟಿದ್ದರು. (ಗೋಪಾಲ ಕುಕ್ಕೆ ಅವರು ನನ್ನ ಹೆಂಡತಿಯ ಕಡೆಯಿಂದ ಸಂಬಂಧಿಗಳೂ ಹಾಗೂ ಮುಂಚೆಯೇ ಪರಿಚಯವಿತ್ತು.) ಹೀಗಾಗಿ ರಾಜಗೋಪಾಲ್ ಅವರಿಗೆ ನನ್ನ ಮೇಲೆ ಹೆಚ್ಚಿನ ನಿರೀಕ್ಷೆಯನ್ನು ಇಟ್ಟುಕೊಳ್ಳುವಂತೆ ಮಾಡಿತ್ತು.

ರಾಜಗೋಪಾಲ ಅವರು ಮೊದಲ ಸಾಹಿತ್ಯ ಸಮ್ಮೇಳನದ ಬಗ್ಗೆ ವಿವರಿಸಿ, ಆ ಸಮ್ಮೇಳನ ಅಣಿಗೊಳಿಸುವುದರಲ್ಲಿ ಸ್ವಲ್ಪ ಸಹಾಯ ಬೇಕೆಂದರು. ಹೀಗೆ ಪ್ರಾರಂಭವಾಗಿದ್ದು ನನ್ನ ರಾಜಗೋಪಾಲ್ ಅವರ ಸಾಹಿತ್ಯ ರಂಗದ ಸಂಬಂಧ. ಕನ್ನಡ ಸಂಘಗಳ ಹಾಗೂ ಹಲವಾರು ಕನ್ನಡದ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸಿ ಅನುಭವ ಹೊಂದಿದ್ದ ನಾನು, ಫಿಲಡೆಲ್ಫಿಯ ಸಮ್ಮೇಳನದಲ್ಲಿ ಅಲ್ಪ ಸ್ವಲ್ಪ ಸಹಾಯ ಹಸ್ತವನ್ನು ನೀಡಿದ್ದೆ. ಇದು ರಾಜಗೋಪಾಲರಿಗೆ ಬಹಳ ಇಷ್ಟವಾಯಿತು. ಸಮ್ಮೇಳನ ಮುಗಿದ ಮೇಲೆ ಖುದ್ದಾಗಿ ನನಗೆ ಫೋನ್ ಮಾಡಿ ನನ್ನ ಕೆಲಸದ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿದ್ದು ಅವರ ಮೇಲಿನ ಗೌರವ ಹೆಚ್ಚಿಸಿತ್ತು. ಕೆಲಸ ಮಾಡಿದವರನ್ನು ಗುರುತಿಸಿ ಅವರಿಗೆ ಖುದ್ದಾಗಿ ಫೋನ್ ಮಾಡಿ ವಂದನೆ ಹೇಳುವುದು ಅವರ ದೊಡ್ಡ ಗುಣವಾಗಿತ್ತು.

ಮುಂದಿನ ಸಮ್ಮೇಳನ ಲಾಸ್ ಏಂಜಲಿಸಿನಲ್ಲಿ ನಡೆಸುವ ನಿರ್ಧಾರ ಮಾಡಿ ನನಗೆ ಕನ್ನಡ ಸಾಹಿತ್ಯ ರಂಗದ ಉಪಾಧ್ಯಕ್ಷ ಸ್ಥಾನವನ್ನು ಅಲಂಕರಿಸಲು ಆಹ್ವಾನಿಸಿದ್ದರು. ನಾನು ಯಾವುದೇ ಸಾಹಿತಿಯಲ್ಲ, ಸಾಹಿತ್ಯಾಸಕ್ತ. ನನಗೆ ಈ ಸ್ಥಾನ ಬೇಡ ಎಂದು ಎಷ್ಟು ಹೇಳಿದರೂ ಕೇಳದೇ ನನ್ನನ್ನು ಸಂಸ್ಥೆಯ ಉಪಾಧ್ಯಕ್ಷನಾಗಿ ಮಾಡಿದ್ದರು. ಇದು ಅವರು ನನ್ನ ಮೇಲಿಟ್ಟಿದ್ದ ನಂಬಿಕೆಗೆ ನಾನು ಆಭಾರಿ. ಇವರಿಂದ ಮುಂದೆ ಬಹಳ ಕಲಿತೆ. ಮುಂದೆ ಆರು ವರ್ಷಗಳ ಕಾಲ ಉಪಾಧ್ಯಕ್ಷನನ್ನಾಗಿ ಮುಂದುವರಿಸಿದ್ದರು.

ಲಾಸ್ ಏಂಜಲಿಸ್ ಸಮ್ಮೇಳನದ ವೇಳೆಯಲ್ಲಿ ಇವರ ಸಾಹಿತ್ಯರಂಗದ ದೃಷ್ಟಿ, ವೃತ್ತಿಪರ ಕೆಲಸಗಳು, ಅವರ ಸ್ವಭಾವ, ಮನೋಭಾವ, ಮನೋಧರ್ಮ ಎಲ್ಲವನ್ನೂ ನಿಧಾನವಾಗಿ ಪೂರ್ಣವಾಗಿ ಅರ್ಥಮಾಡಿಕೊಳ್ಳಲು ಪ್ರಾರಂಭಿಸಿದ್ದೆ. ಅವರ ಆಸೆ ಇದ್ದಿದ್ದು ಕನ್ನಡ ಸಾಹಿತ್ಯ ರಂಗ ಅಮೆರಿಕದ ಪ್ರತಿ ಲೇಖಕನಿಗೆ, ಸಾಹಿತ್ಯ ಓದುಗನಿಗೆ ಒಂದು ದೊಡ್ಡ ವೇದಿಕೆಯಾಗಬೇಕು ಹಾಗೂ ಕನ್ನಡ ಸಾಹಿತ್ಯ ರಂಗ ಸಾಹಿತ್ಯಾಸಕ್ತರಲ್ಲಿ ಹೆಚ್ಚಿನ ಆಸಕ್ತಿ ಮೂಡಿಸುವ ಕೆಲಸಗಳನ್ನು ಮಾಡಬೇಕು ಎಂಬುದು. ಆದರೆ ಹೊಸ ಸದಸ್ಯರನ್ನು ನೋಂದಣಿ ಮಾಡಿಸಿಕೊಳ್ಳುವುದರಲ್ಲಿ ಮಾತ್ರ ಬಹಳ ಹೆದರುತ್ತಿದ್ದರು. ಯಾಕೆಂದರೆ ತಮ್ಮ ಕನಸಿನ ಕೂಸಾದ ಕನ್ನಡ ಸಾಹಿತ್ಯ ಸಂಸ್ಥೆ ದುಷ್ಟ ಶಕ್ತಿಗಳ ಕೈಗೆ ಸೇರಿ ಹಾಳಾಗಬಾರದು ಎಂದು. ಇದು ಒಂದು ರೀತಿ ಕನ್ನಡ ಸಾಹಿತ್ಯ ರಂಗ ಸದಸ್ಯತ್ವದ ದೃಷ್ಟಿಯಿಂದ ನಿರೀಕ್ಷೆಯಷ್ಟು ಬೆಳೆಯಲಿಲ್ಲ ಎನ್ನುವ ಮಾತು ಅಮೆರಿಕನ್ನಡಿಗರ ಸಾಹಿತ್ಯ ವಲಯದಲ್ಲಿ ಕೇಳಿಬರುವ ಮಾತು. ಅದಕ್ಕಾಗಿ ಅವರನ್ನು ದೂಷಿಸಲೂ ಸಾಧ್ಯವಿಲ್ಲ. ಏಕೆಂದರೆ ಅಮೆರಿಕೆಯ ಕೆಲವು ಸಂಸ್ಥೆಗಳು ಆ ಸ್ಥಿತಿಯನ್ನೂ ಕಂಡಿವೆ. ಅವರಿಗೆ ಸರಕಾರದ ಸಹಾಯ ತೆಗೆದುಕೊಳ್ಳಲೂ ಇಷ್ಟವಿರಲಿಲ್ಲ. ಸರಕಾರದ ಸಹಾಯ ತೆಗೆದುಕೊಂಡರೆ ಎಲ್ಲಿ ಸರಕಾರದ ಅಧಿಕಾರಿಗಳು ಪ್ರಭಾವ ಬೀರಿ ಕೆಳ ಗುಣಮಟ್ಟದ ಸಾಹಿತಿಗಳನ್ನು ನಮ್ಮ ಸಮ್ಮೇಳಕ್ಕೆ ಆಹ್ವಾನಿಸಬೇಕಾಗುತ್ತದೆಯೋ ಎಂಬುದೇ ಅವರ ಹೆದರಿಕೆಯಾಗಿತ್ತು. ಸರಕಾರದಿಂದ ಸಹಾಯ ದೊರೆಯುತ್ತಿತ್ತೋ ಇಲ್ಲವೊ ಅದಕ್ಕಾಗಿ ಪ್ರಯತ್ನಪಡಲೂ ಬಿಡುತ್ತಿರಲಿಲ್ಲ. ಕಷ್ಟಪಟ್ಟು ಒಂದು ಬಾರಿ ಪ್ರಯತ್ನಪಟ್ಟಿದ್ದೆ. ಸರಕಾರಕ್ಕೆ ಕೆಲವು ಮಾಹಿತಿಗಳು ಬೇಕಿತ್ತು. ಆ ಸಮಯದಲ್ಲಿ ಅವರು ಅದನ್ನು ಒದಗಿಸಲು ಸ್ವಲ್ಪ ಹಿಂಜರಿದಿದ್ದರು. ಆಗ ಆ ಸಹಾಯವೂ ಬರಲಿಲ್ಲ.

ಅವರಲ್ಲಿದ್ದ ಒಂದು ವಿಶೇಷ ಗುಣ ಎಂದರೆ ಯಾವತ್ತೂ ಯಾವುದೇ ನಿರ್ಣಯವನ್ನು ಇನ್ನೊಬ್ಬರ ಜೊತೆ ಚರ್ಚಿಸದೇ ತೆಗೆದುಕೊಳ್ಳುತ್ತಿರಲಿಲ್ಲ. ಸಮ್ಮೇಳನದಲ್ಲಿ ಕಾರ್ಯಕ್ರಮಗಳ ರೂಪರೇಷೆಗಳನ್ನು ಬದಲಾಯಿಸಿ ಇನ್ನೊಂದು ಹೊಸ ರೂಪ ತರಬೇಕಾದರಾಗಲೀ, ಹೊಸ ಕಾರ್ಯಕ್ರಮಗಳನ್ನು ಪರಿಚಯಿಸುವುದಾಗಲೀ, ನೂರು ಬಾರಿ ಯೋಚಿಸಿ, ಹಲವಾರು ಮುಖ್ಯ ಸದಸ್ಯರ ಹತ್ತಿರ ಮಾತನಾಡಿ ನಿರ್ಧಾರವನ್ನು ತೆಗೆದುಕೊಳ್ಳುತ್ತಿದ್ದರು. ಗುಂಡು ಅವರ ಅಭಿಪ್ರಾಯಗಳಿಗೆ ಬಹಳ ತೂಕ ಕೊಡುತ್ತಿದ್ದರು. ಅವರ ಕಾರ್ಯ ಚಾತುರ್ಯತೆ ಚಾಣಕ್ಯನನ್ನು ಹೋಲುತ್ತಿತ್ತು. ಅವರ ದೃಷ್ಟಿಯಲ್ಲಿ ಯಾವುದೇ ಸಲಹೆಗಳು (ತಾವೇ ವಿಚಾರ ಮಾಡಿದ ವಿಚಾರಗಳಾಗಬಹುದು) ಸಾಹಿತ್ಯ ರಂಗಕ್ಕೆ ಒಳಿತಾಗುತ್ತದೆ ಎಂದೆನಿಸಿದರೆ, ಎಲ್ಲರ ಜೊತೆ ವೈಯಕ್ತಿಕವಾಗಿ ಫೋನಿನಲ್ಲಿ ಚರ್ಚಿಸಿ ಅವರುಗಳ ಮನಸ್ಸನ್ನು ಒಲಿಸುತ್ತಿದ್ದರು. ಇಂತಹ ಕಾರ್ಯಗಳಿಂದ ಕೆಲವು ಸದಸ್ಯರೊಡನೆ ಮನಸ್ತಾಪವನ್ನು ಮಾಡಿಕೊಂಡಿದ್ದರು. ಆದರೆ ಅವರ ಮೇಲೆ ಯಾವುದೇ ದ್ವೇಷ



ಸಾಧಿಸುತ್ತಿರಲಿಲ್ಲ. ಇದು ಅವರಿಂದ ಕಲಿಯಬೇಕಾದ ಗುಣ. ಸಾಹಿತ್ಯರಂಗಕ್ಕೆ ಯಾವುದೇ ಸಲಹೆಗಳು ಬಂದಾಗ ಅದು ಸಾಹಿತ್ಯರಂಗಕ್ಕೆ ಒಳ್ಳೆಯದನ್ನು ಮಾಡುತ್ತದೆ ಎಂದರೆ ಅಂತಹ ಸಲಹೆಗಳನ್ನು ಕಾರ್ಯರೂಪಕ್ಕೆ ತರಲು ಹೋರಾಡುತ್ತಿದ್ದರು. ಹೊಸ ಸದಸ್ಯರನ್ನು ಸೇರಿಸಿಕೊಳ್ಳುವ ರೀತಿಯೇ ತೆಗೆದುಕೊಳ್ಳಿ, ಬಹಳಷ್ಟು ಸದಸ್ಯರಿಂದ ಅಷ್ಟು ಕಠಿಣ ನಿಯಮಗಳು ಬೇಡ, ಸ್ವಲ್ಪ ನಿಯಮಗಳನ್ನು ಸಡಿಲಿಸೋಣ ಎಂದು ಸಲಹೆಗಳು ಬಂದಿದ್ದವು. ಆದರೆ ಅವರಿಗೆ ಒಂದೇ ಒಂದು ಭಯ ಕಾಡುತ್ತಿತ್ತು. ಕೆಟ್ಟ ದೃಷ್ಟಿಕೋಣ ಉಳ್ಳವರು ಒಂದು ರೀತಿಯ ಕೆಟ್ಟ ಹುಳು. ಅಂತಹ ಹುಳವನ್ನು ತೆಗೆಯುವುದು ಕಷ್ಟ ಎನ್ನುತ್ತಿದ್ದರು. ಕೆಲವು ಕಾರ್ಯಕಾರಿ ಸಮಿತಿಯ ಸಭೆಗಳಲ್ಲಿ ಭಾವುಕರಾಗಿದ್ದೂ ಉಂಟು, ಕ್ರೋಧಗೊಂಡಿದ್ದೂ ಉಂಟು. ಆದರೆ ಅದು ಕ್ಷಣಮಾತ್ರಕ್ಕೆ. ಅಪ್ಪಿತಪ್ಪಿ ಏನಾದರೂ ಯಾರ ಮೇಲಾದರೂ ಸಭೆಯಲ್ಲಿ ಅಲ್ಪಸ್ವಲ್ಪ ಕೋಪ ಮಾಡಿಕೊಂಡಿದ್ದರೂ, ಸಭೆಯ ನಂತರ ವೈಯಕ್ತಿಕವಾಗಿ ಅಂತಹವರಿಗೆ ಫೋನ್ ಮಾಡಿ ಕ್ಷಮಾಪಣೆ ಕೇಳುತ್ತಿದ್ದರು. ನನಗೆ ಎಷ್ಟೋ ಬಾರಿ ಅಂತಹ ಕರೆಗಳನ್ನು ಮಾಡಿದ್ದಾರೆ.

ಸಂಘಟಕರಾಗಿ ನಿರ್ಮಲ ಸ್ವಭಾವದ ವ್ಯಕ್ತಿಯಾಗಿದ್ದ ರಾಜಗೋಪಾಲರು, ಕಾರ್ಯಕರ್ತರ ಜೊತೆ ಎಲ್ಲ ವಿಚಾರಗಳಲ್ಲೂ ಚರ್ಚಿಸುವುದು, ಎಲ್ಲರ ಅನಿಸಿಕೆಗಳನ್ನು ಆಲಿಸುವದು ಅವರ ಗುಣವಾಗಿತ್ತು. ವಯಸ್ಸಿನ ತಾರತಮ್ಯವಿಲ್ಲದೇ ಸಲಹೆಗಳನ್ನು ಸ್ವೀಕರಿಸುತ್ತಿದ್ದರು. ನಾಲ್ಕು ಸಮ್ಮೇಳನಗಳಲ್ಲಿ, ಅವರ ಅಧ್ಯಕ್ಷತೆಯಲ್ಲಿ ಉಪಾಧ್ಯಕ್ಷನಾಗಿ ನಾನು ಬಹಳ ಹತ್ತಿರದಿಂದ ಕೆಲಸ ಮಾಡಿದ್ದೇನೆ. ಅವರ ಕಾರ್ಯ ವೈಖರಿ ಕೆಲವರಿಗೆ ಕಿರಿಕಿರಿ ತರಬಹುದು. ಏಕೆಂದರೆ ಅವರು ಎಲ್ಲ ಕಾರ್ಯಗಳನ್ನೂ ಕೂಲಂಕಷವಾಗಿ ಅತಿ ಸೂಕ್ಷ್ಮತೆಯಿಂದ ವಿಚಾರಿಸುತ್ತಿದ್ದರು. ಉದಾಹರಣೆಗೆ ಊಟದ ವ್ಯವಸ್ಥೆ ಮಾಡಿದ್ದೇನೆ ಎಂದರೆ ಸುಮ್ಮನಾಗುತ್ತಿರಲಿಲ್ಲ, ಊಟದ ಪಟ್ಟಿ ಏನು? ಖಾರ ಕಮ್ಮಿ ಹಾಕಿಸಿ, ಇಂತಹದೇ ತಿಂಡಿಗಳನ್ನು ಮಾಡಲಿ ಹೀಗೆಲ್ಲಾ ವಿವರಗಳಲ್ಲಿ ತೊಡಗಿಸಿಕೊಳ್ಳುತ್ತಿದ್ದರು. ಅವರ ಉದ್ದೇಶ ಒಂದೇ ಸಮ್ಮೇಳನಕ್ಕೆ ಬಂದವರು ಖುಷಿಯಾಗಿ ಹೋಗಬೇಕು, ಎಲ್ಲೂ ನಮ್ಮ ಅಳುಕಿರಬಾರದು ಎನ್ನುತ್ತಿದ್ದರು. ಸಮ್ಮೇಳನಗಳಲ್ಲಿ ಬಹಳಷ್ಟು ಕೆಲಸಗಳನ್ನು ತಮ್ಮ ಮೇಲೆ ಹಾಕಿಕೊಳ್ಳುತ್ತಿದ್ದರು. ಹಾಗೆಯೇ ಅದನ್ನು ನಿಭಾಯಿಸುತ್ತಿದ್ದರು. ನಾನು ಅವರೊಂದಿಗೆ ಕೆಲಸ ಮಾಡಿದ ೪ ಸಮ್ಮೇಳನಗಳಲ್ಲೂ, ಸಮ್ಮೇಳನದ ದಿವಸಕ್ಕಿಂತ, ಸಮ್ಮೇಳನಕ್ಕೆ ಮುಂಚೆ ಕಾರ್ಯಗಳು ಬಹಳ ಇರುತ್ತಿದ್ದವು. ಪ್ರತಿ ಸಮ್ಮೇಳನಕ್ಕೂ ಸುಮಾರು ೩–೪ ತಿಂಗಳು ಮುಂಚೆಯಿಂದಲೇ ನನ್ನ ಮತ್ತು ಅವರ ಜಂಟಿ ಕೆಲಸ ಶುರುವಾಗುತ್ತಿತ್ತು. ನಾನು ಇರುವುದು ಪಶ್ಚಿಮ ಕರಾವಳಿ. ಅವರು ಇದ್ದಿದ್ದು ಪೂರ್ವ ಕರಾವಳಿ. ನಮ್ಮಿಬ್ಬರಲ್ಲಿ ಇದ್ದ ವೇಳಾ ವ್ಯತ್ಯಾಸ ೩ ಗಂಟೆಗಳು. ಪ್ರತಿ ಸಂಜೆ ಆಫೀಸಿನಿಂದ ಹೊರಡುವಾಗ, ಅಂದರೆ ಸಂಜೆ ೬ ಗಂಟೆ ಸುಮಾರಿಗೆ ಫೋನ್ ಮಾಡುತ್ತಿದ್ದೆ. ಅದು

ಅವರಿಗೆ ರಾತ್ರಿ ೯ ಗಂಟೆಯ ಸಮಯ. ಅವರು ರಾತ್ರಿ ಊಟ ಮುಗಿಸಿ ನನ್ನ ಫೋನಿಗಾಗಿ ಕಾಯುತ್ತಿರುತ್ತಿದ್ದರು.

ಅಮೆರಿಕೆಯ ಸಾಹಿತ್ಯಾಸಕ್ತರು ಮರೆಯಲಾಗದಂತಹ ಒಂದು ಸಾಹಿತ್ಯ ಕಾರ್ಯಾಗಾರ ಎಂದರೆ ಡಾ. ಲಕ್ಷ್ಮೀನಾರಾಯಣ ಭಟ್ಟರು ನಡೆಸಿಕೊಟ್ಟಿದ್ದು. ಇದು ರಾಜಗೋಪಾಲರ ಕನಸಿನ ಕೂಸು. ಆ ಕಮ್ಮಟ ಅಮೆರಿಕೆಯ ಉದ್ದಗಲಗಳಲ್ಲಿ ಯಶಸ್ವಿಯನ್ನು ಪಡೆದಿದ್ದು ಒಂದೇ ಅಲ್ಲ, ಕನ್ನಡ ಸಾಹಿತ್ಯ ರಂಗ ಸಂಸ್ಥೆಗೆ ಒಳ್ಳೆಯ ಪ್ರಚಾರವನ್ನೂ, ಹೆಸರನ್ನು ತಂದು ಕೊಟ್ಟಿತ್ತು. ಅದನ್ನು ಯಾವಾಗಲೂ ಬಹಳ ಗರ್ವದಿಂದ ಹೇಳಿಕೊಳ್ಳುತ್ತಿದ್ದರು. ಅವರಿಗೆ ಇನ್ನೂ ಅಂತಹ ಕಾರ್ಯಕ್ರಮಗಳನ್ನು ನಡೆಸುವ ಆಸೆ ಇತ್ತು. ಪಾಪ ಅವರ ಆಸೆ ಪೂರ್ಣಗೊಳ್ಳಲೇ ಇಲ್ಲ. ಮುಂದಿನ ಕನ್ನಡ ಸಾಹಿತ್ಯ ರಂಗದ ನಾಯಕರುಗಳು ಏನಾದರೂ ಇಂತಹ ಕಾರ್ಯಾಗಾರಗಳನ್ನು ಮಾಡಿದರೆ, ರಾಜಗೋಪಾಲರಿಗೆ ಸಲ್ಲಿಸುವ ಗೌರವ ಇನ್ನೊಂದಿಲ್ಲ.

ಇತ್ತೀಚೆಗೆ ಇತರ ಕನ್ನಡ ಪರ ಸಂಘಗಳ ಕಾರ್ಯಗಳಲ್ಲಿ ಕಾರ್ಯನಿರತನಾದ ನನಗೆ ಸಾಹಿತ್ಯರಂಗದ ಕಡೆಗೆ ಹೆಚ್ಚಿನ ಸಮಯ ಕೊಡಲಾಗಲಿಲ್ಲ. ಕಳೆದ ೩–೪ ವರ್ಷಗಳಿಂದ ಸ್ವಲ್ಪ ದೂರವಾಗಿದ್ದೇನೆ. ರಾಜಗೋಪಾಲರೂ ಸಹ ಅವರ ಆರೋಗ್ಯದ ದೃಷ್ಟಿಯಿಂದ ದೂರವಾಗಿದ್ದರು. ಅವರನ್ನು ನೋಡಲು ಒಂದು ಬಾರಿ ಫಿಲಡೆಲ್ಫಿಯದ ಬಳಿ ಇರುವ ಅವರ ಮನೆಗೆ ನನ್ನ ಪತ್ನಿಯ ಜೊತೆಯಲ್ಲಿ ಹೋಗಿದ್ದೆ. ಅಂದು ನಮ್ಮನ್ನು ಸ್ವಾಗತಿಸಿದ ರೀತಿ ಇಂದಿಗೂ ಮರೆಯಲಾರೆ. ಒಂದು ದಿನ ಪೂರ್ತಿ ಅವರ ಜೊತೆಯಲ್ಲಿ ಕಳೆದೆ. ಹಳೆಯ ನೆನಪುಗಳನ್ನು ಮೆಲಕು ಹಾಕುತ್ತಾ, ಅವರ ಪತ್ನಿ ವಿಮಲ ಅವರು ಮಾಡಿದ್ದ ಊಟ ಮುಗಿಸಿ ತಮ್ಮ ಇತ್ತೀಚಿನ ಸಾಹಿತ್ಯ ಕಾರ್ಯಗಳ ಬಗ್ಗೆ ಮಾತನಾಡುತ್ತಿದ್ದೆವು. ಬಹಳ ಕ್ಷೀಣಿಸಿದ್ದರು. ಉತ್ಸಾಹ ಕುಗ್ಗಿರಲಿಲ್ಲ. ಮನೆಯಿಂದ ಹೊರಟಾಗ ಇದೇ ಕಡೆಯ ಭೇಟಿ ಎಂದೆನಿಸಿತ್ತು ನನಗೆ. ಕಣ್ಣಲ್ಲಿ ನೀರು ನನಗೆ ಅರಿವಿಲ್ಲದೇ ಹರಿದಿತ್ತು. ಕಾರಿನಲ್ಲಿ ಕುಳಿತು ನ್ಯೂಜೆರ್ಸಿಯ ಕಡೆ ಪಯಣ ಬೆಳೆಸಿದ್ದೆ. ನನ್ನ ಹೆಂಡತಿ ವಿದ್ಯಾ, ಅವರು ನಮ್ಮನ್ನು ಮಾತನಾಡಿಸಿದ ರೀತಿ, ನಮ್ಮನ್ನು ನೋಡಿಕೊಂಡ ರೀತಿಯ ಬಗ್ಗೆಯೇ ಗುಣಗಾನ ಮಾಡಿಕೊಂಡು ಬಂದಿದ್ದಳು. ಅವರು ಮರೆಯದೇ ನನ್ನ ಮಗಳಾದ ವಿವಾಳ ಬಗ್ಗೆ ಕೇಳಿದ್ದು ಅವರು ನನ್ನ ಮೇಲಿಟ್ಟದ್ದ ಪ್ರೀತಿಗೆ ಸಾಕ್ಷಿಯಾಗಿತ್ತು.



# ಎಚ್. ವೈ. ರಾಜಗೋಪಾಲರೆಂಬ ದೊಡ್ಡಾಲದ ಮರ

**–ಸುಪ್ತದೀಪ್ತಿ (ಜ್ಯೋತಿ ಮಹಾದೇವ್)**

ಅಮೆರಿಕದಲ್ಲಿರುತ್ತಾ ಕನ್ನಡ ಸಾಹಿತ್ಯದತ್ತ ಅಭಿರುಚಿ ಇರಿಸಿ, ಉಳಿಸಿ, ಬೆಳೆಸಿಕೊಂಡು ಬಾಳುತ್ತಿರುವವರಿಗೆ ಚಿರಪರಿಚಿತ ಹೆಸರು ಎಚ್. ವೈ. ರಾಜಗೋಪಾಲರದು. ಸೌಮ್ಯ ಮಾತಿನ, ದೃಢ ನಿಲುವಿನ, ಸೂಕ್ಷ್ಮ ಮನಸಿನ, ದಿಟ್ಟ ನಡತೆಯ ಇವರು ಹಲವರಿಗೆ ಹಿರಿಯಣ್ಣನಂತಿದ್ದರು ಎಂದರೆ ತಪ್ಪಾಗದು. 'ಕನ್ನಡ' ಎನ್ನುವುದು ರಾಜಗೋಪಾಲರ ಉಸಿರಿನಲ್ಲಿಯೇ ಬೆರೆತಿತ್ತು, ಬಹುತೇಕ 'ಅಮೆರಿಕನ್ನಡಿಗ'ರಂತೆ. ತಾಯ್ನಾಡನ್ನು ತೊರೆದು ಹೊರದೇಶದಲ್ಲಿ ನೆಲೆಸುವ ಹೆಚ್ಚಿನ ಎಲ್ಲ ವಲಸಿಗರ ಮನದ ಒಂದು ಭಾಗ ಶಾಶ್ವತವಾಗಿ ತನ್ನ ಮೂಲವನ್ನು, ತಾಯ್ನುಡಿಯನ್ನು ತನ್ನ ಶಕ್ತಿಯ ಸೆಲೆಯಾಗಿರಿಸಿಕೊಳ್ಳುತ್ತದೆ, ಹೆಣ್ಣು ತನ್ನ ತೌರನ್ನು ಸದಾ ನೆನೆನೆನೆದು, ಪ್ರೀತಿಯಿಂದ ಗೌರವದಿಂದ ಮನದೊಳಗೆ ಬೆಚ್ಚಗಿರಿಸಿಕೊಳ್ಳುವಂತೆ (ಆ ನಿಟ್ಟಿನಲ್ಲಿ ಯೋಚಿಸಿದರೆ ಹೊರದೇಶದಲ್ಲಿ ನೆಲೆಸುವ ಎಲ್ಲರೂ 'ವೃತ್ತಿಯನ್ನು ವರಿಸಿ ತೌರು ತೊರೆದವರು'; ಪ್ರತಿಭಾ ಪಲಾಯನಕ್ಕೊಂದು ತಿರು–ವಾದ). ಅಂತಹ ಹೆಮ್ಮನಗಳು ಸಹಜವಾಗಿಯೇ ತಮ್ಮ 'ವೃತ್ತಿ ಪರಿಸರ'ದಲ್ಲಿ ವೃತ್ತಿಪರರಾಗಿಯೂ ಪ್ರವೃತ್ತಿಗೊಂದು ಸ್ವಂತ ಖಾನೆಯನ್ನು ತಮ್ಮೊಳಗೆಯೇ ಸೃಜಿಸಿಕೊಳ್ಳುತ್ತಾರೆ, ಮನೆಯೊಳಗಿನ ದೇವಸ್ಥಳದಂತೆ. ಮನೆಯೊಳಗಿದ್ದೂ ಪ್ರತ್ಯೇಕವಾಗಿ ಪಾವಿತ್ರ್ಯವನ್ನು ಪಡೆವ ಈ ಪುಟ್ಟ ಖಾನೆಯಲ್ಲಿನ ಮೂರುತಿಗೆ ವಿಶೇಷ ದೀಪಾರತಿ.

'ಹೊರನಾಡ ಕನ್ನಡಿಗರ' ಖಾನೆಯೊಳಗಿನ ಮೂರುತಿ 'ಕನ್ನಡ'. ಹಾಗೆಂದೇ ಅದು ಅಮೆರಿಕನ್ನಡಿಗರ ಮತ್ತು ಎಲ್ಲಾ ಹೊರನಾಡ ಕನ್ನಡಿಗರ ಅಸ್ಮಿತೆಯ ಭಾಗ. ರಾಜಗೋಪಾಲರೂ ಅದಕ್ಕೆ ಹೊರತಾಗಿರಲಿಲ್ಲ. ಅವರಲ್ಲಿನ ಕನ್ನಡತನ ನನ್ನಂತಹ ಅಪ್ರೌಢ (ಅಮೆಚೂರ್) ಕನ್ನಡಿಗರಿಗೆ ಮಾದರಿ.

ಎರಡು ಸಾವಿರ ಇಸವಿಯಲ್ಲಿ ಹ್ಯೂಸ್ಟನ್ ನಗರದಲ್ಲಿ ನಡೆದ ಪ್ರಪ್ರಥಮ ಅಕ್ಕ ಸಮ್ಮೇಳನದಲ್ಲಿ ನಾನು ಅವರನ್ನು ಮೊದಲ ಬಾರಿಗೆ ಭೇಟಿಯಾಗಿದ್ದು. ಅಮೆರಿಕನ್ನಡಿಗರಿಗೆ ಇನ್ನೋರ್ವ ಹಿರಿಯಣ್ಣನಂತಿದ್ದ ಹರಿಹರೇಶ್ವರ ಅವರನ್ನು ನನಗೆ ಪರಿಚಯಿಸಿದ್ದರು. ಆ ಬಳಿಕ, ೨೦೦೨ರಲ್ಲಿ ನಡೆದ ಎರಡನೇ ಅಕ್ಕ ಸಮ್ಮೇಳನದ ಸಂದರ್ಭದಲ್ಲಿ ಮರುಭೇಟಿಯಾದಾಗ, ಆತ್ಮೀಯತೆಯಿಂದ ಮುಖತುಂಬ ನಗು ತುಂಬಿ, 'ಏನಮ್ಮಾ, ಹೇಗಿದ್ದೀ?' ಎಂದು ಮಾತನಾಡಿಸಿದ ರಾಜಗೋಪಾಲರದು, ತದನಂತರದ ಪ್ರತಿಯೊಂದು ಭೇಟಿಯಲ್ಲೂ ಅವೇ ಮೊದಲ ಮಾತುಗಳು. ಆ ಎರಡೇ ಎರಡು ಪದಗಳಲ್ಲಿ ತುಂಬು ಆಪ್ತತೆ. ಬಂಧುವಿನ ಕಾಳಜಿ. ನಿರ್ಮಲ ಸ್ನೇಹ.

ಮುಂದಿನ ವರುಷದಲ್ಲಿಯೇ, ೨೦೦೩ರಲ್ಲಿ, ಅವರ ಕನಸಿನ ಕೂಸು, 'ಕನ್ನಡ ಸಾಹಿತ್ಯ ರಂಗ'ದ ಉಗಮವಾಯಿತು. ಎರಡೂ ಅಕ್ಕ ಸಮ್ಮೇಳನಗಳಲ್ಲಿನ 'ಜಾತ್ರೆ'ಯಂತಹ ವಾತಾವರಣದಲ್ಲಿ ಕನ್ನಡ ಸಾಹಿತ್ಯಕ್ಕೆ ದೊರಕಿದ ಒಂದು ಸಣ್ಣ ಸಂತೆಯಂಗಡಿಯಂತಹ ಪಾತ್ರ ಸಾಹಿತ್ಯಪ್ರಿಯರಿಗೆ ಯಾರಿಗೂ ತೃಪ್ತಿ ನೀಡದು. ಇಲ್ಲೂ ಅದೇ ಆಗಿತ್ತು. ರಾಜಗೋಪಾಲರು, ಎಚ್. ವೈ. ರಂಗಾಚಾರ್ ಮತ್ತು ಪದ್ಮ ರಂಗಾಚಾರ್, ಗೋಪಾಲ್ ಮತ್ತು ನಳಿನಿ ಕುಕ್ಕೆ, ನಾಗ ಐತಾಳರಂತಹ ಅಮೆರಿಕನ್ನಡ ಸಾಹಿತಿಗಳನ್ನು ಸಂಪರ್ಕಿಸಿ, ಚರ್ಚಿಸಿ, ವಿಚಾರ ವಿಮರ್ಶೆ ನಡೆಸಿ, ಅಮೆರಿಕಾದ್ಯಂತ ಕನ್ನಡ ಸಾಹಿತ್ಯಕ್ಕೆಂದೇ ಮೀಸಲಾಗಿರುವ ಸಂಸ್ಥೆಯೊಂದನ್ನು ಹುಟ್ಟುಹಾಕಿದರು. ಇದನ್ನು ವ್ಯವಸ್ಥಿತವಾಗಿ ನಡೆಸಿಕೊಂಡು ಹೋಗಲು ಅನುಕೂಲವಾಗುವಂತೆ ಸಂಸ್ಥೆಗೊಂದು ನಿಗದಿತ ರೂಪು–ರೇಷೆಗಳನ್ನೂ ನೀತಿ–ನಿಯಮಾವಳಿಗಳನ್ನೂ ಇತರರ ಸಹಾಯದಿಂದ ರೂಪಿಸಿಕೊಂಡು, ೨೦೦೪ರ ಏಪ್ರಿಲ್‌ನಲ್ಲೇ ಮೊತ್ತ ಮೊದಲ ವಸಂತ ಸಾಹಿತ್ಯೋತ್ಸವವನ್ನೂ ನಡೆಸಿ ಸೈಯೆನಿಸಿದರು. ಈ ಸಮಯದಲ್ಲಿ, ೨೦೦೩ರ ಮೇ ತಿಂಗಳಿಂದ ನಾನು (ಸಂಸಾರ ಸಹಿತ) ಮರಳಿ ಭಾರತಕ್ಕೆ ಬಂದು ಮಣಿಪಾಲದಲ್ಲಿದ್ದೆ. ಹರಿಹರೇಶ್ವರ–ನಾಗಲಕ್ಷ್ಮಿ ದಂಪತಿ ೨೦೦೨ರ ಅಕ್ಟೋಬರ್‌ನಲ್ಲೇ ಭಾರತಕ್ಕೆ ಹಿಂದಿರುಗಿ, ಮೈಸೂರಿನಲ್ಲಿ ನೆಲೆಯೂರಿದ್ದರು. ಆದುದರಿಂದ ಈ ಮೊದಲ ಸಾಹಿತ್ಯೋತ್ಸವ ಸಂಭ್ರಮ ನಮಗೆ ಲಭ್ಯವಾಗಲಿಲ್ಲ.

ಇಲ್ಲಿಂದ ಮುಂದೆ ಕನ್ನಡ ಸಾಹಿತ್ಯ ರಂಗವು ಮುನ್ನಡೆದ ಹಾದಿಯ ಚಿತ್ರಣ ಈಗಾಗಲೇ ಇತರರ ಲೇಖನಗಳಲ್ಲಿ ಬಂದಿದೆ. ಈ ಮುನ್ನಡೆಯಲ್ಲಿ ರಾಜಗೋಪಾಲರ



ಪಾತ್ರ– ನಿರ್ದೇಶಕನಂತಹ, ಸಮರ್ಥ ನಾಯಕನಂತಹ ಪಾತ್ರ– ಅತ್ಯಂತ ನಿರ್ದಿಷ್ಟವಾಗಿ ಕಂಡುಬರುತ್ತದೆ. ೨೦೦೫ರ ಮಾರ್ಚ್ ಕೊನೆಗೆ ನಾವು ಮತ್ತೆ ಅಮೆರಿಕೆಗೆ ಕಾರಣಾಂತರಗಳಿಂದ ಮರಳಬೇಕಾಯಿತು. ಅದೇ ದಶಂಬರದಲ್ಲಿ ಲಾಸ್ ಏಂಜಲಿಸ್ ನಗರದಲ್ಲಿ ನಡೆದ ಸಾಹಿತ್ಯೋತ್ಸವದಲ್ಲಿ ಭಾಗವಹಿಸಿದ ನೆನಪುಗಳು ನನ್ನ ಅಮೂಲ್ಯ ನೆನಪುಗಳ ಖಜಾನೆಯ ಭಾಗವಾಗಿವೆ. ರಾಜಗೋಪಾಲ ಕಾರ್ಯವೈಖರಿಯನ್ನು ಮೊದಲಬಾರಿಗೆ ನಾನು ಕಂಡದ್ದು ಆಗಲೇ. ಒಬ್ಬ ಸಮರ್ಥ ನೇತಾರನ ಸಮದೃಷ್ಟಿ ದೂರದರ್ಶಿತ್ವ ಅವರದು.

ಡಾ. ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟರನ್ನು ಮುಂದಿಟ್ಟುಕೊಂಡು ೨೦೦೬ರ ಮಧ್ಯಭಾಗದಲ್ಲಿ ಕಸಾರಂ ಅಮೆರಿಕದಾದ್ಯಂತ ನಡೆಸಿದ 'ಕನ್ನಡ ಸಾಹಿತ್ಯ ಚರಿತ್ರೆ'ಯ ಸಂಕ್ಷಿಪ್ತ ಪಾಠ–ಶಿಬಿರ ಸರಣಿಯಲ್ಲಿ ನನ್ನನ್ನು ಸಕ್ರಿಯವಾಗಿ ಒಳಗೊಳ್ಳುವಂತೆ ಒತ್ತಾಯಿಸಿದ ರಾಜಗೋಪಾಲರ ಹಿರಿತನದ ಪ್ರೀತಿ–ಕಾಳಜಿಗೆ ಮಣಿದಿದ್ದೆ. ಅದರ ಪ್ರಯೋಜನವನ್ನೂ ಪಡೆದಿದ್ದೆ. ಅನಂತರ ಕಸಾರಂ ಸದಸ್ಯೆಯಾಗಿಯೂ ಸೇರ್ಪಡೆಯಾಗಿದ್ದೆ. ಅಲ್ಲಿಂದ ಮೊದಲ್ಗೊಂಡ ಕಸಾರಂ ನಂಟು, ರಾಜಗೋಪಾಲರ ಒತ್ತಾಸೆಯ ಗಂಟು, ಸಾಹಿತ್ಯ ರಂಗದ ಪ್ರಕಟಣೆಗಳಲ್ಲೂ ಸಕ್ರಿಯವಾಗಿ ಪಾಲ್ಗೊಳ್ಳುವಂತೆ ಮಾಡಿ, ನನ್ನನ್ನು ಇನ್ನಷ್ಟು ನಿಕಷಕ್ಕೆ ಒಡ್ಡಿಕೊಳ್ಳುವಂತೆಯೂ ಬೆಳವಣಿಗೆಗೆ ತೆರೆದುಕೊಳ್ಳುವಂತೆಯೂ ಮಾಡಿದವು. ಆರೇಳು ವರ್ಷಗಳ ಕಾಲ ಕನ್ನಡ ಸಾಹಿತ್ಯ ರಂಗದ ಆಡಳಿತ ಮಂಡಳಿಯ ಸದಸ್ಯೆಯೂ ಆಗಿದ್ದೆ.

ರಾಜಗೋಪಾಲರದು ಹಿರಿಯಣ್ಣನಂತಹ ಪ್ರೀತಿ, ವಿಶ್ವಾಸ. ಈ ಪ್ರೀತಿ–ವಿಶ್ವಾಸಗಳ ಜೊತೆಗೆ ಅವರದು ಅದೇ ಹಿರಿಯಣ್ಣನ ಶಿಸ್ತು ಕೂಡಾ. ಸುಮಾರು ಹನ್ನೆರಡು–ಹದಿಮೂರು ವರ್ಷಗಳ ಕಾಲ ಕನ್ನಡ ಸಾಹಿತ್ಯ ರಂಗವನ್ನು ಮುನ್ನಡೆಸಿಕೊಂಡು ಬಂದ ಧೀಃಶಕ್ತಿ ಅವರದು. ಕನ್ನಡ ಸಾಹಿತ್ಯ ರಂಗದ ಎಲ್ಲ ಚಟುವಟಿಕೆಗಳು ಅವರ ಕಣ್ಗಾವಲಿನಲ್ಲಿ ನಡೆಯುತ್ತಿದ್ದವು. ಎಲ್ಲವನ್ನೂ ಇತರ ಸಮಿತಿಯ ಸದಸ್ಯರೊಡನೆ ಸ್ವತಃ ಚರ್ಚಿಸುತ್ತಿದ್ದರು. ಸಮಿತಿಗಳ ನಿರ್ಧಾರಗಳು ಸರಿಯೆನಿಸದಿದ್ದಲ್ಲಿ ನಿರ್ದಾಕ್ಷಿಣ್ಯವಾಗಿ ನಿರಾಕರಿಸುತ್ತಿದ್ದರು. ಅಂತಹ ನಿಷ್ಠುರವಾದಿಯಾಗಿದ್ದರೂ ಎಂದಿಗೂ ದನಿಯೇರಿಸಿದವರಲ್ಲ, ಯಾರೊಂದಿಗೂ ಜಗಳವಾಡಿದವರಲ್ಲ; ಭಿನ್ನಮತವನ್ನೂ ಸೌಮ್ಯವಾಗಿಯೇ ಪ್ರತಿಪಾದಿಸುವವರು. ಕನ್ನಡ ಸಾಹಿತ್ಯ ರಂಗವು ಹೇಗೆ, ಯಾವ ದಿಕ್ಕಿನಲ್ಲಿ ಸಾಗಬೇಕೆನ್ನುವುದನ್ನು ನಿರ್ದಿಷ್ಟವಾಗಿ ಕಲ್ಪಿಸಿಕೊಂಡು ಅದೇ ರೀತಿಯಲ್ಲಿ ಅದರ ಬೆಳವಣಿಗೆಯನ್ನು ಸಾಕಾರಗೊಳಿಸಿಕೊಂಡವರು.

೨೦೧೫ರ ಏಪ್ರಿಲ್‌ನಲ್ಲಿ ಹ್ಯೂಸ್ಟನ್‌ನಲ್ಲಿ ನಡೆದ ವಸಂತ ಸಾಹಿತ್ಯೋತ್ಸವವು ಕನ್ನಡ ಸಾಹಿತ್ಯ ರಂಗದ ದಶಮಾನೋತ್ಸವ ಸಂದರ್ಭವೂ ಆಗಿತ್ತು. ಅಂದು

ರಾಜಗೋಪಾಲರಲ್ಲಿ ತನ್ನ ಕನಸಿನ ಕೂಸು ಒಂದು ಹಂತ ತಲುಪಿದ ಸಾರ್ಥಕ್ಯಭಾವವೂ ಮುಂದೆ ಅದೇ ರೀತಿಯಲ್ಲಿ ಸಂಸ್ಥೆಯನ್ನು ಮುನ್ನಡೆಸಬೇಕಾಗಿರುವ ಜವಾಬ್ದಾರಿಯ ಒಂದಂಕಿ ಹೆಚ್ಚಳದ ಅರಿವೂ ಜೊತೆಜೊತೆಯಾಗಿದ್ದವು. ಯಾವುದೇ ಸಾರ್ಥಕ್ಯ ಭಾವ ಮುಂದಿನ ಜವಾಬ್ದಾರಿಗಳ ಕೈದೀಪವಾಗಬೇಕು. ಅದು ನಮ್ಮನ್ನು ಇನ್ನಷ್ಟು ಪ್ರೇರೇಪಿಸಬೇಕು, ಮುನ್ನಡೆಯಲು ಸ್ಫೂರ್ತಿಯಾಗಬೇಕು ಎಂದಿದ್ದರು ರಾಜಗೋಪಾಲ್. ಅಂತೆಯೇ ನಡೆದುಕೊಂಡರು.

೨೦೧೩ರಲ್ಲಿಯೇ ಕನ್ನಡಿಗರಲ್ಲೆಲ್ಲ ಪ್ರಖ್ಯಾತವಾಗಿರುವ, ಮೂಡಬಿದರೆಯ 'ಆಳ್ವಾಸ್ ವಿದ್ಯಾಸಂಸ್ಥೆ'ಯ ರೂವಾರಿ ಡಾ. ಮೋಹನ ಆಳ್ವರು ನಡೆಸಿಕೊಂಡು ಬರುವ, 'ನುಡಿಸಿರಿ'ಯ ದಶಮಾನೋತ್ಸವ ಸಮಾರಂಭ. ಒಬ್ಬ ವ್ಯಕ್ತಿ ಯಾವುದೇ ರಾಜಕೀಯ ಅಥವಾ ಸರಕಾರೀ ಆಶ್ರಯ-ದೇಣಿಗೆ-ಅನುದಾನಗಳಿಲ್ಲದೆ ಯಾವುದೇ ಸರಕಾರೀ ಸಾಹಿತ್ಯ ಸಮ್ಮೇಳನಗಳನ್ನೂ ಮೀರಿಸುವಂತೆ ಕನ್ನಡ ನುಡಿತೇರನ್ನು ಸಿಂಗರಿಸಿ ಉತ್ಸವೋಪಾದಿಯಲ್ಲಿ ಮೂರು ದಿನಗಳ ಕಾಲ ಸಂಭ್ರಮಿಸುವ ಕಾರ್ಯಕ್ರಮ ಇನ್ನೆಲ್ಲೂ ಇರಲಾರದು. ಅಂತಹ ಸಂಭ್ರಮದ ದಶಮಾನೋತ್ಸವ ಕಾರ್ಯಕ್ರಮವನ್ನು ವಿಶೇಷವಾಗಿ 'ವಿಶ್ವ ನುಡಿಸಿರಿ'ಯಾಗಿ ಆಯೋಜಿಸಲಾಗಿತ್ತು. ಆ ಸಂದರ್ಭದಲ್ಲಿ 'ಹೊರನಾಡ ಕನ್ನಡಿಗ'ರಾಗಿ ರಾಜಗೋಪಾಲರನ್ನು ಆಹ್ವಾನಿಸಿ, ಅವರಿಂದ ವಿಶೇಷ ಉಪನ್ಯಾಸವನ್ನು ಏರ್ಪಡಿಸಲಾಗಿತ್ತು. 'ನುಡಿಸಿರಿ'ಯ ಮೂರನೇ ದಿನದ ಸಮಾರೋಪ ಸಮಾರಂಭದಲ್ಲಿ, ವರ್ಷಂಪ್ರತಿಯ ವಾಡಿಕೆಯಂತೆ, ಕೆಲವು ಗಣ್ಯರನ್ನು ಸಾಧಕರನ್ನು ಗುರುತಿಸಿ ಸಮ್ಮಾನಿಸುವ ಸಂದರ್ಭದಲ್ಲಿ, ರಾಜಗೋಪಾಲರಿಗೂ ವಿಶೇಷ ಸನ್ಮಾನ ಮಾಡಲಾಗಿತ್ತು. ಇದರಿಂದ ರಾಜಗೋಪಾಲರಿಗೆ ಇನ್ನಷ್ಟು ವಿನೀತಭಾವ ಆವರಿಸಿತ್ತೆಂದು ಸನ್ಮಾನದ ನಂತರ ಅವರು ತಿಳಿಸಿದ್ದರು. ವಿನೀತರಾಗಿಯೇ ಇರುವವರಿಗೆ ಇನ್ನಷ್ಟು ನಮ್ರತೆ ಆವರಿಸಿದರೆ ಹೇಗಿದ್ದೀತೆಂದು ಅಂದು ರಾಜಗೋಪಾಲರನ್ನು ಕಂಡು ಮಾತನಾಡಿಸಿದವರಿಗಷ್ಟೇ ತಿಳಿದೀತು.

ಮಹಾದೇವ್ ಮತ್ತು ನಾನು, ೨೦೧೦ರಲ್ಲಿ ಭಾರತಕ್ಕೆ ಮತ್ತೆ ಮರುವಲಸೆ ಬಂದು ಮಣಿಪಾಲದಲ್ಲಿ ನೆಲೆಸಿದ್ದೇವೆ. ಭಾರತದಲ್ಲಿದ್ದುಕೊಂಡು, ಅಮೆರಿಕದಲ್ಲಿರುವ ಕನ್ನಡ ಸಾಹಿತ್ಯ ರಂಗದ ಕೆಲಸಕಾರ್ಯಗಳಲ್ಲಿ ನಾನಂದುಕೊಂಡಷ್ಟು ಸಕ್ರಿಯವಾಗಿ ಭಾಗವಹಿಸಲಾಗದಿದ್ದರೂ ನನ್ನಿಂದಾದಷ್ಟು ಜವಾಬ್ದಾರಿಗಳನ್ನು ಹೆಗಲಿಗೇರಿಸಿಕೊಳ್ಳುತ್ತಿದ್ದೆ. ಆದರೂ, ಬರುಬರುತ್ತಾ ಸಾಂಸಾರಿಕ ಕರ್ತವ್ಯಗಳು ಹೆಚ್ಚುತ್ತಿದ್ದಂತೆ ಕನ್ನಡ ಸಾಹಿತ್ಯ ರಂಗದ ಕಾರ್ಯಗಳಲ್ಲಿ ಮತ್ತಷ್ಟು ಕ್ರಿಯಾತ್ಮಕವಾಗಿ ಕೈಜೋಡಿಸಲಾಗದ, ಮುತುವರ್ಜಿ ವಹಿಸಿ ತೊಡಗಿಸಿಕೊಳ್ಳಲಾಗದ ಸಂದರ್ಭಗಳು, ಪರಿಸ್ಥಿತಿಗಳು ಎದುರಾಗತೊಡಗಿದವು. ನಿಯಮಿತ ಮೀಟಿಂಗುಗಳ ಕಾನ್ಫರೆನ್ಸ್ ಕರೆಗಳಲ್ಲಿಯೂ ಸಲೀಸಾಗಿ ನೇರವಾಗಿ ನಾನೇ



ಕರೆಮಾಡಿ ಸೇರಿಕೊಳ್ಳಲಾಗುತ್ತಿರಲಿಲ್ಲ (ಅದಕ್ಕಾಗಿ ನನ್ನನ್ನು ಅಮೆರಿಕದಿಂದ ಯಾರಾದರೂ ತಮ್ಮ ಫೋನಿಂದ ನನಗೆ ಕರೆಮಾಡಿ ಅನಂತರ ತಾವು ಆ ಕಾನ್ಫರೆನ್ಸ್ ಕರೆಗೆ ಸೇರಿಕೊಳ್ಳುವ ಕಸರತ್ತು ನಡೆಸಬೇಕಾಗಿತ್ತು). ಹೀಗಾಗಿ, ಆಡಳಿತ ಮಂಡಳಿಯ ಸದಸ್ಯತ್ವದಿಂದ ಸ್ವಯಂನಿವೃತ್ತಿ ಪಡೆವೆನೆಂದು ೨೦೧೭ರಲ್ಲಿ ನಿರ್ಧರಿಸಿಕೊಂಡೆ.

ನನ್ನ ಈ ನಿರ್ಧಾರವನ್ನು ರಾಜಗೋಪಾಲರಲ್ಲಿ ಪ್ರಸ್ತಾಪಿಸಿದಾಗ ಅವರು ತಮ್ಮ ಎಂದಿನ ಮೆಲುದನಿಯಲ್ಲೇ ದಬಾಯಿಸಿದ್ದರು. 'ಕನ್ನಡಕ್ಕಾಗಿ ನಿರ್ವ್ಯಾಜ್ಯತೆಯಿಂದ ಕೆಲಸ ಮಾಡುವ ನೀವೇ ಹೀಗೆ ಹಿಂದೆ ನಿಂತರೆ ಹೇಗೆ ಎಂದಿದ್ದರು. 'ಮಂಡಳಿಯ ಸದಸ್ಯೆಯಾಗಿಲ್ಲದಿದ್ದರೂ ನನ್ನಿಂದಾಗುವ, ಆಗಬೇಕಾದ ಕೆಲಸಗಳನ್ನು ನಿರ್ವ್ಯಾಜ್ಯತೆಯಿಂದ ನಿಃಸ್ವಾರ್ಥದಿಂದ ಮಾಡುತ್ತಲೇ ಇರುತ್ತೇನೆ' ಎಂದಿದ್ದೆ. ಅವರಿಗದೆಷ್ಟು ಸಮಾಧಾನ ತಂದಿತ್ತೋ ತಿಳಿಯದು; ಸುಮ್ಮನಾಗಿದ್ದರು. ಅದು ಅವರ ಸ್ವಭಾವ. ಯಾವುದೇ ವಿಷಯವನ್ನು ಒಮ್ಮೆ ಹೇಳಿ ಸುಮ್ಮನಾಗಿ, ಅನಂತರ ತನ್ನೊಳಗೇ ಕೆಲಕಾಲ ಅದನ್ನು ಚಿಂತಿಸುತ್ತಿದ್ದರು. ತಡೆಯದಾದಾಗ ಮತ್ತೊಮ್ಮೆ ತಿಳಿಹೇಳುತ್ತಿದ್ದರು. ಇಲ್ಲಿ ಅಂತಹ ಆಸ್ಪದ ಇಲ್ಲವಾಗಿತ್ತು. ಬಾಸ್ಟನ್ ವಸಂತ ಸಾಹಿತ್ಯೋತ್ಸವ (೨೦೧೭-ಏಪ್ರಿಲ್)ದಲ್ಲಿ ಭೇಟಿಯಾದಾಗ ನಾನೀ ಮಾತನ್ನು ಅವರಿಗೆ ತಿಳಿಸಿದ್ದಾಗಿತ್ತು. ಅದಾಗಲೇ ರಾಜಗೋಪಾಲರು ಬಹಳಷ್ಟು ಕುಗ್ಗಿದ್ದರು.

ತನ್ನ ಅನಾರೋಗ್ಯದ ಬಗೆಗಾಗಲಿ, ಅದರಿಂದ ತನಗುಂಟಾಗಿರುವ ದೈಹಿಕ ಮಾನಸಿಕ ಹಿಂಸೆ-ತೊಂದರೆಗಳ ಕುರಿತಾಗಲಿ ರಾಜಗೋಪಾಲ್ ಎಂದೂ ಮಾತನಾಡಿದವರಲ್ಲ. ಬಾಸ್ಟನ್‌ನಲ್ಲಿ ಭೇಟಿಯಾದಾಗ ನಾನೇ ಮಾತಿನ ನಡುವೆ ಅವರ ಆರೋಗ್ಯದ ವಿಚಾರ ಪ್ರಸ್ತಾಪಿಸಿದಾಗಲೂ ಎಷ್ಟು ಸೂಕ್ಷ್ಮವಾಗಿ ಸಾಧ್ಯವೋ ಅಷ್ಟು ಸೂಕ್ಷ್ಮವಾಗಿ ತಿಳಿಸಿ ಮಾತು ಹೊರಳಿಸಿದ್ದರು. ಅವರ ವಿಮನಸ್ಸು ತಿಳಿದು ಮತ್ತೆ ಆ ವಿಚಾರ ಎತ್ತಿರಲಿಲ್ಲ. ಆದರೆ, ರಾಜಗೋಪಾಲ್ ಪಕ್ಕದಲ್ಲಿಲ್ಲದ ಕ್ಷಣಗಳಲ್ಲಿ ವಿಮಲಾ ಅವರು ಕೆಲವೊಂದು ವಿಷಯಗಳನ್ನು ಹಂಚಿಕೊಂಡಿದ್ದರು. ರಾಜಗೋಪಾಲ್ ತಮ್ಮ ನೋವನ್ನು ತಾವೇ ನುಂಗಿಕೊಂಡು ಬಹಳಷ್ಟು ಅಂತರ್ಮುಖಿಯಾಗಿ ಕೊರಗುತ್ತಿದ್ದಾರೆಂದು ಹೇಳಿ ವಿಮಲಾ ಖೇದಪಟ್ಟಿದ್ದರು.

ಯಾವಾಗ ಎಲ್ಲಿ ಭೇಟಿಯಾಗಲಿ, ಫೋನ್ ಮೂಲಕ ಮಾತಾಡಲಿ, ರಾಜಗೋಪಾಲರ ಮೊದಲ ಮಾತು 'ಏನಮ್ಮಾ, ಹೇಗಿದ್ದೀರಿ?' ಎಂದಿರುತ್ತಿತ್ತು, ತುಂಬು ವಿಶ್ವಾಸದೊಂದಿಗೆ. ಇದರ ಮುಂದಿನ ಮಾತು ಯಾವಾಗಲೂ, 'ಏನು ಹೊಸದು ಬರೆದಿರಿ?' ಎಂದೇ ಆಗಿರುತ್ತಿತ್ತು. ಬರವಣಿಗೆಗೆ ಅವರು ನೀಡುತ್ತಿದ್ದ ಪ್ರೋತ್ಸಾಹ ಈ ಪುಟ್ಟ ಪ್ರಶ್ನೆಯಲ್ಲಿ ತುಂಬಿರುತ್ತಿತ್ತು. 'ಇತ್ತೀಚೆಗೆ ಏನೂ ಬರೆದಿಲ್ಲ'ವೆಂದರೆ, ಒಂದಿಷ್ಟೇ ಇಷ್ಟು ಅಸಮಾಧಾನದ ಲೇಪನದೊಂದಿಗೆ, 'ಬರೀಬೇಕಮ್ಮಾ, ಬರೆಯುತ್ತಿರಬೇಕು.

ಬಿಡಬಾರದು' ಎನ್ನುತ್ತಿದ್ದರು, ಗುರುಗಳಂತೆ. ೨೦೧೨ರ ಅಕ್ಟೋಬರದಲ್ಲಿ ನಾನೊಂದು ಲೇಖನ ಬರೆದಿದ್ದೆ, ನನ್ನೆರಡು ನಾಯಿಮರಿಗಳ ಕುರಿತಾಗಿ. ಅದನ್ನೋದಿದ ರಾಜಗೋಪಾಲರು, ೨೦೧೩ರಲ್ಲಿ ಹ್ಯೂಸ್ಟನ್‌ನಲ್ಲಿ ನಡೆದ ವಸಂತ ಸಾಹಿತ್ಯೋತ್ಸವದ ಸಂದರ್ಭದಲ್ಲಿ ನನ್ನೊಡನೆ ಒಂದು ವಿಷಯ ಪ್ರಸ್ತಾಪಿಸಿದ್ದರು: ಕನ್ನಡದ ಅನೇಕ ಸಾಹಿತಿಗಳು ತಂತಮ್ಮ ಪ್ರೀತಿಯ ಸಾಕುಪ್ರಾಣಿಗಳ ಕುರಿತಾಗಿ ಬರೆದಿರುವ ಲೇಖನಗಳನ್ನು ಸಂಗ್ರಹಿಸಿ ಒಂದು ಹೊತ್ತಗೆಯಾಗಿಸಬೇಕೆಂದು ಅವರಿಗೆ ಆಲೋಚನೆ ಹುಟ್ಟಿತ್ತು. ಅವರ ಬಳಿ ಅಂತಹ ಕೆಲವು ಲೇಖನಗಳು ಇರುವುದಾಗಿ ತಿಳಿಸಿದ್ದರು. ಉಳಿದವನ್ನು ಹೇಗಾದರೂ ಸಂಗ್ರಹಿಸಿ ಸಂಕಲನವಾಗಿಸುವ ಕನಸು ಹೊತ್ತಿದ್ದರು. ಅದನ್ನು ನನಸಾಗಿಸಲು ನಮ್ಮಿಂದ ಸಾಧ್ಯವಾಗದೇ ಹೋದುದು ನನ್ನೊಳಗನ್ನು ಕೊರೆಯುತ್ತಿದೆ, ಇನ್ನೂ ಕೊರೆಯುತ್ತಿರುತ್ತದೆ.

ಒಮ್ಮೆ, ಮಣಿಪಾಲದ ನಮ್ಮ ಮನೆಗೆ ರಾಜಗೋಪಾಲರು, ಪತ್ನಿ ವಿಮಲಾ ಮತ್ತು ಪ್ರೊ. ಶ್ರೀಪತಿ ತಂತ್ರಿಯವರ ಜೊತೆಗೆ ಬಂದಿದ್ದರು. ನಮ್ಮ ಮನೆಯ ಮುಂದಿನ ತೋಟ, ವಿವಿಧ ಗಿಡ–ಮರಗಳು, ಪುಟ್ಟ ಕಾಡಿನಂತಹ ವಾತಾವರಣ (ಹೌದು ಕಾಡು! ನಾನು ಬಹಳವಾಗಿ ಗಿಡ–ಮರಗಳನ್ನು ಕತ್ತರಿಸುತ್ತಿಲ್ಲವಾಗಿ ಇದೊಂದು ಸಣ್ಣ ಕಾಡಿನಂತೆಯೇ ಕಾಣುತ್ತದೆ; ಅತ್ತಿತ್ತ ಅಡ್ಡಾಡುವಾಗ ಗಿಡಗಳ ಪುಟ್ಟ ರೆಂಬೆಗಳು ಕೆನ್ನೆ ನೇವರಿಸುತ್ತವೆ, ಮರಗಳ ಗೆಲ್ಲುಗಳು ತಲೆ ಸವರುತ್ತವೆ), ಚಿಲಿಪಿಲಿಗುಟ್ಟುವ ಹಲವಾರು ಬಗೆಯ ಚಿಟ್ಟುಪುಟಾಣಿ ಹಕ್ಕಿಗಳು, ಕಣ್ಣಿಗೆ ಕಟ್ಟುವ ಹಸಿರು... ಇವೆಲ್ಲ ಬಹಳವೇ ಮೆಚ್ಚಾಗಿತ್ತು. ವಿಮಲಾ ಅವರಂತೂ, 'ಇಲ್ಲೇ ಸಂಜೇತನಕ ಕೂರೋಣ' ಅಂತಿದ್ದರು. ಬೇರೊಂದು ಭೇಟಿಯನ್ನು ನಿಗದಿಪಡಿಸಿಕೊಂಡೇ ಬಂದಿದ್ದರಾದ್ದರಿಂದ 'ಕೂರಬಹುದಾಗಿತ್ತೇ! ಆದರೆ ಹೋಗಲೇಬೇಕಾಗಿದೆಯಲ್ಲ!' ಎಂದು ಅಲವತ್ತುಕೊಂಡಿದ್ದರು ರಾಜಗೋಪಾಲ್. 'ಇನ್ನೊಮ್ಮೆ ಭಾರತಕ್ಕೆ ಬಂದಾಗ ಇಲ್ಲಿ ಉಳಿಯುವಂತೆ ಬರುತ್ತೇವೆ' ಎಂದು ಗೇಟು ದಾಟಿದ್ದ ಅವರು, ಈಗ ಹಿಂದಿರುಗಲಾರದ ನೆಲೆಗೆ ದಾಟಿಕೊಂಡಿದ್ದಾರೆ. ನಾನಿಲ್ಲಿ ತೋಟ ಸುತ್ತುವಾಗ, ಗಿಡ–ಮರಗಳ ನಡುವೆ ಕೆಲಸ ಮಾಡುವಾಗ, ಯಾವುದಾದರೂ ಪುಟ್ಟ ಹಕ್ಕಿಯೋ ಚಿಟ್ಟೆಯೋ ನನ್ನ ಸುತ್ತಮುತ್ತ ಹಗುರಾಗಿ ಹಾರಾಡಿಕೊಂಡಿದ್ದರೆ ನನ್ನ ಮನ ಅವರನ್ನು ನೆನೆಯುತ್ತದೆ, ಹರಸುತ್ತಿರುವರೆಂದು ಭಾವಿಸಿ ಮಣಿಯುತ್ತದೆ, ತಣಿಯುತ್ತದೆ.

ಬಾಸ್ಟನ್‌ನಲ್ಲಿ ಕನ್ನಡ ಸಾಹಿತ್ಯ ರಂಗವು ೨೦೧೭ರ ವಸಂತ ಸಾಹಿತ್ಯೋತ್ಸವ ಸಂದರ್ಭದಲ್ಲಿ ತನ್ನ 'ಸೃಷ್ಟಿಕರ್ತ'ನನ್ನು ಗೌರವಿಸಿ, ಸನ್ಮಾನಿಸಿದುದು ಅತ್ಯಂತ ಸೂಕ್ತವಾಗಿದೆ. ಕನ್ನಡಕ್ಕಾಗಿ ತುಡಿಯುತ್ತ, ದುಡಿಯುತ್ತ, ತನ್ನ ಅನಾರೋಗ್ಯದ, ದೈಹಿಕ ನೋವಿನ, ದಿನಗಳಲ್ಲೂ 'ಕನ್ನಡ'ವನ್ನೇ ಧ್ಯಾನಿಸುತ್ತಿದ್ದ ಅಮೆರಿಕನ್ನಡಿಗನೊಬ್ಬ ತಾನು ನಡೆದ ಹಾದಿ



ಎಳೆಯರಿಗೆ ನಿದರ್ಶನವಾಗುವಂತೆ ಬಾಳಿದವರು. ಎಸ್. ಕೆ. ಹರಿಹರೇಶ್ವರ ಅವರದೂ ಇಂತಹುದೇ ಕನ್ನಡ–ಸಂತನಂತಹ ಬಾಳು. ಇವರಿಬ್ಬರೂ ಅಮೆರಿಕನ್ನಡಿಗರಿಗೆ ದೊಡ್ಡಾಲದ ಮರಗಳು. ಈ ವಿಶಾಲ ಮರಗಳ ನೆರಳಿನಲ್ಲಿ ವಿಹರಿಸುತ್ತ, ಹರಡಿದ ಶಾಖೋಪಶಾಖೆಗಳ ಜೋತುಬಿದ್ದ ಬಿಳಲುಗಳಲ್ಲಿ ಜೀಕುತ್ತ, 'ಕನ್ನಡತನ'ದ ಸತ್ವ ಹೀರಿ ಬೆಳೆಯುತ್ತ, 'ಅಮೆರಿಕನ್ನಡಿಗರಾಗಿ' ನಮ್ಮತನವನ್ನು ಕಂಡುಕೊಳ್ಳುವ ಆಯಾಮವನ್ನು ಇವರಿಬ್ಬರೂ ತಮ್ಮ ಸಹ–ಕನ್ನಡಿಗರಿಗೆ ಒದಗಿಸಿಕೊಟ್ಟಿದ್ದಾರೆ. ಒಂದಿಲ್ಲೊಂದು ರೀತಿಯಲ್ಲಿ ಹಲವಾರು ಅಮೆರಿಕನ್ನಡಿಗರು ಲೇಖನಿ/ಕೀಲಿಮಣೆ ಕೈಗೆತ್ತಿಕೊಳ್ಳುವಂತೆ ಮಾಡಿದ್ದಾರೆ. ಇವರಿಬ್ಬರ ಪರಿಚಯಕ್ಕೂ ಮೊದಲೇ ಬರೆಯುತ್ತಿದ್ದವರನ್ನೂ ಕೂಡಾ ಇನ್ನಷ್ಟು ಬರೆಯುವಂತೆ, ಬೇರೆ ಬೇರೆ ವಿಚಾರಗಳ ಕುರಿತು ಬರವಣಿಗೆ ಕೈಗೆತ್ತಿಕೊಳ್ಳುವಂತೆ ಪ್ರಚೋದಿಸಿದ್ದಾರೆ. ಇಂತಹ ಪ್ರೇರಕಶಕ್ತಿಗೆ ಆಚಾರ್ಯಸದೃಶರಿಗೆ ಈ ಮೂಲಕ ಪದನಮನ.



# ಎಚ್. ವೈ. ರಾಜಗೋಪಾಲ್ ಅವರ ನೆನಪಿನಲ್ಲಿ

**–ಶಂಕರ ಹೆಗಡೆ**

ಶ್ರೀ ರಾಜಗೋಪಾಲ್ ಅವರನ್ನು ನಾನು ಮೊದಲ ಸಲ ಭೆಟ್ಟಿಯಾದದ್ದು ೨೦೦೭ರಲ್ಲಿ ಶಿಕಾಗೋದಲ್ಲಿ ಜರುಗಿದ ಕನ್ನಡ ಸಾಹಿತ್ಯ ರಂಗದ ಮೂರನೆಯ ವಸಂತೋತ್ಸವದ ಸಮಯದಲ್ಲಿ. ಆಗ ಅವರೊಡನೆ ಔಪಚಾರಿಕವಾಗಿ ಮಾತನಾಡುತ್ತಿದ್ದಾಗ ರಾಜಗೋಪಾಲ್ ಅವರು ನನ್ನ ಪತ್ನಿ ಲೀಲಾ ಮತ್ತು ಅವಳ ತಾಯಿಯವರಿಗೆ ಮೊದಲೇ ಪರಿಚಯವಿತ್ತೆಂದು ತಿಳಿಯಿತು. ಅಲ್ಲದೆ ನಮ್ಮ ದೂರದ ಸಂಬಂಧಿಕರಲ್ಲೊಬ್ಬರಾದ ಶ್ರೀಧರ್ ಎಂಬವರು ಕೂಡ ಮಿಲ್ವಾಕಿಯಿಂದ ವಸಂತೋತ್ಸವಕ್ಕೆ ಬಂದಿದ್ದರು. ಅವರಿಗೂ ರಾಜಗೋಪಾಲ ದಂಪತಿಗಳ ಪೂರ್ವ ಪರಿಚಯವಿದ್ದಿತು. ಹಾಗಾಗಿ ನಾವು ರಾಜಗೋಪಾಲ್ ದಂಪತಿಯವರನ್ನು ನಮ್ಮ ಮನೆಗೆ ಊಟಕ್ಕೆ ಆಹ್ವಾನಿಸಿದೆವು. ವಸಂತೋತ್ಸವದ ಆಹ್ವಾನಿತ ಉಪನ್ಯಾಸಕರಲ್ಲೊಬ್ಬರಾದ ಶ್ರೀ ಎಚ್. ಎಸ್. ರಾಘವೇಂದ್ರರಾವ್ ದಂಪತಿ ನಮ್ಮ ಅತಿಥಿಗಳಾಗಿ ನಮ್ಮ ಮನೆಯಲ್ಲಿಯೇ ಉಳಿದಿದ್ದರು. ಎಲ್ಲರೂ ಕೂಡಿ ಅಂದು ಮಧ್ಯಾಹ್ನ ಒಂದೆರಡು ತಾಸುಗಳನ್ನು ಆಹ್ಲಾದಕರವಾಗಿ ಕಳೆದಿದ್ದೆವು.

ಆನಂತರ ನನಗೆ ರಾಕ್ವಿಲ್ ಮೇರಿಲ್ಯಾಂಡ್, ಸೈಂಟ್ ಲೂಯಿಸ್, ಮತ್ತು ಬಾಸ್ಟನ್ ನಗರಗಳಲ್ಲಿ ನಡೆದ ವಸಂತೋತ್ಸವಗಳಲ್ಲಿ ರಾಜಗೋಪಾಲ್ ದಂಪತಿಗಳೊಂದಿಗೆ



ಕೆಲಹೊತ್ತು ಕಳೆಯುವ ಅವಕಾಶ ದೊರಕಿದ್ದಿತು. ಪ್ರತಿ ಸಲ ಅವರ ಭೆಟ್ಟಿಯಾದಾಗಲೂ ಅವರು ತಪ್ಪದೇ ನಮ್ಮೊಡನೆ ಕೆಲ ಸಮಯ ಮಾತನಾಡಿ, ಅತ್ಯಂತ ಪ್ರೀತಿ-ಆದರದೊಂದಿಗೆ ಕ್ಷೇಮ ಸಮಾಚಾರ ವಿಚಾರಿಸಿಕೊಳ್ಳುತ್ತಿದ್ದರು. ಸೈಂಟ್ ಲೂಯಿಸ್ ಸಮ್ಮೇಳನದ ಹೊತ್ತಿಗಾಗಲೇ ರಾಜಗೋಪಾಲ್ ಅವರ ಆರೋಗ್ಯ ಕ್ಷೀಣಿಸಿತ್ತು. ಆದಾಗ್ಯೂ ದಂಪತಿಗಳು ನಮ್ಮೊಂದಿಗೆ ಸ್ವಲ್ಪ ಸಮಯ ಕಳೆಯಲು ಮರೆಯಲಿಲ್ಲ. ಅವರ ಮೃದು ಸ್ವಭಾವ, ಆತ್ಮೀಯತೆ, ಅಚ್ಚುಕಟ್ಟುತನಗಳ ನೆನಪು ನನ್ನ ಮನಸ್ಸಿನಲ್ಲಿ ಬಹಳ ಕಾಲ ಅಚ್ಚಳಿಯದೆ ಉಳಿಯುವದರಲ್ಲಿ ಸಂದೇಹವಿಲ್ಲ.

ನನ್ನಲ್ಲಿ ಬಹಳ ವರ್ಷಗಳಿಂದ ಸುಪ್ತವಾಗಿದ್ದ ಕನ್ನಡ ಸಾಹಿತ್ಯಾಭಿರುಚಿಯನ್ನು ಪುನಃ ಚೇತರಿಸಿರುವದಕ್ಕೆ ಕನ್ನಡ ಸಾಹಿತ್ಯ ರಂಗಕ್ಕೆ ಮತ್ತು ಅದರ ಸ್ಥಾಪಕರಾದ ರಾಜಗೋಪಾಲ್ ಅವರಿಗೆ ನಾನು ಸದಾ ಋಣಿ. ಕಳೆದ ವರ್ಷ ಕನ್ನಡ ಸಾಹಿತ್ಯ ರಂಗದ ಬೋರ್ಡ್ ಆಫ್ ಟ್ರಸ್ಟಿನ ಸದಸ್ಯನಾಗೆಂದು ನನ್ನನ್ನು ಸ್ವತಃ ಕರೆದು ಆಹ್ವಾನಿಸಿದ್ದು ಅವರು ನನ್ನ ಮೇಲಿಟ್ಟ ಪ್ರೀತಿ-ವಿಶ್ವಾಸಕ್ಕೆ ನಿದರ್ಶನ.



# ಪ್ರಬಲ ಇಷ್ಟ-ನಿಷ್ಠೆಗಳ ಸಾತ್ವಿಕ ಜಂಟಲ್ಮನ್

–ಡಾ. ಗುರುಪ್ರಸಾದ ಕಾಗಿನೆಲೆ

ರಾಜಗೋಪಾಲರನ್ನು ನಾನು ಯಾವಾಗ ನೆನೆಸಿಕೊಂಡಾಗಲೂ ನನ್ನ ನೆನಪಿಗೆ ಸದಾ ಬರುವ ಒಂದೇ ಒಂದು ಪದವೆಂದರೆ 'ಜಂಟಲ್ಮನ್.' ಅವರಿಗೆ ಸಿಟ್ಟು ಬಂದದ್ದನ್ನೇ ನಾನು ನೋಡಿಲ್ಲ. ಕೆಲವೊಮ್ಮೆ ಕನ್ನಡ ಸಾಹಿತ್ಯರಂಗದಂಥ ಸಂಸ್ಥೆಯನ್ನು ನಡೆಸಬೇಕಾದರೆ ಕೆಲವೊಂದು ಭಿನ್ನಾಭಿಪ್ರಾಯಗಳು ಬಂದೇ ಬರುತ್ತವೆ. ಆದರೆ ಎಲ್ಲ ಭಿನ್ನಾಭಿಪ್ರಾಯಗಳನ್ನು ಅವರು ನಿಭಾಯಿಸುತ್ತಿದ್ದ ಪರಿ ಆಶ್ಚರ್ಯವನ್ನುಂಟುಮಾಡುತ್ತದೆ. ಮಿದುವಾಗಿಯೇ ಎಲ್ಲ ಸಮಸ್ಯೆಗಳನ್ನೂ ಬಗೆಹರಿಸುತ್ತಿದ್ದರು. ಒಂದೇ ಒಂದು ದಿನ ಧ್ವನಿ ಎತ್ತರಿಸಿ ಮಾತಾಡಿದ್ದನ್ನು ನಾನು ನೋಡಿಲ್ಲ.

ನನಗೆ ರಾಜಗೋಪಾಲರ ಪರಿಚಯವಾದದ್ದು ೨೦೦೩ರ ಕನ್ನಡ ಸಾಹಿತ್ಯ ರಂಗದ ಪ್ರಥಮ ವಸಂತೋತ್ಸವ ಸಂದರ್ಭದಲ್ಲಿ. ಆಗತಾನೇ ನನ್ನ ಮೊದಲ ಕಥಾಸಂಕಲನ ಬಿಡುಗಡೆಯಾಗಿತ್ತು. ಅಮೆರಿಕಾದಲ್ಲಿ ಕನ್ನಡ ಸಾಹಿತ್ಯಾಸಕ್ತರ ಗುಂಪು ಬೆರಳೆಣಿಕೆಯಷ್ಟು. ಎಲ್ಲರೂ ತಮ್ಮ ತಮ್ಮ ಊರಿನ ಕನ್ನಡ ಕೂಟಗಳ ದೀಪಾವಳಿ, ಯುಗಾದಿ ವಿಶೇಷಾಂಕಗಳಲ್ಲಿ ಕಥೆ, ಕವನ, ಪ್ರಬಂಧ ಇತ್ಯಾದಿಗಳನ್ನು ಬರೆದುಕೊಂಡು ಅಮೆರಿಕಾಕ್ಕೆ ಯಾರಾದರೂ ಕನ್ನಡ ಸಾಹಿತಿಗಳು ಬಂದಲ್ಲಿ ಅವರುಗಳನ್ನು ಉಪಚರಿಸಿಕೊಂಡು ಅವರ ಜತೆ ಸಾಹಿತ್ಯ, ಸಾಹಿತಿಗಳ ಬಗ್ಗೆ ಮಾತಾಡಿ ತಮ್ಮ ಅಕ್ಷರಾಕಾಂಕ್ಷೆ, ಅಕ್ಷರ ಪ್ರೀತಿ ಇತರೆ



ಎಲ್ಲವುಗಳನ್ನು ಪೂರೈಸಿಕೊಳ್ಳುತ್ತಿದ್ದರು. ಹರಿಹರೇಶ್ವರರ ಅಮೆರಿಕನ್ನಡ ಮೊಟ್ಟಮೊದಲಿಗೆ ಅಕ್ಷರಪ್ರೇಮಿಗಳಿಗೆ ಒಂದು ವೇದಿಕೆಯನ್ನು ಕೊಟ್ಟಂತೆ ಕಾಣಿಸಿದರೂ ಅದು ಹೊರನಾಡಿನಲ್ಲಿ ಕನ್ನಡವನ್ನು ಒಂದು ವಿರಾಮದ ಆಸಕ್ತಿಗಿಂತ ಹೆಚ್ಚಿನ ಮಟ್ಟಕ್ಕೆ ತೆಗೆದುಕೊಂಡು ಹೋಗಲು ಸಫಲವಾಗಲಿಲ್ಲ ಎಂದು ನನಗನಿಸುತ್ತದೆ. ಹರಿಹರೇಶ್ವರರು ಭಾವುಕ ಜೀವಿ. ಕನ್ನಡದ ಯಾವುದೇ ಚಟುವಟಿಕೆಗಳಿಗೆ ಭಾವನಾತ್ಮಕವಾಗಿ ಸ್ಪಂದಿಸುತ್ತಿದ್ದರು. ಆತ ಬರೆದದ್ದು ಕಡಿಮೆ, ಬರೆಸಿದ್ದು ಜಾಸ್ತಿ. ಕನ್ನಡದಲ್ಲಿ ಬರೆಯುವ ಎಲ್ಲರನ್ನೂ ಗುರುತುಮಾಡಿಕೊಂಡು ಅವರಿಂದ ಬರೆಸುತ್ತಿದ್ದರು. ತೊಂಬತ್ತರ ದಶಕದ ಕೊನೆಯಲ್ಲಿ ಅಂತರ್ಜಾಲದಲ್ಲಿ ಕನ್ನಡ ಹೆಚ್ಚುಹೆಚ್ಚು ಕಾಣಿಸಿಕೊಳ್ಳಲು ಶುರುವಾದಾಗ ಹೊರನಾಡಿನಲ್ಲಿದ್ದ ಹೆಚ್ಚು ಹೆಚ್ಚು ಬರಹಗಾರರು ದಟ್ಸ್‌ಕನ್ನಡ.ಕಾಮ್‌ನಂತಹ ಅಂತರ್ಜಾಲ ಪೋರ್ಟಲ್‌ಗಳಲ್ಲಿ ಹೆಚ್ಚುಹೆಚ್ಚು ಬರೆಯತೊಡಗಿದರು. ಅಂತರ್ಜಾಲವಾದ್ದರಿಂದ ಎಲ್ಲರಿಗೂ ಎಲ್ಲರೂ ಪರಿಚಯವಾಗತೊಡಗಿದರು. ಅಂತಹ ಬರಹಗಾರರಲ್ಲಿ ಸಾಹಿತ್ಯವನ್ನು ಗಂಭೀರವಾಗಿ ಪರಿಗಣಿಸಿ ಬರೆಯುವವರು ಗಣನೀಯ ಸಂಖ್ಯೆಯಲ್ಲಿಯೇ ಇದ್ದರು. ಇಂಥ ಬರಹಗಾರರನ್ನು ಎರಡು ವರ್ಷಕ್ಕೊಮ್ಮೆ ಒಂದು ಸೂರಿನೆಡೆ ನೆಲೆಗೂಡಿಸಿ ಈ ಸಾಹಿತ್ಯದ ಚಟುವಟಿಕೆಗಳಿಗೆ ಒಂದು ಸಾಂಘಿಕ ಆಯಾಮವನ್ನು ತಂದ ಕೀರ್ತಿ ರಾಜಗೋಪಾಲರಿಗೆ ಸಿಗುತ್ತದೆ.

ರಾಜಗೋಪಾಲರ ವ್ಯಕ್ತಿತ್ವದ ಪರಿಚಯ ಪೂರ್ಣಪ್ರಮಾಣದಲ್ಲಿ ಆದದ್ದು ನನಗೆ ಅವರು 'ಆಚೀಚೆಯ ಕಥೆಗಳು' ಎಂಬ ಕಥಾಸಂಕಲನದ ಜವಾಬ್ದಾರಿ ವಹಿಸಿದಾಗ. ನನ್ನ ಕೆಲಸದ ನಡುವೆ ನನಗೆ ಈ ಸಂಕಲನದ ಸಂಪಾದನೆಯನ್ನು ಮಾಡಲಿಕ್ಕಾಗುತ್ತದೆಯೋ ಇಲ್ಲವೋ ಎಂಬ ಅನುಮಾನವಿತ್ತು. ಅದಲ್ಲದೇ, ಈ ಪುಸ್ತಕಕ್ಕೆ ಯಶವಂತ ಚಿತ್ತಾಲರಿಂದ ಮುನ್ನುಡಿಯನ್ನು ಬರೆಸುವ ಇರಾದೆಯಿತ್ತು. ಚಿತ್ತಾಲರ ವ್ಯಕ್ತಿತ್ವದ ಪರಿಚಯ ನನಗೆ ನೇರವಾಗಿರಲಿಲ್ಲವಾದರೂ ಸ್ನೇಹಿತರಿಂದ ಕೇಳಿದ್ದೆ. ಕಥೆ ಕಟ್ಟುವುದು ಚಿತ್ತಾಲರ ಪಾಲಿಗೆ ಒಂದು ವ್ರತ. ಕಥಾವಸ್ತು, ತಂತ್ರ, ಭಾಷೆ ಎಲ್ಲದರ ಹದವಾದ ಮಿಳಿತವಾದರೆ ಮಾತ್ರ ಕತೆಯಾಗುವುದು ಎಂದು ಬಲವಾಗಿ ನಂಬಿದ್ದರು. ಅಮೆರಿಕಾದಲ್ಲಿ ಕನ್ನಡ ಬರಹವನ್ನು ಪ್ರೋತ್ಸಾಹಿಸುವುದೇ ಕನ್ನಡ ಸಾಹಿತ್ಯ ರಂಗದ ಧ್ಯೇಯವಾಗಿದ್ದಾಗ ಸಹಜವಾಗಿಯೇ ಒಂದು ಕಥಾಸಂಕಲದಲ್ಲಿ ಒಂದೇ ಗುಣಮಟ್ಟವನ್ನು ಕಾಪಾಡಿಕೊಳ್ಳುವುದು ಬಹಳ ಕಷ್ಟವಾಗುತ್ತದೆ. ನಾನು ಈ ವಿಷಯದ ಬಗ್ಗೆ ರಾಜಗೋಪಾಲರಿಗೆ ಬಹಳ ಬಾರಿ ಹೇಳಿದ್ದೆ. ಕಥೆ ಎಂಬ ಪ್ರಕಾರದ ವ್ಯಾಕರಣವನ್ನು ಕನಿಷ್ಟ ಮಟ್ಟಿಗಾದರೂ ಒಳಗೊಂಡಿದ್ದಲ್ಲಿ ಅವನ್ನು ಪರಿಗಣಿಸೋಣ. ಬೇರೆಲ್ಲವನ್ನೂ ಕಥಾಸಂಕಲನದಲ್ಲಿ ಸೇರಿಸುವುದು ಬೇಡ ಎಂದು ನಾನು ಹೇಳಿದ್ದೆ. ಆದರೆ, ಹೇಗೇ ಬರೆದಿರಲಿ ಕನ್ನಡದಲ್ಲಿ ಬರೆಯುವ ಸಾಹಸ ಮಾಡುತ್ತಿದ್ದಾರಲ್ಲ, ಅವರಂಥವರನ್ನು ಪ್ರೋತ್ಸಾಹಿಸುವುದಕ್ಕೇ ನಾವಿರುವುದು, ಆದಷ್ಟು ಎಲ್ಲವನ್ನೂ ಸೇರಿಸೋಣ ಎನ್ನುವುದು ಅವರ ಸಾತ್ವಿಕ ಹಟ. ಅವರಿಗೂ

ಹತಾಶೆಯಾಗಿದ್ದರೂ ಅದನ್ನು ತೋರಿಸಿಕೊಳ್ಳುತ್ತಿರಲಿಲ್ಲ. ಆದರೆ ನಮ್ಮ ಸಂಘಟನೆಯನ್ನು ಬೆಳೆಸುವುದು ಅವರ ಉದ್ದೇಶವಾಗಿದ್ದರಿಂದ ಈ ಹೊಂದಾಣಿಕೆಗೆ ಅವಕಾಶವಿರಬೇಕು ಎಂಬುದು ಅವರ ಅಂಬೋಣ.

'ಆಚೀಚೆಯ ಕಥೆಗಳು' ಕಥಾಸಂಕಲನದ ಹಸ್ತಪ್ರತಿಯನ್ನು ನಾನು ಚಿತ್ತಾಲರಿಗೆ ಕಳಿಸಿದ್ದೆ. ಅದನ್ನು ಓದಿ, ನನಗೆ ಫೋನು ಮಾಡಿ, 'ಕಥಾಸಂಕಲನದ ಗುಣಮಟ್ಟದ ಅಸಮತೋಲನವನ್ನು ನಾನು ಗಮನಿಸಿದ್ದೇನೆ. ಹೊರನಾಡಿನಲ್ಲಿರುವ ನಿಮ್ಮ ಸಮಸ್ಯೆ ನನಗೂ ಅರ್ಥವಾಗುತ್ತದೆ. ಆದರೆ ಯಾವ ಕಾರಣಕ್ಕೂ ನೀವು ಗುಣಮಟ್ಟದಲ್ಲಿ ಹೊಂದಾಣಿಕೆ ಮಾಡಿಕೊಳ್ಳಬಾರದು' ಎಂದು ಹೇಳಿ, ನಿಮಗೆ ಬೇಕಿದ್ದರೆ ಒಂದು ಸಣ್ಣ ಬೆನ್ನುಡಿ ಬರೆದುಕೊಡುತ್ತೇನೆ ಎಂದು ಹೇಳಿ ಕಥಾಸಂಕಲನವನ್ನು ಯಾವುದೇ ರೀತಿಯಲ್ಲಿ ಹೊಗಳದೇ ತೆಗಳದೇ ಎಲ್ಲರಿಗೂ ಒಳ್ಳೆಯದಾಗಲಿ ಎಂಬರ್ಥ ಬರುವ ಒಂದು ಬೆನ್ನುಡಿ ಬರೆದುಕೊಟ್ಟರು.

ರಾಜಗೋಪಾಲರಿಗೆ ಬಹಳ ನಿರಾಸೆಯಾಗಿತ್ತು. ಆದರೆ ಚಿತ್ತಾಲರಿಗೂ ನಿರಾಸೆಯಾಗಿತ್ತು. ನಾನು ಮಧ್ಯವರ್ತಿ. ಚಿತ್ತಾಲರಿಗೆ ಅವರ ಸಮಯದ ಬಗ್ಗೆ ಬಹಳ ಕಾಳಜಿಯಿತ್ತು. ಫೋನು ಮಾಡಿ 'ನಾನು ಹದಿನೈದು ದಿನ ನಿಮ್ಮ ಪುಸ್ತಕವನ್ನು ಓದಿದೆ. ಬಹಳ ಉತ್ಸಾಹದಿಂದ ಮುನ್ನುಡಿ ಬರೆಯಲೇಬೇಕೆಂದು ಸಿದ್ಧನಾಗಿದ್ದೆ. ಆದರೆ ಬರೆಯಲಾಗಲಿಲ್ಲ ಎಂದು ನನಗೂ ವ್ಯಥೆಯಿದೆ' ಎಂದು ಅವರು ಪೇಚಾಡಿಕೊಂಡರೆ ಚಿತ್ತಾಲರನ್ನು ಇಂಥ ಪರಿಸ್ಥಿತಿಗೆ ತಂದಿದ್ದಕ್ಕೆ ರಾಜಗೋಪಾಲರಿಗೂ ವ್ಯಥೆಯಾಗಿತ್ತು. ಇಬ್ಬರ ಉದ್ದೇಶ ಒಳ್ಳೆಯದೇ ಆಗಿದ್ದರೂ ಒಂದೇ ಆಗಿರಲಿಲ್ಲ.

ನಂತರದ ದಿನಗಳಲ್ಲಿ ಸಂಪಾದಕ ಮಂಡಳಿ ಎಂಬ ಸಲಹಾ ಸಮಿತಿ ಸ್ಥಾಪಿತವಾಯಿತು. ಪ್ರತಿ ಪ್ರಕಟಣೆಗೂ ಸಂಪಾದಕರಿದ್ದರೂ ಪ್ರಕಟಣೆಗೆ ಬಂದ ಎಲ್ಲ ಕೃತಿಗಳನ್ನೂ ಸಲಹಾ ಸಮಿತಿಯ ಎಲ್ಲ ಸದಸ್ಯರೂ ಸೇರಿ ಓದಬೇಕಾಗಿತ್ತು. ಆಚೀಚೆಯ ಕಥೆಗಳಿಂದ ಕಲಿತ ಪಾಠವೇನೋ, ನಂತರದ ಪ್ರಕಟಣೆಗಳಲ್ಲಿ ಕೆಲವು ಲೇಖನಗಳನ್ನು ತಿರಸ್ಕರಿಸಿದಾಗ ಆ ಲೇಖಕರಿಂದ ಕೊಂಚ ಹೆಚ್ಚೇ ಎನಿಸುವ ಪ್ರತಿಭಟನೆ ಬಂದಿತು. ಕೆಲವರು ಸಮ್ಮೇಳನಕ್ಕೆ ಬರುವುದನ್ನು ನಿಲ್ಲಿಸಿದರು. ಆಗ, ರಾಜಗೋಪಾಲರಿಗೆ ಗುಣಮಟ್ಟ ಮತ್ತು ಲೇಖಕರ ಸಮಾಧಾನ ಎರಡನ್ನೂ ಸಂಭಾಳಿಸುವುದು ಹೇಗೆ ಎನ್ನುವುದೇ ಸಮಸ್ಯೆಯಾಗಿ ಕಾಡುತ್ತಿತ್ತು. ನಮ್ಮ ಎಷ್ಟೋ ಮಾತುಕತೆಗಳು ಈ ವಿಷಯದ ಬಗ್ಗೆಯೇ ನಡೆದಿತ್ತು. ರಾಜಗೋಪಾಲರಿಗೆ ನಮ್ಮ ಎಲ್ಲ ಪ್ರಕಟಣೆಗಳಲ್ಲೂ ಕನ್ನಡ ಸಾಹಿತ್ಯ ರಂಗದ ಒಂದಿಷ್ಟು ಜನ ಕಡ್ಡಾಯವಾಗಿ ಬರೆಯಲೇಬೇಕು ಎಂಬ ನಿರೀಕ್ಷೆಯಿತ್ತು. ಬರವಣಿಗೆ ಚೆನ್ನಾಗಿದೆಯೆಂದ ಕಾರಣಕ್ಕೆ ಎಲ್ಲರೂ ಎಲ್ಲವನ್ನೂ ಚೆನ್ನಾಗಿ ಬರೆಯಲಾಗುವುದಿಲ್ಲವಲ್ಲ. ನಾನು ಈ ವಿಷಯದ ಬಗ್ಗೆಯೂ ಬಹಳ ಬಾರಿ ವಾದ ಮಾಡಿದ್ದೆ. ಆದರೆ ಅವರು ಈ



ಒಂದು ವಿಷಯದಲ್ಲಿ ಮಾತ್ರ ಹೊಂದಾಣಿಕೆ ಮಾಡಿಕೊಳ್ಳಲು ಸಿದ್ಧರಿರಲಿಲ್ಲ. ಬರೆಯುವವರೇ ಬರೆಯದೇ ಇದ್ದರೆ ಬರೆಯದವರನ್ನು ಹೇಗೆ ಬಲವಂತ ಮಾಡಲಾಗುತ್ತದೆ ಎನ್ನುವುದು ಅವರ ವಾದ.

ಈ ನೆನಪುಗಳ ರಾಜಕೀಯ ನನ್ನನ್ನು ಚಕಿತಗೊಳಿಸುತ್ತದೆ. ನನ್ನ ಜೀವನದಲ್ಲಿ ನಾನು ಅತ್ಯಂತ ಗೌರವಿಸುವ ವ್ಯಕ್ತಿಗಳಲ್ಲಿ ರಾಜಗೋಪಾಲರು ಪ್ರಮುಖರು. ಆದರೂ ನನಗೂ ಅವರಿಗೂ ಇದ್ದ ಸಣ್ಣ ಭಿನ್ನಾಭಿಪ್ರಾಯವನ್ನು ನಾನು ಮೊದಲು ಬರೆಯುವುದಕ್ಕೆ ಏನು ಕಾರಣವಿರಬಹುದು? ನಾವು ಗೌರವಿಸುವವರಿಗೆ ನಮ್ಮಿಂದ ನೋವಾಗಿರಬಹುದು ಎಂಬ ಅರಿವು ನಮಗಾದಾಗ ಅದು ನಮ್ಮನ್ನು ಬಹಳ ಕಾಲ ಕಾಡುತ್ತದೇನೋ. ಹಾಗಾಗಿ ಈ ವಿಷಯಗಳೇ ಗಾಢವಾಗಿ ಕಾಡುತ್ತವೆ. ನನ್ನ ಮತ್ತು ರಾಜಗೋಪಾಲರ ನಡುವೆ ಬಹಳಷ್ಟು ಒಳ್ಳೆಯ ಅರ್ಥಪೂರ್ಣ ಮಾತುಕತೆಗಳಾಗಿವೆ. ನಾನು ಕನ್ನಡದ ಇತ್ತೀಚಿನ ಸಾಹಿತ್ಯವನ್ನು ಓದುತ್ತೇನೆ ಎಂದು ಅವರು ತಿಳಕೊಂಡಿದ್ದರು. ಹಾಗಾಗಿ ಆಗಾಗ್ಗೆ ಫೋನು ಮಾಡಿ ಗಂಟೆಗಟ್ಟಲೆ ಮಾತಾಡುತ್ತಿದ್ದರು. ನನಗೂ ಅವರು ಹೇಳುವ ಹಳೇ ಮೈಸೂರಿನ ಕಥೆಗಳನ್ನು ಕೇಳುವುದಕ್ಕೆ ಬಹಳ ಇಷ್ಟ. ಅವರಮ್ಮನ ಬಗ್ಗೆ, ಅವರಣ್ಣ ಎಚ್. ವೈ. ಶಾರದಾಪ್ರಸಾದರ ಬಗ್ಗೆ, ಬಿಎಂಶ್ರೀ ಅವರ ರಾಜಾಸೇವಾಸಕ್ತಿ, ಹಾಗಾಗಿ ಅವರಿಗೆ ಗಾಂಧಿ ಮೇಲಿದ್ದ ಮುಜುಗರ, ಮಾಸ್ತಿ ಸಾಹಿತ್ಯ, ಶಾರದಾವಿಲಾಸ ಕಾಲೇಜು, ಕ್ರಾಫರ್ಡ್ ಹಾಲಿನ ನಾಟಕಗಳು, ಆಕಾಶವಾಣಿಯಲ್ಲಿ ಅವರು ಓದಿದ ನಾಟಕ, ವುಡ್‌ಹೌಸ್, ನೇಟಿವ್ ಅಮೆರಿಕನ್ನರು ಎಲ್ಲ ವಿಷಯಗಳೂ ಬಂದುಹೋಗು-ತ್ತಿದ್ದವು.

ರಾಜಗೋಪಾಲರು ನಮ್ಮ ತಂದೆಯ ವಯಸ್ಸಿರಬಹುದೇನೋ. ಇಬ್ಬರೂ ಒಂದೇ ಹಿನ್ನೆಲೆಯಲ್ಲಿ ಬೆಳೆದಿದ್ದವರು. ಆದರೆ, ನಮ್ಮಪ್ಪನಿಗೆ ರಾಜಗೋಪಾಲರಷ್ಟು ಶಿಕ್ಷಣ ಮತ್ತು ಸಾಹಿತ್ಯದ ವ್ಯವಸ್ಥಿತ ಓದಿಲ್ಲದೇ ಇದ್ದ ಕಾರಣ ಎಷ್ಟೋ ಬಾರಿ ರಾಜಗೋಪಾಲರು ಹೇಳಿದ್ದ ವಿಷಯವನ್ನೇ ಹೇಳುತ್ತಿದ್ದರೂ ರಾಜಗೋಪಾಲರ ನಯ ವಿನಯ ಅಪ್ಪನಿಗಿರುತ್ತಿರಲಿಲ್ಲ. ನಮ್ಮ ಅಪ್ಪನ ಸೊಫೆಸ್ಟಿಕೇಟೆಡ್ ಆವೃತ್ತಿಯಾಗಿ ರಾಜಗೋಪಾಲರು ನನಗೆ ಎಂದೂ ಕಾಣುತ್ತಿದ್ದರು. ನಮ್ಮಪ್ಪನ ಜತೆ ಸಾಹಿತ್ಯ, ಸಂಸ್ಕೃತಿಗಳ ಬಗ್ಗೆ ಮಾತಾಡಲು ಅವಕಾಶವಿದ್ದರೂ ಮಗನೆಂಬ ಬಿಗುಮಾನದಿಂದ ಗಂಭೀರವಾದ ಚರ್ಚೆಗಳನ್ನು ಮಾಡಿರಲಿಲ್ಲವೋ ಗೊತ್ತಿಲ್ಲ. ಎಷ್ಟೋ ಬಾರಿ ಒಂದೇ ವಿಷಯದ ಬಗ್ಗೆ ಇಬ್ಬರ ಹತ್ತಿರ ಚರ್ಚಿಸಿದ ನೆನಪಿದೆ. ಉದಾಹರಣೆಗೆ ಬಿಎಂಶ್ರೀಯವರ ಬಗ್ಗೆ ಮಾತಾಡಬೇಕಾದರೆ ರಾಜಗೋಪಾಲರು 'ಬಿಎಂಶ್ರೀಯವರಿಗೆ ಮೈಸೂರು ಮಹಾರಾಜರ ಬಗ್ಗೆ ಬಹಳ ಗೌರವವಿತ್ತು. ಎಷ್ಟೆಂದರೆ ಅದೇ ಕಾರಣಕ್ಕಾಗಿ ಗಾಂಧಿಯವರನ್ನು ಕಲಾಸಲ್ ಹಮ್‌ಬಗ್ ಎಂದಿದ್ದರು, ಗುರು. ಹಿ ವೆಂಟ್ ಆನ್ ರೆಕಾರ್ಡ್' ಎಂದು ಹೇಳಿದರೆ ನಮ್ಮಪ್ಪ 'ಏ

ಅವನೊಬ್ಬ ಮಹಾರಾಜರ ಚೇಲ. ಗಾಂಧೀಜಿಗೆ ಈಡಿಯಟ್ ಅಂದವನು, ಮೂರ್ಖ' ಎಂದು ಹೇಳಿಬಿಡುತ್ತಿದ್ದರು. ಈ ಮಾತುಗಳ ಸತ್ಯಾಸತ್ಯತೆಯನ್ನು ಪರಾಂಬರಿಸುವುದು ಹೇಗೆ? ರಾಜಗೋಪಾಲರು ಹೇಳಿದರು ಎಂದು ನಮ್ಮ ತಂದೆಯವರ ಮಾತನ್ನೂ, ಅಪ್ಪ ಹೇಳಿದರು ಎಂದು ರಾಜಗೋಪಾಲರ ಮಾತನ್ನೂ ನಂಬುತ್ತಿದ್ದೆ. ಒಪ್ಪದ, ಒಪ್ಪಲಾರದ ಕಾರಣಗಳಿಂದ ಇಬ್ಬರ ಮಾತಿಗೂ ನನಗೆ ಸಹಮತವಿರುತ್ತಿತ್ತು. ಈಗ ಇಬ್ಬರೂ ಒಂದೇ ಹೆಚ್ಚೂ ಕಡಿಮೆ ಒಂದೇ ಸಮಯದಲ್ಲಿ ನನ್ನನ್ನು ಅಗಲಿದ್ದಾರೆ.

ರಾಜಗೋಪಾಲರಿಗೆ ಕೂಡ ಬೇರೆಯವರಿಂದ ಬರೆಸುವುದರ ಬಗ್ಗೆ ಬಹಳ ಆಸಕ್ತಿಯಿತ್ತು. ಎಷ್ಟೋ ಜನರ ಲೇಖನಗಳನ್ನು ತಿದ್ದಿ ತಿದ್ದಿ ಬರೆಸುತ್ತಿದ್ದರು. ಸ್ವತಃ ಬರವಣಿಗೆಯೂ ಅಷ್ಟೇ. ಬಹಳ ಕ್ಲಿನಿಕಲ್ ಆದ ಬರವಣಿಗೆ. ಹತ್ತು ಪುಟದ ಲೇಖನ ಬರೆಯುವುದಕ್ಕೆ ಎರಡು ತಿಂಗಳು ತೆಗೆದುಕೊಳ್ಳುತ್ತಿದ್ದರು. ವಾಕ್ಯರಚನೆ, ನಾಮಪದ, ಕ್ರಿಯಾಪದದ ಅನುಕ್ರಮಣಿಕೆ, ಲೇಖನದ ವಸ್ತು, ಪ್ರತಿ ಸಣ್ಣ ವಿಷಯಕ್ಕೂ ಮಾಡುತ್ತಿದ್ದ ಸಂಶೋಧನೆ ನನಗೆ ಎಷ್ಟೋ ಬಾರಿ ಬೆರಗು ತಂದಿದೆ. ಪ್ರತಿಯೊಂದು ಉಲ್ಲೇಖಕ್ಕೂ ಪುರಾವೆ ಇರಬೇಕು ಗುರುಪ್ರಸಾದ್, ಎಲ್ಲೋ ಹೇಳಿದರು, ಅವರು ಹೇಳಿದರು ಎನ್ನುವುದನ್ನು ಉಲ್ಲೇಖಿಸುವುದರಲ್ಲಿ ಅರ್ಥವಿಲ್ಲ ಎಂಬುದು ಅವರ ಬಲವಾದ ನಂಬಿಕೆ. ಹಾಗಾಗಿ ಲೇಖನಗಳಲ್ಲಿ ಯಾರಾದರೂ ಹಾಗೆ ಬರೆದಲ್ಲಿ ಅದಕ್ಕೆ ಪುರಾವೆ ಸೂಚಿಸಿ ಎಂದು ವಾಪಸ್ಸು ಕಳಿಸುತ್ತಿದ್ದರು. ಕಾರಂತರ ಬಗ್ಗೆ ಅವರು ಬರೆದ ಲೇಖನ ನಾನೋದಿದ ಕಾರಂತರ ವ್ಯಕ್ತಿಚಿತ್ರಗಳಲ್ಲಿಯೇ ಉತ್ತಮವಾದದ್ದು. ಆಪ್ತವಾಗಿದ್ದರೂ ನಿಷ್ಠುರವಾಗಿತ್ತು. ಕಾರಂತರನ್ನು ನೋಡದಿದ್ದವರಿಗೂ ಅವರ ವ್ಯಕ್ತಿತ್ವ ಕಣ್ಣಮುಂದೆ ಬರುವ ಹಾಗಿತ್ತು. ಅವರು ಅಮೆರಿಕನ್ ಇಂಡಿಯನ್ನರ ಬಗ್ಗೆ ಬರೆದ ಪುಸ್ತಕ 'ಸೃಷ್ಟಿ' ಒಂದು ಅಪರೂಪದ ಪುಸ್ತಕ.

ಮೊದಲೇ ಹೇಳಿದ ಹಾಗೆ ಅವರು ತಮ್ಮ ಬರವಣಿಗೆಯ ಬಗ್ಗೆ ತೋರಿದ ಕಾಳಜಿಯನ್ನು ಸಂಪಾದನೆಯಲ್ಲಿ ತೋರಿದ್ದರೆ ಕನ್ನಡ ಸಾಹಿತ್ಯರಂಗದ ಪ್ರಕಟಣೆಗಳು ಕನ್ನಡ ಸಾಹಿತ್ಯಕ್ಕೆ ಅಪರೂಪದ ಕೊಡುಗೆಗಳಾಗಬಹುದಿತ್ತು. ಅವರೇ ನಂಜುಂಡಸ್ವಾಮಿಯವರ ಸಹಸಂಪಾದಕತ್ವದಲ್ಲಿ ಸಂಪಾದಿಸಿದ 'ನಗೆಗನ್ನಡಂ ಗೆಲ್ಗೆ' ಕನ್ನಡದಲ್ಲಿ ಇದುವರೆಗೂ ಬಂದಿರದ ಹಾಸ್ಯ ಸಾಹಿತ್ಯದ ಬಗ್ಗೆ ಬರೆದ ಪ್ರಬುದ್ಧ ಗ್ರಂಥಗಳಲ್ಲೊಂದು. ಆದರೆ ಪರಿಪೂರ್ಣತೆಯ ಬಗ್ಗೆ, ಸಮಗ್ರತೆಯ ಬಗ್ಗೆ ಅವರಿಗಿದ್ದ ಉತ್ಸಾಹ ಸೂಕ್ಷ್ಮ ವಿವರಗಳನ್ನು ಪರಾಂಬರಿಸಲು ಅಡ್ಡಿ ಬರುತ್ತಿತ್ತು. ಡುಂಡಿರಾಜರ ಬಗ್ಗೆ ವಿವರವಾಗಿ ಅಮೆರಿಕನ್ನಡಿಗರ ಬಳಿ ಬರೆಸಬಹುದು. ಆದರೆ, ಅ.ರಾ.ಸೇ., ಪಾ. ವೆಂ. ಆಚಾರ್ಯ ಮತ್ತು ಕೇಫರ ಬಗ್ಗೆ ಬರೆಯಲು ಅವರನ್ನು ಸಮಗ್ರವಾಗಿ ಓದಿಕೊಂಡಿರುವವರೇ ಕಮ್ಮಿ. ಮತ್ತೆ ಅವರ ಬಗ್ಗೆ ಆಪ್ತವಾಗಿ ಬರೆಯಬಲ್ಲವರು, ಅಮೆರಿಕಾದಲ್ಲಿ ಇನ್ನೂ ಕಡಿಮೆ. ಆದರೂ ಗ್ರಂಥದ



ಸಮಗ್ರತೆಯ ಸಲುವಾಗಿ ಯಾರನ್ನೂ ಬಿಡಲಾಗದಿರುವುದರಿಂದ ಕೆಲವೊಂದು ಸಮಗ್ರ ಗ್ರಂಥಗಳು ಲೇಖಕರ ಒಳಗೊಳ್ಳುವಿಕೆಯಲ್ಲಿ ಮಾತ್ರ ಸಮಗ್ರತೆಯನ್ನು ಸಾಧಿಸಲು ಸಫಲವಾಗುತ್ತಿದ್ದವು. ಈ ವಿಷಯದ ಬಗ್ಗೆಯೂ ನನಗೂ ಅವರಿಗೂ ಬಹಳ ಚರ್ಚೆಯಾಗುತ್ತಿದ್ದವು. ಅವರೇ ಸಂಪಾದಿಸಿದ ಅವರ ತಾಯಿಯ ಬಗೆಗಿನ ಪುಸ್ತಕ 'ಹಲವು ಮಕ್ಕಳ ತಾಯಿ' ಕೂಡ ಇದೇ ಕಾರಣದಿಂದ ಇನ್ನೂ ಉತ್ತಮ ಗ್ರಂಥವಾಗುವ ಅವಕಾಶವನ್ನು ಕಳೆದುಕೊಂಡಿತು ಎಂದು ನನ್ನ ಅಭಿಪ್ರಾಯ. ಮೊದಲ ಎಪ್ಪತ್ತೈದು ಪುಟಗಳಷ್ಟಿರುವ ರಾಜಗೋಪಾಲರ ಲೇಖನ ಅವರಮ್ಮನ ವ್ಯಕ್ತಿತ್ವವನ್ನು ಆಪ್ತವಾಗಿ ಕಟ್ಟಿಕೊಡುತ್ತದಾದರೂ, ಅವರ ಕುಟುಂಬದ ಎಲ್ಲ ಸದಸ್ಯರ ಬಳಿ ಅವರಮ್ಮನ ಬಗ್ಗೆ ಒಂದು ಲೇಖನ ಬರೆಸುವ ಉತ್ಸಾಹದಲ್ಲಿ ಪುಸ್ತಕದ ಗುಣಮಟ್ಟದಲ್ಲಿನ ಅಸಮತೋಲನ ಎದ್ದು ಕಾಣುತ್ತದೆ.

ರಾಜಗೋಪಾಲರ ಈ ಸಾತ್ವಿಕ ಹೊಂದಾಣಿಕೆ, ಎಲ್ಲವನ್ನೂ ಬಫರ್ ಮಾಡಬೇಕೆನ್ನುವ ಸಂಯಮ–ಈ ಗುಣಗಳನ್ನು ಕುರಿತ ನನ್ನ ನಂಬಿಕೆಗಳು, ಸಮ್ಮತಿ, ನಿರಾಕರಣೆಗಳ ನೆಲೆಯಲ್ಲಿಯೇ ನಮ್ಮಿಬ್ಬರ ಸ್ನೇಹ, ಸಂಬಂಧ ಆರಂಭವಾಗಿದ್ದು ಅಷ್ಟೇ ಅಲ್ಲ, ನಂತರದ ಸುಮಾರು ಹದಿನೆಂಟು ವರ್ಷದ ಸ್ನೇಹದ ಬೆಳವಣಿಗೆಯ ಹಿನ್ನೆಲೆಗೂ ಮುಖ್ಯ. ಇವೆಲ್ಲದಕ್ಕೆ ಮುಖ್ಯ ಕಾರಣ ಅವರಿಗೆ ಅಮೆರಿಕಾದಲ್ಲಿ ನೆಲೆಸಿರುವ ಕನ್ನಡಿಗರಿಂದ ಮಾತ್ರ ಕನ್ನಡ ಸಾಹಿತ್ಯ ರಂಗದ ಪುಸ್ತಕಗಳಲ್ಲಿ ಲೇಖನಗಳನ್ನು ಬರೆಸಬೇಕೆಂಬ ಹಟ. ನಾನು ಅವರ ಬಳಿ ಬಹಳ ಬಾರಿ ವಾದಿಸಿದ್ದೆ. ಕನ್ನಡ ಸಾಹಿತ್ಯ ರಂಗದ ವೇದಿಕೆಯನ್ನು ಮುಕ್ತವಾಗಿಡೋಣ. ಅಮೆರಿಕಾದಲ್ಲಿ ನೆಲಸಿದ ಕನ್ನಡಿಗರಿಗೆ ಮಾತ್ರ ಸೀಮಿತಗೊಳಿಸುವುದು ಬೇಡ. ನಾವು ಯಾವ ಪ್ರಕಾರದ ಪುಸ್ತಕವನ್ನು ಹೊರತರುತ್ತಿದ್ದೇವೋ ಅದರ ಬಗ್ಗೆ ಯಾರು ಹೆಚ್ಚು ತಿಳಕೊಂಡಿದ್ದಾರೋ, ವಿದ್ವಾಂಸರಿದ್ದಾರೋ, ಕನ್ನಡದಲ್ಲಿ ಬರೆಯಬಲ್ಲರೋ ಎಲ್ಲರಿಂದ ಆಹ್ವಾನಿತ ಲೇಖನಗಳನ್ನು ಪ್ರಕಟಿಸೋಣ ಎಂದು ನನ್ನವಾದ. ಇತ್ತೀಚೆಗೆ ಕಸಾರಂ ಗ್ರಂಥಗಳಲ್ಲಿ ಆಹ್ವಾನಿತ ಲೇಖನಗಳಿರುತ್ತಾವಾದರೂ ಸಿಂಹಪಾಲು ಅಮೆರಿಕದಲ್ಲಿ ನೆಲಸಿರುವ ಲೇಖಕರದ್ದೇ. ಮೈ. ಶ್ರೀ. ನಟರಾಜರು, ನಳಿನಿ ಮಯ್ಯ ಮತ್ತು ತ್ರಿವೇಣಿ ಶ್ರೀನಿವಾಸರಾವ್ ಅವರ ಜತೆಗೂಡಿ ನ್ಯೂಜರ್ಸಿಯಲ್ಲಿ ನಡೆದ ಅಕ್ಕ ಸಮ್ಮೇಳನಕ್ಕೆಂದು ಸಂಪಾದಿಸಿದ್ದ ಕಥಾ ಸಂಕಲನ 'ದೀಪ ತೋರಿದೆಡೆಗೆ' ಒಂದು ಉತ್ತಮ ಪ್ರಯತ್ನ. ಜಾಗತಿಕ ಮಟ್ಟದ ಮುಕ್ತ ಕಥಾ ಸ್ಪರ್ಧೆಯೊಂದನ್ನು ನಡೆಸಿ ಅದರಲ್ಲಿ ಆಯ್ಕೆಯಾದ ಕಥೆಗಳ ಸಂಕಲನವನ್ನು ಪ್ರಕಟಮಾಡಿದ್ದರು. ಕಣಾದ ರಾಘವ, ನವೀನ್ ಗಂಗೋತ್ರಿ ಇತರ ಯುವ ಕಥೆಗಾರರ ಆರಂಭಿಕ ಕಥೆಗಳ ಪ್ರಾತಿನಿಧಿಕ ಸಂಕಲನವಾಗಿ ಈ ಪುಸ್ತಕ ಗಮನಾರ್ಹವಾಗಿತ್ತು. ಈ ಸ್ಪರ್ಧೆಯನ್ನು ಅಕ್ಕ ಸಂಸ್ಥೆ ಪ್ರಾಯೋಜಿಸಿದ್ದರೂ ಕಸಾರಂಗೆ ಇಂಥ ಒಂದು ಸ್ಪರ್ಧೆಯನ್ನು ಪ್ರಾಯೋಜಿಸುವುದು ಕಷ್ಟವೇನಲ್ಲ. ಆದರೆ, ಇಂಥ

ಪ್ರಯೋಗಗಳಿಗೆ ಕಸಾರಂ ಇನ್ನೂ ತನ್ನನ್ನು ತೆರಕೊಂಡಿಲ್ಲ. ಇದಕ್ಕೆ ಮುಖ್ಯ ಕಾರಣ ರಾಜಗೋಪಾಲರಿಗಿದ್ದ ಅಮೆರಿಕದಲ್ಲಿಯೇ ನೆಲಸಿರುವವರ ಸಾಹಿತ್ಯ ಸೃಷ್ಟಿಯ ಬಗ್ಗೆ ಇದ್ದ ಅತಿವಿಶ್ವಾಸ. ಇದು ಮರದಂತೆ ಬೆಳೆದು ಚಾಚಿರುವ ನೆರಳು ಮಾಸುವುದು ಸುಲಭವಲ್ಲ.

ಇದು ರಾಜಗೋಪಾಲರ ನೆನಪಿನ ಗ್ರಂಥ. ನನ್ನ ಜೀವನದಲ್ಲಿ ನಾನು ಅತ್ಯಂತ ಗೌರವ ಕೊಡುವ ವ್ಯಕ್ತಿಯೊಬ್ಬರನ್ನು ಸ್ಮರಿಸುವಾಗ ಈ ಮಾತು ಬೇಕೇ ಎಂದು ಕನ್ನಡ ಸಾಹಿತ್ಯ ರಂಗದ ಜತೆ ಒಡನಾಟ ಇಟ್ಟುಕೊಂಡಿರುವವರಲ್ಲಿ ಕೆಲವರಿಗಾದರೂ ಅನ್ನಿಸಬಹುದು. ಆದರೆ, ಅವರು ಕಸಾರಂ ಅನ್ನು ಕಟ್ಟಿದಾಗ ಅವರಿಗಿದ್ದ ಉದ್ದೇಶ ಅಮೆರಿಕದಲ್ಲಿರುವ ಕನ್ನಡಿಗರಲ್ಲಿ ಕನ್ನಡ ಸಾಹಿತ್ಯಾಸಕ್ತಿಯನ್ನು ಹುಟ್ಟಿಸುವುದು, ಬೆಳೆಸುವುದು. ಅದು ಸಾಧುವೇ. ಕನ್ನಡ ಸಾಹಿತ್ಯ ರಂಗ ಹುಟ್ಟಿಯಾಯ್ತು, ಬೆಳೆದಾಯಿತು–ಮುಂದೆತ್ತ ಹೋಗಬೇಕಾಗಿದೆ ಎಂಬುದನ್ನು ಅವಲೋಕನ ಮಾಡಿಕೊಂಡರೆ ರಾಜಗೋಪಾಲರಷ್ಟೇ ಕಸಾರಂಗೆ ದುಡಿದ ಎಲ್ಲರ ಶ್ರಮವೂ ಸಾರ್ಥಕವಾದೀತು.

ಕಡೆಗಾಲದಲ್ಲಿ ಅವರಿಗೆ ಆರೋಗ್ಯ ಕೈಕೊಟ್ಟಿತ್ತು. ಕೆಲವೊಮ್ಮೆ ಅವರ ಔಷಧಿಗಳ ಅಡ್ಡಪರಿಣಾಮದಿಂದಲೋ ಏನೋ ಬಹಳ ಸುಸ್ತಾಗಿರುತ್ತಿದ್ದರು. ಇಂಥ ಸಂದರ್ಭದಲ್ಲಿಯೂ ನಾನೇನಾದರೂ ಫೋನು ಮಾಡಿದಲ್ಲಿ ನನ್ನ ಡಾಕ್ಟರಿಕೆಯ ಅನುಕೂಲವನ್ನು ಒಮ್ಮೆಯೂ ಪಡಕೊಂಡಿರಲಿಲ್ಲ. ಅಷ್ಟೇ ಅಲ್ಲ, ನನ್ನ ಫೋನು ತೆಗೆದುಕೊಂಡ ತಕ್ಷಣ ಅತ್ಯುತ್ಸಾಹದಿಂದ ಮಾತಾಡುತ್ತಿದ್ದರು. ಮಾತಾಡುತ್ತಿದ್ದೆಲ್ಲಾ ಸಾಹಿತ್ಯ, ನಾಟಕ ಮತ್ತು ಕನ್ನಡ ಸಾಹಿತ್ಯ ರಂಗದ ಭವಿಷ್ಯದ ಬಗ್ಗೆಯೇ. ನಾನೇ 'ಆರೋಗ್ಯ ಹೇಗಿದೆ?' ಎಂದು ಕೇಳಿದಲ್ಲಿ ಆಗ 'ಅಯ್ಯೋ, ನೀವು ಡಾಕ್ಟರು, ನಿಮ್ಮ ಹತ್ತಿರ ಏನು ಮುಚ್ಚು ಮರೆ?' ಎಂದು ಕೆಲಕ್ಷಣಗಳಾದರೂ ತಮ್ಮ ಕಾಯಿಲೆಯ ಬಗ್ಗೆ ಮಾತಾಡಿ 'ಅಯಾಮ್ ಆಲ್ರೈಟ್. ಆದರೆ ಹು ನೋಸ್ ವಾಟ್ ಈಸ್ ಇನ್ ಸ್ಟೋರ್ ಫರ್ ಮಿ' ಎಂದು ನಗುತ್ತಿದ್ದರು. ಅವರು ಭಾಗವಹಿಸಿದ ಕಟ್ಟಕಡೆಯ ಬಾಸ್ಟನ್ ಸಮ್ಮೇಳನದಲ್ಲಿ ಅವರೇ ಪ್ಯಾನೆಲಿಸ್ಟ್ ಆಗಿದ್ದ ಒಂದು ಕಾರ್ಯಕ್ರಮಕ್ಕೆ ವೇದಿಕೆಯ ಮೇಲೆ ಹೋಗಲೆಂದು ಮೆಟ್ಟಿಲು ಹತ್ತುತ್ತಿದ್ದಾಗ ಜಾರಿಬಿದ್ದು ತಲೆಗೆ ಏಟು ಮಾಡಿಕೊಂಡಿದ್ದಾಗ ಅವರಿಗೆ ನಿಜವಾಗಿಯೂ ಬಹಳ ಹೆದರಿಕೆಯಾಗಿತ್ತು. ನಾನು ಹೋಗಿ ಉಪಚರಿಸಿದಾಗ 'ಗುರು, ನನ್ನ ಜತೆಗೇ ಕೂತಿರಿ' ಎಂದು ಕೈ ಹಿಡಕೊಂಡಿದ್ದರು. ಅದೇ ನನ್ನ ಮತ್ತು ಅವರ ಕಡೇ ಭೇಟಿ.

■

# ಎಚ್. ವೈ. ರಾಜಗೋಪಾಲ್ ಅವರ ಮೂರು ಪುಸ್ತಕಗಳು

**–ಮೀರಾ ಪಿ. ಆರ್.**

ಎಚ್.ವೈ.ಆರ್. ಎಂದರೆ ನನಗೆ ಒಂದು ವಿಚಾರಪೂರ್ಣ, ಚಿಂತಕ, ಚಿಕಿತ್ಸಕ ಮತ್ತು ಅಕ್ಕರೆ ತುಂಬಿದ ಮನಸ್ಸು. ಹಾಗೆಯೇ, ಕನ್ನಡ ಲೋಕದಿಂದ ಬಹಳ ಕಾಲದ ಹಿಂದೆಯೇ ದೂರವಾಗಿ ಅಮೆರಿಕಾದಲ್ಲಿ ನೆಲೆಸಬೇಕಾಗಿ ಬಂದರೂ ತಾವಿದ್ದಲ್ಲೇ ಒಂದು ಸಮೃದ್ಧ ಕನ್ನಡ ಸಾಹಿತ್ಯ ಲೋಕವನ್ನು ಕಟ್ಟಿ ಬೆಳೆಸಿದ, ಇದರಲ್ಲಿ ಆಸಕ್ತಿ ತೋರಿದವರನ್ನೆಲ್ಲ ಈ ಲೋಕದೊಳಗೆ ಪ್ರೀತಿಯಿಂದ ಬರಮಾಡಿಕೊಂಡು ಬೆಳೆಯಗೊಟ್ಟ ಸಾಹಸಿ ವ್ಯಕ್ತಿತ್ವ. ಎಚ್.ವೈ.ಆರ್. ಎಂದರೆ ನನಗೆ 'ಪ್ರಸ್ತಾಪ', 'ಕನ್ನಡ ಸಾಹಿತ್ಯ ರಂಗ'. ಕಂಡ ಒಡನೆಯೇ 'ಏನಮ್ಮಾ?' ಎಂದು ನುಡಿದು ನನ್ನ ತಬ್ಬಿ ಮುತ್ತಿಟ್ಟು 'ಹೇಗಿದ್ದೀ? ಮನೆಯಲ್ಲಿ ಎಲ್ಲರೂ ಹೇಗಿದಾರೆ?' ಎಂದು ಅಕ್ಕರೆ ತೋರುವ ಪ್ರೀತಿಯ ಹಿರಿಯ ಬಂಧು. 'ಓದಬೇಕು, ಬರೆಯಬೇಕು, ಅನಿಸಿದ್ದನ್ನು ಹಂಚಿಕೊಳ್ಳಬೇಕು' ಎಂದು ಎಲ್ಲರಲ್ಲಿ ಕಾಳಜಿ ತೋರುತ್ತಲೇ 'ಕನ್ನಡ ಸಾಹಿತ್ಯವನ್ನು ನಾನು ಶಾಸ್ತ್ರೀಯವಾಗಿ ಅಭ್ಯಾಸ ಮಾಡಿದವನಲ್ಲ' ಎಂದು ನಮ್ರವಾಗಿ ನುಡಿಯುತ್ತಾ ಎಷ್ಟೆಲ್ಲಾ ಬರೆಯುವ ಸಾಧ್ಯತೆಯಲ್ಲೂ ಅತೀ ಕಡಿಮೆಯೇ ಎನ್ನುವಷ್ಟು ಬರೆದಿರುವ ಕನ್ನಡದ ಒಬ್ಬ ವಿಚಾರವಂತ ಲೇಖಕ. ಮಾತಿನಂತೆಯೇ

ಇವರ ಬರಹಗಳಲ್ಲೂ ನನಗೆ ಕಾಣಿಸುವುದು 'ಒಳಿತು' ಎನ್ನುವ ವಿಷಯದಲ್ಲಿ ಇವರಿಟ್ಟ ನಂಬಿಕೆ. ಅಂಥದ್ದೊಂದು ದೊಡ್ಡ ನಂಬಿಕೆಯನ್ನು ಮನದಲ್ಲಿಟ್ಟುಕೊಂಡು ಲೋಕವನ್ನು ನೋಡುತ್ತಾ ತಾನು ಕಂಡ ಅಪರೂಪದ ಹೊಳಹುಗಳನ್ನು ಹಂಚಿಕೊಳ್ಳುವ ಆಪ್ತ, ನಾನು ಅಂಕಲ್ ಎಂದು ಪ್ರೀತಿಯಿಂದ ಕರೆಯುವ ಎಚ್. ವೈ ರಾಜಗೋಪಾಲ್ ಅವರು.

ಹೀಗೆಲ್ಲಾ ನಾನು ಪತ್ರಿಕೆಯೊಂದಕ್ಕಾಗಿ ಬರೆದಿದ್ದು, ರಾಜಗೋಪಾಲ್ ಅವರಿಗೆ ೮೦ ತುಂಬುತ್ತಿದ್ದ ಸಂದರ್ಭದಲ್ಲಿ. ಅವರಿಲ್ಲದ ಈ ಹೊತ್ತಿನಲ್ಲಿ, ಅವರೂ ಅವರಂತಹ ಇನ್ನೂ ಹಲವು ಹಿರಿಯರು ಕಟ್ಟಿ ಬೆಳೆಸಿದ ಕನ್ನಡ ಸಾಹಿತ್ಯಾಸಕ್ತರ ಲೋಕ ಅಮೆರಿಕಾದಲ್ಲಿ ನಿರಂತರ ಚಟುವಟಿಕೆಯಲ್ಲಿ ಅರಳಿಕೊಳ್ಳುತ್ತಿದೆ. ಅದರದ್ದೇ ಒಂದು ಭಾಗವಾಗಿ ನಾನೂ ನನ್ನ ಕನ್ನಡದ ಮನೋಲೋಕವನ್ನು ಭಾವಲೋಕವನ್ನು ವಿಸ್ತರಿಸಿಕೊಳ್ಳುವ ಪ್ರಯತ್ನದಲ್ಲಿದ್ದೇನೆ. ರಾಜಗೋಪಾಲ್ ಅವರ ಕೆಲವು ಪುಸ್ತಕಗಳನ್ನು ನಾನು ಬೇರೆ ಬೇರೆ ಸಂದರ್ಭಗಳಲ್ಲಿ ಪರಿಚಯಿಸುವ ಅವಕಾಶವು ನನಗೆ ಒದಗಿ ಬಂದಿತ್ತು. ತಮ್ಮ ಪುಸ್ತಕವನ್ನು ನನಗೆ ಕಳಿಸಿ, ಅದರ ಕುರಿತು ನನಗನ್ನಿಸಿದ್ದನ್ನು ತಮ್ಮ ಬಳಿ ಹಂಚಿಕೊಳ್ಳಬೇಕೆಂದು ರಾಜಗೋಪಾಲ್ ಅವರೇ ಕೇಳಿದ್ದು ನನ್ನ ಸಂತೋಷಗಳಲ್ಲೊಂದು. ಅವರ ಮೂರು ಪುಸ್ತಕಗಳನ್ನು ಕುರಿತಂತೆ ನಾನು ಬೇರೆ ಬೇರೆ ಸಂದರ್ಭಗಳಲ್ಲಿ ಬರೆದ ಲೇಖನಗಳನ್ನು ಅವರಿಲ್ಲದ ಈ ಹೊತ್ತಿನಲ್ಲಿ ಇಲ್ಲಿ, ಹೀಗೆ ಒಟ್ಟಾಗಿಸಿದ್ದೇನೆ.

## ಪುಸ್ತಕ: ಗಾಂಧಿಯುಗಕ್ಕೆ ಕನ್ನಡಿ
(ವಿಚಾರ–ವಿಮರ್ಶೆ)

೬೦ರ ದಶಕದಲ್ಲಿಯೇ ಅಮೆರಿಕಾಗೆ ಬಂದು ನೆಲೆಸಿದ ಎಚ್. ವೈ. ರಾಜಗೋಪಾಲ್ ಅವರು ಈ ಪುಸ್ತಕದ 'ಅರಿಕೆ'ಯಲ್ಲಿ ಹೇಳಿಕೊಂಡಿರುವಂತೆ, ಕನ್ನಡದ ಎಷ್ಟೋ ಮಹತ್ವದ ಆಗುಹೋಗುಗಳಿಗೆ ಹೊರಗಾಗೇ ಉಳಿಯಬೇಕಾಗಿ ಬಂದವರು ಮತ್ತು ಈ ಕುರಿತಾಗಿ ಒಂದು ಕೊರಗನ್ನು ಉಳಿಸಿಕೊಂಡವರು. ಆದರೆ ತಾವು ಇರುವಲ್ಲಿಯೇ ಅವರು ಕಟ್ಟಿಕೊಂಡಿರುವ ಮತ್ತು ಉಳಿದವರಿಗೂ ಕಟ್ಟಿಕೊಟ್ಟಿರುವ ಕನ್ನಡ ಸಾಹಿತ್ಯ ಲೋಕ ಮತ್ತು ಅದರ ಚಟುವಟಿಕೆಗಳು ಮಾತ್ರ ಬೆರಗುಗೊಳಿಸುವಂಥದ್ದು. ಇವರು ಕನ್ನಡ ಸಾಹಿತ್ಯ ಚಟುವಟಿಕೆಗಳಿಗೆ ಮುಡಿಪಾದ ಅಮೆರಿಕಾದ ಏಕೈಕ ರಾಷ್ಟ್ರೀಯ ಸಂಸ್ಥೆ ಕನ್ನಡ ಸಾಹಿತ್ಯ ರಂಗದ ಸ್ಥಾಪಕ ಸದಸ್ಯರು, ಅದರ ಅಧ್ಯಕ್ಷರಾಗಿದ್ದು ಈಗ ಅದರ ಆಡಳಿತ ಮಂಡಳಿಯ ಅಧ್ಯಕ್ಷರಾಗಿರುವವರು. ಕನ್ನಡ ಸಾಹಿತ್ಯ ಪರಂಪರೆಯ ಕುರಿತು ಮತ್ತು ಅದು ನಮ್ಮ ಬದುಕಿಗೆ ಕಟ್ಟಿಕೊಡುವ ಅಭಿರುಚಿ, ಮೌಲ್ಯಗಳ ಕುರಿತು ಅಪಾರ ಅಭಿಮಾನ, ಗೌರವವಿರುವ ಎಚ್.ವೈ.ಆರ್. ಅವರಿಗೆ ಅದನ್ನು ಅಮೆರಿಕಾದಲ್ಲಿರುವ ಕನ್ನಡ



ಸಾಹಿತ್ಯಾಸಕ್ತರೆಲ್ಲರೊಡನೆ ಹಂಚಿಕೊಳ್ಳುವ, ಬೆಳೆಸುವ ಅತೀವ ಕಾಳಜಿ. ಈ ಕಾಳಜಿಯಲ್ಲಿಯೇ ಹೊರಬಂದಿರುವ ಅಪರೂಪದ ಪುಸ್ತಕವಿದು. ಎಚ್. ಎಸ್. ವೆಂಕಟೇಶ ಮೂರ್ತಿಯವರು ಪುಸ್ತಕದ ಮುನ್ನುಡಿಯಲ್ಲಿ ಹೇಳುವಂತೆ ಎಚ್.ವೈ.ಆರ್. ಅವರದ್ದು ಸಮೃದ್ಧ ಸಾಹಿತ್ಯ ಸಂಪರ್ಕದಿಂದ ಸಂಪನ್ನವಾದ ಮನಸ್ಸು. ಇಂತಹ ಸಾಹಿತ್ಯಾಸಕ್ತ ಮನಸ್ಸೊಂದು ಗಮನಿಸಿದ, ಚಿಂತಿಸಿದ ವಿಚಾರಪೂರ್ಣ ಬರಹಗಳ ಸಂಗ್ರಹ ಈ ಪುಸ್ತಕ. ಕನ್ನಡ ಆಧುನಿಕ ಸಾಹಿತ್ಯವನ್ನು ನಿರ್ಮಿಸಿದ ಹಲವು ಹಿರಿಯ ಲೇಖಕರ ಕೃತಿಗಳು, ವ್ಯಕ್ತಿತ್ವ, ಕೊಡುಗೆ, ಮನೋಲೋಕ ಇವೆಲ್ಲದರ ಕುರಿತಾದ ಅಪರೂಪದ ಸ್ವಾರಸ್ಯಕರವಾದ ಲೇಖನಗಳು ಈ ಪುಸ್ತಕದಲ್ಲಿವೆ. ಕನ್ನಡ ಸಾಹಿತ್ಯದ ಇತ್ತೀಚಿನ ಕೆಲವು ಮಹತ್ವದ ಕೃತಿಗಳ ಸಮೀಕ್ಷೆಯೂ ಇದೆ. 'ಕನ್ನಡ ಸಾಹಿತ್ಯವನ್ನು ನಾನು ಶಾಸ್ತ್ರೀಯವಾಗಿ ಅಭ್ಯಾಸ ಮಾಡಿದವನಲ್ಲ' ಎಂದು ಲೇಖಕರು ನಮ್ರವಾಗಿ ಹೇಳಿಕೊಂಡಿದ್ದರೂ ತಮ್ಮ ಅಪಾರ ಅಧ್ಯಯನ ಮತ್ತು ಆಳವಾದ ಗ್ರಹಿಕೆಯಿಂದಾಗಿ ಎಚ್.ವೈ.ಆರ್. ಅವರು ಗುರುತಿಸಿರುವ ಕನ್ನಡ ಸಾಹಿತ್ಯ ಲೋಕದ ಅನೇಕ ಅಪರೂಪದ ಹೊಳಹುಗಳು ಈ ಪುಸ್ತಕದ ತುಂಬಾ ಅಲ್ಲಲ್ಲಿ ಮಿನುಗುತ್ತಾ ಓದುಗರನ್ನು ರೋಮಾಂಚನಗೊಳಿಸುತ್ತವೆ.

## ಪುಸ್ತಕ: ಸೃಷ್ಟಿ – ನಾಲ್ಕು ಜಗತ್ತುಗಳು

(ಅಮೆರಿಕನ್ ಮೂಲನಿವಾಸಿಗಳಾದ ಅಮೆರಿಕನ್ ಇಂಡಿಯನ್ನರ ಪುರಾಣ ಮತ್ತು ಜಾನಪದ ಕತೆಗಳು)

೨೦೧೪ರಲ್ಲಿ ಪ್ರಕಟಗೊಂಡ ಈ ಪುಸ್ತಕದೊಳಗಿನ ಸಂಗ್ರಹಿತ ಕತೆಗಳನ್ನು ರಾಜಗೋಪಾಲ್ ಅವರು ಪುಸ್ತಕ ಪ್ರಕಟಣೆಯ ವರ್ಷಕ್ಕೂ ಬಹಳ ಕಾಲದ ಹಿಂದೆಯೇ ಸಂಗ್ರಹಿಸಿದ್ದರು. ಅಮೆರಿಕನ್ ಇಂಡಿಯನ್ನರ ಪುರಾಣ ಮತ್ತು ಜಾನಪದ ಕತೆಗಳ ಬಹುರೂಪಿ ಪ್ರಸ್ತುತಿಗಳು ಇದ್ದ ಕಾರಣ, ಕಡೆಗೆ ಹೋಪಿ ಬಣದ ಮಾತುಗಳ ಆಧಾರದ ಮೇಲೆ ರಚಿತವಾದ ಪುಸ್ತಕವೊಂದರಿಂದ ಆಯ್ದ ೮ ಕತೆಗಳನ್ನು ಕನ್ನಡದಲ್ಲಿ ಅನುವಾದಿಸಿದರು. ಮೂಲನಿವಾಸಿಗಳನ್ನು ಶೋಷಿಸಿದ ಮತ್ತು ನಂತರದಲ್ಲಿ ಆದ ಅನ್ಯಾಯವನ್ನು ಗುರುತಿಸಿ ಅದನ್ನು ಸರಿಪಡಿಸಲು ಯತ್ನಿಸಿದ ಬಿಳಿಯರ ಮಾತುಗಳಲ್ಲೇ ಮೂಲನಿವಾಸಿಗಳ ಕತೆಗಳನ್ನು ಕೇಳುವುದಕ್ಕಿಂತ, ಸ್ವತಃ ಮೂಲನಿವಾಸಿ ಬಣವೊಂದರ ಬಾಯಿಂದಲೇ, ಆದಷ್ಟೂ ಅವರು ಹೇಳಿರುವಂತೆಯೇ ಈ ಕತೆಗಳನ್ನು ಓದುವುದೇ ಒಂದು ವಿಶೇಷ ಅನುಭವ. ಹೀಗಾಗಿ, ಪೂರ್ವಾಗ್ರಹ ಪೀಡಿತವಲ್ಲದ, ಅದು ಇರುವಂತೆಯೇ ದಕ್ಕುವ ಒಂದು ನೋಟ ಈ ಕತೆಗಳ ಮೂಲಕ ಕನ್ನಡದ ಓದುಗರಿಗೂ ಈ ಪುಸ್ತಕದಿಂದ ಸಿಗುವ ಸಾಧ್ಯತೆ ಇದೆ.

ಇಲ್ಲಿರುವ ಈ ಕತೆಗಳನ್ನು ಓದಿದ ನಂತರ ಈ ಮೂಲನಿವಾಸಿ ಜನಗಳ

ಕಲ್ಪನೆಯ ಮತ್ತು ಅರಿವಿನ ವಿಸ್ತಾರದ ಸಣ್ಣದೊಂದು ಪರಿಚಯವಾಗಿ ಮನಸ್ಸು ತುಂಬಿ ಬರುತ್ತದೆ. ಯುರೇಶಿಯಾದಿಂದ ಸುಮಾರು ಹತ್ತು ಸಾವಿರ ವರ್ಷಗಳು ಮರೆಯಾಗಿದ್ದು, ತಾವಿದ್ದಲೇ ಅವರು ಕಟ್ಟಿಕೊಂಡಿದ್ದ ಸಾಕಷ್ಟು ಸೌಹಾರ್ದದಿಂದ ಕೂಡಿದ್ದ ಜನಜೀವನ, ಪ್ರಕೃತಿ–ಪರಿಸರದೊಂದಿಗಿನ ಅವರ ಸಾಮರಸ್ಯದ ಬದುಕು, ಭೌತಿಕ–ಅಭೌತಿಕ ಜಗತ್ತಿನ ಕುರಿತಂತೆ ಅವರಿಗಿದ್ದ ಕುತೂಹಲ, ಅರಿವು, ನಂಬಿಕೆ, ಕಲ್ಪನೆಗಳು ಇವೆಲ್ಲವುಗಳ ಜೊತೆಗೆ ಇಡೀ ಜೀವಜಗತ್ತಿನ ಕುರಿತಂತೆ ಈ ಜನಗಳಿಗಿದ್ದ ಅರಿವು ಮತ್ತು ದೃಷ್ಟಿ ವೈಶಾಲ್ಯವನ್ನು ಕಾಣಿಸುವ ಸಣ್ಣ ಕಿಟಕಿಗಳಂತೆ ಈ ಕತೆಗಳು ತೆರೆದುಕೊಂಡಿವೆ.

ಮನುಷ್ಯ ಮತ್ತು ಪರಿಸರದ ನಡುವಿನ ಸೂಕ್ಷ್ಮ ಸಂಬಂಧವನ್ನು ಈ ಪ್ರಾಚೀನ ಸಂಸ್ಕೃತಿಯ ಜನ ಎಷ್ಟು ಚೆನ್ನಾಗಿ ಅರಿತಿದ್ದರು ಮತ್ತು ಇಡೀ ಜೀವ ಜಗತ್ತು ಒಂದೇ ಸೃಷ್ಟಿಯ ಭಾಗ ಎಂಬ ಸತ್ಯವನ್ನು ಎಷ್ಟು ಮನದಟ್ಟಾಗಿಸಿಕೊಂಡಿದ್ದರು! ಬಣಗಳ ಕಥಿಕರ ಮೂಲಕ ಮೌಖಿಕವಾಗಿಯೇ ಉಳಿದು ಬಂದಿದ್ದ ಅವರ ವಿಸ್ತೃತ ಅರಿವಿನ ಕಾಣ್ಕೆ ಕನ್ನಡದ ಮೂಲಕ ನಮಗೆ ರಾಜಗೋಪಾಲ್ ಅವರಿಂದ ಸಿಕ್ಕಿರುವುದು ಬಹಳ ಸಂತೋಷದ ವಿಷಯ.

**ಪುಸ್ತಕ: ಹಲವು ಮಕ್ಕಳ ತಾಯಿ (ಸಂಪಾದಿತ)**
(ಮಕ್ಕಳ ಕೂಟದ ಸರಸ್ವತಮ್ಮನವರ ನೆನಪಿನ ಲೇಖನಗಳ ಸಂಗ್ರಹ)

ಮೈಸೂರಿನಲ್ಲಿ ೧೯೪೨ರಲ್ಲಿ ಮೈಸೂರು ಮಕ್ಕಳ ಕೂಟವನ್ನು ಸ್ಥಾಪಿಸಿ, ಸುಮಾರು ೨೦ ವರ್ಷಗಳ ಕಾಲ ಅದನ್ನು ಯಶಸ್ವಿಯಾಗಿ ನಡೆಸಿದ ಶ್ರೀಮತಿ ಎಚ್. ವೈ. ಸರಸ್ವತಿ ಅವರು, ಬರಹಗಾರರಾಗಿಯೂ ಗುರುತಿಸಿಕೊಂಡವರು. 'ಮಕ್ಕಳ ಕೂಟದ ಸರಸ್ವತಮ್ಮ' ಎಂದೇ ಬಹುಜನಗಳಿಂದ ಗುರುತಿಸಲ್ಪಟ್ಟರೂ ಎಂದಿಗೂ ಕೂಟದ ಅಧ್ಯಕ್ಷರಾಗದೆ, ಇತರ ಮಹಿಳೆಯರನ್ನೇ ಅಧ್ಯಕ್ಷರಾಗಿಸಿ ಕಡೆಯವರೆಗೂ ಕಾರ್ಯದರ್ಶಿಯಾಗೇ ಉಳಿದವರು. ಇಂತಹ ಅಪರೂಪದ, ಎತ್ತರದ ವ್ಯಕ್ತಿತ್ವದ ಸರಸ್ವತಿಯವರ ಕುರಿತು ಹಲವಾರು ಮಂದಿ ಸೇರಿ ಬರೆದಿರುವ ನೆನಪು, ಲೇಖನಗಳ ಸಂಗ್ರಹವಾಗಿ ಅವರ ಜೀವನ ಚರಿತ್ರೆ ಹೊರಬಂದಿದೆ. 'ಹಲವು ಮಕ್ಕಳ ತಾಯಿ' ಎಂಬ ಚೆಂದದ ಹೆಸರನ್ನಿಟ್ಟುಕೊಂಡ ಈ ಪುಸ್ತಕದ ಒಳಗಿನ ಹೂರಣವೂ ಕೂಡ ಶೀರ್ಷಿಕೆಯಷ್ಟೇ ಸುಂದರವಾಗಿದೆ.

ಸರಸ್ವತಿಯವರ ಪ್ರಗತಿಪರ ನಿಲುವು, ಸಮಾಜಮುಖಿ ವ್ಯಕ್ತಿತ್ವ, ಸ್ತ್ರೀ ಸಮಾನತೆಯ ಬಗ್ಗೆ ಮತ್ತು ಮಕ್ಕಳ ಮನೋವಿಕಾಸದ ಬಗ್ಗೆ ಅವರಿಗಿದ್ದ ಕಾಳಜಿಯ ಬಗ್ಗೆ ಅತ್ಯಂತ ಗೌರವ ಹೊಂದಿದ್ದ ನಾನು, ಬಿಡಿ ಲೇಖನಗಳಲ್ಲಿ, ಮಾತುಗಳಲ್ಲಿ ಸರಸ್ವತಿಯವರನ್ನು ಅಷ್ಟಿಷ್ಟೇ ಕಂಡುಕೊಳ್ಳುವ ಪ್ರಯತ್ನ ನಡೆಸಿದ್ದೆ. ಈಗ ಸುಮಾರು ೪೦೦ ಪುಟಗಳಲ್ಲಿ,



ಹಲವು ಮಂದಿಯ ಬಿಡಿ ಬಿಡಿ ನೆನಪುಗಳಲ್ಲಿ ಅವರನ್ನು ಇನ್ನಷ್ಟು ಅರಿಯಲು ಸಾಧ್ಯವಾಗಿದ್ದಕ್ಕೆ ತುಂಬಾ ಸಂತೋಷವೆನಿಸುತ್ತಿದೆ. ಸರಸ್ವತಿಯವರ ಕುರಿತು ಓದುತ್ತಲೇ ಅವರಿದ್ದ ಕಾಲ, ಸಂದರ್ಭ, ಅವರ ಉದಾರ ಮನೋಭಾವ, ವಾತ್ಸಲ್ಯ, ಕಾಠಿಣ್ಯ, ಅವರ ಜೀವನದಲ್ಲಿ ಬಂದ ಇತರರು, ಇವೆಲ್ಲವನ್ನೂ ಅರಿಯುವ ಅವಕಾಶವೊಂದನ್ನು ಈ ಪುಸ್ತಕ ಓದುಗರಿಗೆ ನೀಡುತ್ತದೆ.

ಪಜ಼ಲ್ ಚೂರುಗಳು ಒಂದಕ್ಕೊಂದು ಸೇರಿಕೊಳ್ಳುತ್ತಲೇ ಕಡೆಗೆ ಒಂದು ಇಡಿಯ ಚಿತ್ರವಾಗುವ ಹಾಗೆಯೇ ಈ ಬಿಡಿ ಬರಹಗಳಲ್ಲಿ ಸುಳಿಯುವ ಸಂಗತಿಗಳೆಲ್ಲಾ ಒಂದಕ್ಕೊಂದು ಕೊಂಡಿಯಾಗಿ ಜೋಡಿಸಿಕೊಳ್ಳುತ್ತಾ ಓದುಗರ ಮನಸ್ಸಿನಲ್ಲಿ ಇಡೀ ಒಂದು ಕಾಲದ, ಒಂದು ಕುಟುಂಬದ, ಒಬ್ಬ ವ್ಯಕ್ತಿಯ ಚಿತ್ರಣವೊಂದನ್ನು ಕಟ್ಟುವ ಪರಿಯೇ ಮನಸ್ಸಿಗೆ ತಟ್ಟುವಂತಿದೆ. ಉದಾಹರಣೆಗಾಗಿ ನಾನಿಲ್ಲಿ ಎರಡು ಬಿಡಿಬರಹಗಳಲ್ಲಿ ಬಂದ ಎರಡು ಬೇರೆ ಬೇರೆ ಸಣ್ಣ ಸಂಗತಿಗಳು ನನ್ನ ಮನಸ್ಸಿನಲ್ಲಿ ತಳಕು ಹಾಕಿಕೊಂಡ ವಿಷಯವನ್ನು ಹಂಚಿಕೊಳ್ಳುತ್ತಿದ್ದೇನೆ.

ಮಗು ಸರಸ್ವತಿ ಹುಟ್ಟಿದ ಹತ್ತೋ ಹನ್ನೊಂದೋ ದಿನಕ್ಕೆ ತನ್ನ ತಾಯಿಯನ್ನು ಕಳೆದುಕೊಂಡಿತ್ತು. ಅಕ್ಕರೆಯಿಂದ ಸಾಕಿ ಸಲುಹಿದ ಬಂಧುಗಳ ಆಶ್ರಯದಲ್ಲೇ ಬೆಳೆದರೂ, ತಾಯಿ ಇಲ್ಲದ ಕೊರಗೊಂದು ಈ ಮಗು ಬೆಳೆದು ದೊಡ್ಡದಾದ ಮೇಲೂ ಮನದಾಳದಲ್ಲಿ ಹುದುಗಿಯೇ ಇತ್ತೋ ಏನೋ. ತಮ್ಮ ತಾಯಿ ಸರಸ್ವತಮ್ಮನವರನ್ನು ಕುರಿತು ರಾಜಗೋಪಾಲ್ ಅವರು ಬರೆದ ಸುದೀರ್ಘ ಲೇಖನದಲ್ಲಿ ಅವರು ಒಂದು ಸಂದರ್ಭವನ್ನು ನೆನಪಿಸಿಕೊಂಡಿದ್ದಾರೆ. ತಮ್ಮ ಚಿಕ್ಕಮ್ಮನಿಂದ ಅದನ್ನು ತಾವು ಕೇಳಿ ತಿಳಿದುಕೊಂಡಿದ್ದೆಂದು ತಿಳಿಸಿದ್ದಾರೆ. ಸರಸ್ವತಿಯವರ ಬಾಲ್ಯದಲ್ಲೊಮ್ಮೆ ಯಾವುದೋ ವಿಶೇಷ ಸಂದರ್ಭ ಒಂದರಲ್ಲಿ ಒಬ್ಬಾಕೆ ಮಕ್ಕಳಿಗೆಲ್ಲ ವಿಶೇಷವಾದ ಯಾವುದೋ ತಿಂಡಿ ಹಂಚುತ್ತಿದ್ದರಂತೆ. ಚಿಕ್ಕ ಹುಡುಗಿ ಸರಸ್ವತಿಯೂ ಅವರ ಜೊತೆಗೆ ಸೇರಿ ತಿಂಡಿಗಾಗಿ ಕೈಯೊಡ್ಡಿದಾಗ, ಹಂಚುತ್ತಿದ್ದಾಕೆ 'ತಿಂಡಿ ಬೇಕಾದರೆ ಹೋಗು, ನಿಮ್ಮಮ್ಮನನ್ನು ಕೇಳು' ಎಂದರಂತೆ. ಈ ಮಗುವಿಗೆ ತಾಯಿ ಇಲ್ಲ ಎಂದು ತಿಳಿದವರೊಬ್ಬರು ಆಡಿದ ಮಾತಿದು! ಇದು 'ಹಲವು ಮಕ್ಕಳ ತಾಯಿ' ಪುಸ್ತಕದಲ್ಲಿ ಬರುವ ಒಂದು ಸಂದರ್ಭ. ಇದೇ ಪುಸ್ತಕದಲ್ಲಿ ಮುಂದೆ, ಮಕ್ಕಳ ಕೂಟದ ಎಸ್. ಗಂಗಾ ಅವರು ಸರಸ್ವತಮ್ಮನವರನ್ನು ಕುರಿತು ಬರೆದ ಇನ್ನೊಂದು ಲೇಖನವಿದೆ. ಆ ಲೇಖನದಲ್ಲಿ ಗಂಗಾ ಅವರು ವಿವರಿಸಿರುವಂತೆ, ೧೯೪೭ರ ಆಗಸ್ಟ್ ೧೫ರ ದೇಶದ ಮೊದಲ ಸ್ವಾತಂತ್ರ್ಯದ ಹಬ್ಬವನ್ನು ಮೈಸೂರಿನ ಮಕ್ಕಳ ಕೂಟದಲ್ಲಿ ನಡೆಸಲು ಕಮಿಟಿ ಮೆಂಬರುಗಳು ನಿಶ್ಚಯಿಸಿ ಅದರ ಸಿದ್ಧತೆ ನಡೆಸಿರುತ್ತಾರೆ. ಮಕ್ಕಳಿಗೆ ಈ ವಿಶೇಷ ಸಂದರ್ಭದಲ್ಲಿ ಏನು ಸಿಹಿ ಹಂಚಬೇಕೆಂಬ ವಿಷಯವನ್ನು ಚರ್ಚಿಸುವ ವೇಳೆ ಕೆಲವರು ಮೈಸೂರ್ ಪಾಕನ್ನು ಸೂಚಿಸುತ್ತಾರೆ.

ಮಕ್ಕಳ ಕೂಟದ ಸರಸ್ವತಮ್ಮನವರು ಹೇಳುತ್ತಾರೆ 'ಮೈಸೂರ್ ಪಾಕ್ ರುಚಿಯಾಗೇನೋ ಇರತ್ತೆ. ಆದರೆ ಅದು ಚಿಕ್ಕದಾಗಿರತ್ತೆ, ಮಕ್ಕಳ ಕೈತುಂಬಾ ಸಿಗುವಂತೆ ಅರಳು ಉಂಡೆ ಕಟ್ಟಿಕೊಡೋಣ'. ಸರಸ್ವತಮ್ಮನವರ ಈ ಸಲಹೆ ಎಲ್ಲರಿಗೂ ಹಿಡಿಸಿದ್ದನ್ನೂ ನಂತರ ತಿಮ್ಮಮ್ಮನವರ ನೇತೃತ್ವದಲ್ಲಿ ಅವರೆಲ್ಲಾ ಸೇರಿ ಕಟ್ಟಿದ ಅರಳು ಉಂಡೆಯನ್ನು ಸ್ವಾತಂತ್ರ್ಯ ಹಬ್ಬದಂದು ಮಕ್ಕಳಿಗೂ ದೊಡ್ಡವರಿಗೂ ಹಂಚಿದ್ದನ್ನೂ ಗಂಗಾ ಅವರು ನೆನೆಸಿಕೊಂಡಿದ್ದಾರೆ. ಈ ನೆನಪಿನ ಕೊನೆಗೆ ಗಂಗಾ ಅವರು ಹೇಳಿರುವ ಇನ್ನೂ ಒಂದು ಮಾತೂ ಇದೆ. 'ಆ ದಿನ ಮಕ್ಕಳು ಕೈತುಂಬಾ ಅರಳು ಉಂಡೆಗಳನ್ನು ಹಿಡಿದುಕೊಂಡು ಸಂತೋಷವಾಗಿ ಮನೆಗೆ ಹೋದರು'. ಗಂಗಾ ಅವರ ನೆನಪನ್ನು ಓದುತ್ತಿರುವಾಗ ಈ 'ಕೈ ತುಂಬಾ' ಎಂಬ ಶಬ್ದಗಳನ್ನು ನೋಡಿದ ಕೂಡಲೇ ರಾಜಗೋಪಾಲರ ನೆನಪಿನಲ್ಲಿ ಬಾಲಕಿ ಸರಸ್ವತಿ, ಕೈ ಚಾಚಿದಾಗ ಕೇಳಿದ ಮಾತು ಥಟ್ಟನೆ ನನ್ನ ಮನಸ್ಸಿನಲ್ಲಿ ಸುಳಿಯಿತು.

ಇವೆಲ್ಲವೂ ಒಂದಕ್ಕೊಂದು ಸಂಬಂಧವಿದ್ದೋ ಇಲ್ಲದೆಯೋ ಸಂಭವಿಸುವ ಘಟನೆಗಳೇ ಇರಬಹುದು. ಕೇವಲ ಓದುಗರ ಮನಸ್ಸಿನಲ್ಲಿ ಇವೆಲ್ಲ ಒಂದಕ್ಕೊಂದು ಸಂಬಂಧಪಟ್ಟಿರುವ ಸಂಗತಿಗಳಾಗಿ ತೋರಬಹುದು ಅಥವಾ ಹಾಗನ್ನಿಸದೆಯೂ ಇರಬಹುದು. ಆದರೆ ಸರಸ್ವತಮ್ಮನವರನ್ನು ಹತ್ತಿರದಿಂದ ಬಲ್ಲವರು, ಅವರ ಮನೆ ಮಂದಿ, ಬಂಧುಗಳು, ಸ್ನೇಹಿತರು, ಅವರೊಂದಿಗೆ ಕೂಟದಲ್ಲಿ ಕೆಲಸ ಮಾಡಿದವರು, ಮಕ್ಕಳ ಕೂಟದಲ್ಲಿ ಪಾಲ್ಗೊಂಡಿದ್ದ ಅಂದು ಮಕ್ಕಳಾಗಿದ್ದು ಈಗ ಹಿರಿಯರಾಗಿರುವವರು ಇವರೆಲ್ಲರ ನೆನಪಿನಲ್ಲಿ ಹೀಗೆಯೇ ಸಣ್ಣ ಸಣ್ಣ ಬಿಡಿ ಘಟನೆಗಳಲ್ಲಿ ಸುಳಿಯುವ ಸರಸ್ವತಿಯವರ ನೆನಪು ಅವಳ ಇಡೀ ವ್ಯಕ್ತಿತ್ವವನ್ನು ಒಟ್ಟಾರೆಯಾಗಿ ಹಲವು ಮಗ್ಗಲುಗಳಿಂದ ನೋಡುವ ಅವಕಾಶವೊಂದನ್ನು ಒದಗಿಸಿಕೊಟ್ಟಿದೆ. ಹಾಗೆಯೇ ಬಿಡಿ ಘಟನೆಗಳಿಗೆ ಸಂಬಂಧ ಕಲ್ಪಿಸುತ್ತಾ ವ್ಯಕ್ತಿತ್ವವೊಂದರ ಸಂಕೀರ್ಣತೆಯನ್ನು ಅರಿಯುವುದಕ್ಕೂ ಕೂಡ.

ನಾವು ಜೀವನ ಚರಿತ್ರೆಗಳನ್ನು ಓದುವುದಾದರೂ ಬದುಕಿನ, ಮನುಷ್ಯ ಲೋಕದ ಈ ಸಂಕೀರ್ಣತೆಯನ್ನು ಅರ್ಥ ಮಾಡಿಕೊಳ್ಳುತ್ತಲೇ ಎಲ್ಲವನ್ನೂ ಒಂದು ಮಾನವೀಯ ಕಾಳಜಿಯಲ್ಲಷ್ಟೇ ನೋಡುವ, ಸ್ಪಂದಿಸುವ ಒಂದು ಆರೋಗ್ಯಪೂರ್ಣ ಮನಸ್ಥಿತಿಯನ್ನು ಬೆಳೆಸಿಕೊಳ್ಳಲಿಕ್ಕಾಗಿಯೇ ಇರಬಹುದು. ಇನ್ನೊಬ್ಬರ ಜೀವಿತದ ವಿವರಗಳಿಂದ, ಅವರು ಸಾಧಿಸಿದ ಎತ್ತರಗಳು, ಎದುರಿಸಿದ ಸವಾಲುಗಳು ಇವೆಲ್ಲವನ್ನೂ ಅರಿಯುವುದರಿಂದ ನಮ್ಮ ದಾರಿಯಲ್ಲಿ ಎದುರಾಗುವ ಸವಾಲುಗಳನ್ನೆದುರಿಸಲು ನಮಗೆ ಸ್ಫೂರ್ತಿ ಸಿಗುತ್ತದೆ, ನೆರವಾಗುತ್ತದೆ ಎಂಬುದು ಒಂದು ಕಾರಣವಿರಬಹುದು. ಆದರೆ ಇದಕ್ಕೂ ಮಿಗಿಲಾದ ಇನ್ನೊಂದು ಸಂಗತಿ ಇದೆ. ಇನ್ನೊಬ್ಬರ ಕುರಿತು ಅರಿಯಬೇಕೆಂಬ ಆಸಕ್ತಿ ನಮ್ಮಲ್ಲಿ ಮೂಡುವುದಕ್ಕೆ ಕಾರಣ ನಾವೆಲ್ಲರೂ ಒಬ್ಬರು ಇನ್ನೊಬ್ಬರ ವಿಸ್ತರಣೆಯಾದ್ದರಿಂದ.



ಅಂದರೆ ಈ ಲೋಕದಲ್ಲಿರುವ ಮನುಷ್ಯರೆಲ್ಲರ ನಡುವೆ ತೀರ ಆಳವಾದ ತೀವ್ರವಾದ ಸಂಬಂಧವೊಂದಿದೆ. ಇನ್ನೊಬ್ಬ ವ್ಯಕ್ತಿಯ ನೋವು, ನಲಿವು, ತಲ್ಲಣ, ಕೋಪ, ಸಂತೋಷಗಳ ಮೂಲಕವೇ ಮನುಷ್ಯ ಲೋಕದ ಈ ಎಲ್ಲಾ ಸಂವೇದನೆಗಳನ್ನು ತಾನೂ ಅನುಭವಿಸುವ, ಅರಿಯುವ, ಸ್ಪಂದಿಸುವ ಆ ಮೂಲಕ ಬದುಕಿನ ಕುರಿತ ತಿಳುವಳಿಕೆ ಮತ್ತು ಆಸಕ್ತಿಯನ್ನೇ ಹೆಚ್ಚಿಸಿಕೊಳ್ಳುವ, ವಿಸ್ತರಿಸಿಕೊಳ್ಳುವ ಅವಕಾಶವೊಂದು ಎಲ್ಲರಿಗೂ ಇದೆ. ಈ ಮಾನವೀಯ ಕಾರಣದಿಂದಲೇ ಬಹುಶಃ ನಾವೆಲ್ಲರೂ ಇನ್ನೊಬ್ಬರ ಜೀವನವನ್ನು ಗಮನಿಸುವ ಸಂಗತಿಯಲ್ಲಿ, ಜೀವನ ಚರಿತ್ರೆಯನ್ನು ಓದುವುದರಲ್ಲಿ ಆಸಕ್ತರಾಗಬಹುದೇನೋ ಎನ್ನಿಸುತ್ತಿದೆ.

ಸರಸ್ವತಮ್ಮನವರ ಜೀವನ ಚರಿತ್ರೆಯನ್ನು ಓದುವಾಗ ಈ ಪುಸ್ತಕದ ಸ್ವರೂಪ ಕೂಡ ಇಂಥ ಒಂದು ತಿಳುವಳಿಕೆಯ ವಿಸ್ತರಣೆಗೆ ಇನ್ನಷ್ಟು ಅವಕಾಶವನ್ನು ಕೊಟ್ಟಿದೆ ಎನಿಸಿತು. ಯಾರಾದರೊಬ್ಬರು ತಮ್ಮ ಆತ್ಮಕಥೆಯನ್ನು ತಾವೇ ಬರೆದುಕೊಂಡಾಗ ಅನಿವಾರ್ಯವಾಗಿ ಅವರು ತಮ್ಮ ಜೀವನದ ಕೇಂದ್ರಭಾಗದಲ್ಲಿದ್ದು ತಮಗೆ ಅಲ್ಲಿಂದ ಕಂಡ ತಮ್ಮ ಬದುಕನ್ನು ಓದುಗರಿಗೆ ತಿಳಿಸಬೇಕಾಗುತ್ತದೆ. ತಮ್ಮ ನೆನಪಿನಲ್ಲಿ ಉಳಿದ ಮತ್ತು ಮುಖ್ಯವಾಗಿ ತಾವು ನೆನಪಿನಲ್ಲಿಟ್ಟುಕೊಂಡಂತೆ ತಮ್ಮ ಮನದಲ್ಲಿ ದಾಖಲಾಗಿರ-ಬಹುದಾದ ತಮ್ಮದೇ ಅನುಭವಗಳ ಆಧಾರದ ಮೇಲೆ ತಮ್ಮ ವ್ಯಕ್ತಿಚಿತ್ರವೊಂದನ್ನು ಓದುಗರಿಗೆ ನೀಡುವ ಅವಕಾಶ ಇಲ್ಲಿ. ವ್ಯಕ್ತಿಯೊಬ್ಬರನ್ನು ಕುರಿತು ಇನ್ನೊಬ್ಬ ವ್ಯಕ್ತಿ ಬರೆಯುವ ಇನ್ನೊಂದು ಬಗೆಯ ಜೀವನ ಚರಿತ್ರೆಯಲ್ಲಿ ಬರೆಯುವವರ ಗ್ರಹಿಕೆ, ಇಷ್ಟಾನಿಷ್ಟಗಳು, ಪೂರ್ವಾಗ್ರಹಗಳು, ಆ ವ್ಯಕ್ತಿಯ ಕುರಿತಂತೆ ಬರೆಯುವವರಿಗೆ ಇರಬಹುದಾದ ಪ್ರೀತಿ, ದ್ವೇಷದಂತಹ ಭಾವನೆಗಳು ಇವೆಲ್ಲವುಗಳ ಆಧಾರದ ಮೇಲೆ ಆ ವ್ಯಕ್ತಿಯ ಕುರಿತ ಒಂದು ಚಿತ್ರಣ ಸಿಗುತ್ತದೆ. ಮೂರನೇ ಬಗೆಯ ಜೀವನ ಚಿತ್ರಣದಲ್ಲಿ ಒಬ್ಬ ವ್ಯಕ್ತಿಯ ಕುರಿತು ಹಲವರು ಹಲವು ಬಗೆಯಲ್ಲಿ ಮೂಡಿಸುವ ಚಿತ್ರಗಳಿವೆ. 'ಹಲವು ಮಕ್ಕಳ ತಾಯಿ'ಯಲ್ಲಿ ಎಚ್. ವೈ. ಸರಸ್ವತಿಯವರ ವ್ಯಕ್ತಿತ್ವದ ಚಿತ್ರಣ ಹೀಗೆ ಅಂದರೆ ಅವರನ್ನು ಬಲ್ಲ, ಅವರ ಹತ್ತಿರದವರ, ಮನೆಯವರ, ಅವರೊಂದಿಗೆ ಕೆಲಸ ಮಾಡಿದವರ, ಅವರ ಸಂಸ್ಥೆಯಲ್ಲಿ ಕಲಿತವರ ಮಾತುಗಳಲ್ಲಿ ಮೂಡಿಬಂದಿರುವ ವ್ಯಕ್ತಿ ಚಿತ್ರಣವಾಗಿದೆ. ಅವರ ಕುರಿತು ಹತ್ತು ಹಲವು ಮಂದಿ ತಮ್ಮ ನೆನಪುಗಳ ಆಧಾರದ ಮೇಲೆ ಕಟ್ಟಿಕೊಡುವ ಈ ವ್ಯಕ್ತಿ ಚಿತ್ರಣದಲ್ಲಿ ಹೀಗೆ ಸರಸ್ವತಮ್ಮನವರನ್ನು ಹಲವು ಬಗೆಯಲ್ಲಿ ಕಾಣುವ, ಅರಿಯುವ ಅವಕಾಶ ಓದುಗರಿಗೆ ದೊರೆತಿದೆ. ಈ ಮಾದರಿಯಿಂದ ಅವರ ಜೊತೆಗೇ ಅವರಿದ್ದ ಕಾಲ, ಸಂದರ್ಭ, ದೇಶ, ಪರಿಸ್ಥಿತಿಗಳನ್ನು ಕೂಡ ಅರಿಯುವ, ವಸ್ತುನಿಷ್ಠವಾಗಿ ಅವಲೋಕಿಸಬಹುದಾದ ಸಾಧ್ಯತೆಯೊಂದು ದಕ್ಕಿದೆ.

ಹೀಗಾದ ಕಾರಣಕ್ಕೇ ಸರಸ್ವತಮ್ಮನವರ ಜೊತೆ ಜೊತೆಗೇ ನಾವಿಲ್ಲಿ ಅವರ

ಬದುಕಿಗೆ ಸಂಬಂಧಿಸಿದ ಇನ್ನೂ ಎಷ್ಟೆಲ್ಲ ಮಂದಿಯನ್ನು ಪರಿಚಯ ಮಾಡಿಕೊಳ್ಳುತ್ತೇವೆ. ಗೋಖಲೆಯ ಸಿದ್ಧಾಂತಗಳಿಂದ ಪ್ರಭಾವಿತರಾಗಿ ತಮ್ಮ ಮಗಳಲ್ಲೂ ಎಷ್ಟೆಲ್ಲ ಆದರ್ಶ ವಿಚಾರಗಳು ಮೊಳಕೆಯೊಡೆಯಲು ಕಾರಣರಾದ ಸರಸ್ವತಮ್ಮನವರ ತಂದೆ ವಾಜಪೇಯಂ ವೆಂಕಟಸುಬ್ಬಯ್ಯ, ಮಕ್ಕಳ ಕೂಟಕ್ಕೆ ಪ್ರೇರಣೆಯಾಗಿ ಒದಗಿ ಬಂದ ಕಲ್ಯಾಣಮ್ಮನವರು, ತಮ್ಮ ಪ್ರಯತ್ನಗಳಿಗೆ ಬೆಂಬಲವಾಗಿ ನಿಂತ ಪತಿ ಯೋಗಾನರಸಿಂಹಯ್ಯನವರು, ಜೀವನ್ಮುಖಿ ಪ್ರೀತಿಪರ ವ್ಯಕ್ತಿತ್ವಗಳಾದ ಮಲತಾಯಿ ಕಮಲಾಕ್ಷಮ್ಮ, ಸೋದರತ್ತೆ ಅನ್ನಪೂರ್ಣಮ್ಮ, ಸುಬ್ಬತ್ತೆ, ತಿಮ್ಮಮ್ಮ ಮುಂತಾದವರು ಇವರೆಲ್ಲರ ಕಥೆಗಳು ಇಲ್ಲಿ ಹಾಸುಹೊಕ್ಕಾಗಿ ಬಂದು ಅವರನ್ನೂ ಅರಿಯುವ ಅವಕಾಶವನ್ನಿತ್ತಿದೆ. ಕೆಲವರಂತೂ ನಿಷ್ಕಾಮ ಕರ್ಮವೇ ತಮ್ಮ ಧ್ಯೇಯವೆಂಬಂತೆ ಆದರೆ ಅದರ ಅರಿವೂ ತಮಗಿಲ್ಲವೆಂಬಂತೆ ಸಹಜವಾಗಿ ಮನೆಗಳನ್ನು, ಮಕ್ಕಳನ್ನೂ ಪೊರೆಯುತ್ತಲೇ ಉಳಿದವರು. ಎಲ್ಲರ ಮನೆಗಳಲ್ಲೂ ಹೀಗೆ ಎಲ್ಲರಿಗೂ ನೆರಳಾಗಿದ್ದು, ನೆರಳಲ್ಲೇ ಉಳಿದು ಸರಿದು ಹೋದವರ ಎಷ್ಟೆಲ್ಲ ಕಥೆಗಳು ಈ ಪುಸ್ತಕ ಓದುವಾಗ ನಮ್ಮ ಎದೆಗಳಲ್ಲಿ ಸುಳಿದು ಬೆಚ್ಚಗಾಗಿಸುತ್ತದೆ. ಈ ಪುಸ್ತಕದ ವಿಸ್ತಾರ ಮತ್ತು ಸಾರ್ಥಕತೆಗೆ ಈ ಅಂಶವು ಕೂಡ ಒಂದು ದೊಡ್ಡ ಕಾರಣವಾಗಿ ಒದಗಿ ಬಂದಿದೆ.

ಈ ಪುಸ್ತಕದ ಓದಿನಲ್ಲಿ ನನ್ನ ಮನಸ್ಸು ತಟ್ಟಿದ ಇನ್ನೊಂದು ವಿಷಯವೆಂದರೆ, ಮಕ್ಕಳು ತಮ್ಮ ತಂದೆ ತಾಯಿಯನ್ನು ನೆನಪಿಟ್ಟುಕೊಳ್ಳುವ ರೀತಿ. ಅಪ್ಪ ಅಮ್ಮ ಒದಗಿಸುವ ಭದ್ರತೆ, ಕೊಡುವ ಶಿಕ್ಷಣ, ಒದಗಿಸುವ ಅನುಕೂಲತೆಗಳು–ಅವಕಾಶಗಳು, ಆದರ್ಶಪ್ರಾಯ ನಡವಳಿಕೆಯಿಂದ ನಾಳಿನ ಬದುಕಿಗೆ ಹಾಕಿಕೊಡುವ ಭದ್ರ ಬುನಾದಿ ಇವೆಲ್ಲವುಗಳ ಜೊತೆಗೆ ಮಕ್ಕಳ ವಿಷಯವಾಗಿ ಪೋಷಕರು ತೋರುವ ವಾತ್ಸಲ್ಯ, ಮುದ್ದು ಆ ಮಕ್ಕಳ ಮನದಲ್ಲಿ ಎಷ್ಟು ಆಳವಾಗಿ ಬೇರೂರಬಲ್ಲದು ಎಂಬ ಸಂಗತಿ. ಸರಸ್ವತಿಯವರು ಮಕ್ಕಳ ಕೂಟದ ಮಕ್ಕಳ ವಿಷಯವಾಗಿ ಮತ್ತು ತಮ್ಮ ಮೊಮ್ಮಕ್ಕಳ ವಿಷಯವಾಗಿ ಉದಾರವಾಗಿ ತೋರುತ್ತಿದ್ದ ವಾತ್ಸಲ್ಯವನ್ನು ತಮ್ಮ ಮಕ್ಕಳ ವಿಷಯವಾಗಿ ಅಷ್ಟಾಗಿ ತೋರಿಸಿಕೊಂಡವರಲ್ಲ. ಅಮ್ಮನ ನೆನಪಿನಲ್ಲಿ ಆಕೆಯ ಕುರಿತ ಪ್ರೀತಿ ಗೌರವ, ಆದರ್ಶಪೂರ್ಣವಾದ ಆಕೆಯ ವ್ಯಕ್ತಿತ್ವವನ್ನು ನೆನೆಯುತ್ತಲೇ ಸರಸ್ವತಮ್ಮನವರ ಮಕ್ಕಳು, ಆಕೆಯ ಸ್ವಭಾವದಲ್ಲಿ ತಮ್ಮ ಕುರಿತಂತೆ ಇದ್ದ ಈ ಕಾಠಿಣ್ಯದ ಕುರಿತೂ ಪ್ರಸ್ತಾಪಿಸಿದ್ದಾರೆ. ಎಲ್ಲೋ ಒಮ್ಮೊಮ್ಮೆ ತಮ್ಮ ಮೇಲೆ ಅಮ್ಮ ತೋರಿಸಿದ ಪ್ರೀತಿಯ ಸಣ್ಣ ಘಟನೆಗಳನ್ನು ಮನಸ್ಸಿನಾಳದಲ್ಲಿ ಭದ್ರವಾಗಿ ಇಟ್ಟುಕೊಂಡು 'ಅದು ಇನ್ನಷ್ಟು ನಮಗೆ ಸಿಗಬೇಕಿತ್ತು' ಎಂಬ ಹಂಬಲವೊಂದನ್ನೂ ವ್ಯಕ್ತಪಡಿಸಿದ್ದಾರೆ ಎಂದು ನನಗನ್ನಿಸಿತು. ತಮ್ಮ ತಾಯಿಯ ವ್ಯಕ್ತಿತ್ವದಲ್ಲಿದ್ದ ಈ ಕಾಠಿಣ್ಯಕ್ಕೆ ಆಕೆ ತನ್ನ ಜೀವನದಲ್ಲಿ ಅನುಭವಿಸಿದ್ದ, ಆಕೆಯನ್ನು ರೂಪಿಸಿದ್ದ ಹಲವು ಅನುಭವಗಳು ಕಾರಣವಿದ್ದಿರಬಹುದೆಂಬ ತಮ್ಮ ಅಭಿಪ್ರಾಯವನ್ನೂ ಹಂಚಿಕೊಂಡಿದ್ದಾರೆ. ಬಹುಶಃ ತೀರಾ ಸಣ್ಣ ವಯಸ್ಸಿನಲ್ಲಿಯೇ ಯಾರ ಕುರಿತೂ



ಭಾವುಕವಾಗಬಾರದು, ಯಾರನ್ನೂ ಹೆಚ್ಚು ಹಚ್ಚಿಕೊಳ್ಳಬಾರದು, ಯಾರ ಮುಂದೂ ಕೈಚಾಚಬಾರದು ಎಂಬ ಕೆಲವು ನಿರ್ಧಾರಗಳನ್ನು ಮನಸ್ಸಿನಲ್ಲಿ ಮಾಡಿ ಅದನ್ನು ತಮ್ಮ ನಡವಳಿಕೆಯಲ್ಲಿ ಅಮ್ಮ ಅಳವಡಿಸಿಕೊಂಡಿದ್ದರೇನೋ ಎಂದು ಕೂಡ ಅಮ್ಮನ ನೆನಪಿನಲ್ಲಿ ಮಕ್ಕಳು ಹೇಳಿದ್ದಾರೆ.

ಸರಸ್ವತಮ್ಮನವರ ಸ್ವಭಾವದಲ್ಲಿದ್ದ ಇನ್ನೊಂದು ವೈರುಧ್ಯವೂ ನಮ್ಮನ್ನು ಕಲಕುತ್ತದೆ. ಎಷ್ಟೆಲ್ಲ ಪ್ರಗತಿಪರ ವಿಚಾರಗಳನ್ನು ಹೊಂದಿದ್ದ ಅವರು ಕೆಲವು ಸಂದರ್ಭಗಳಲ್ಲಿ ಕೆಲವು ವಿಷಯಗಳಲ್ಲಿ ತೋರಿದ ಸಂಕುಚಿತ ಎಂದು ಸುಲಭಕ್ಕೆ ಅಂದುಕೊಂಡು-ಬಿಡಬಹುದಾದ ಅವರ ವರ್ತನೆಯನ್ನು ನೋಡುವಾಗ ಆಶ್ಚರ್ಯವೆನಿಸುತ್ತದೆ. ಆದರೆ ತಮ್ಮ ತಾಯಿಯ ಕುರಿತು ಬರೆಯುವಾಗ ಯಾವ ಪೂರ್ವಾಗ್ರಹವೂ ಇಲ್ಲದಂತೆ ತಮ್ಮ ಅನುಭವಕ್ಕೆ ದಕ್ಕಿದಂತಾ ಹಲವು ಬಣ್ಣಗಳ ಅವರ ವ್ಯಕ್ತಿತ್ವವನ್ನು ಯಾವ ಹಿಂಜರಿಕೆಯೂ ಇಲ್ಲದೆ ಅವರ ಮಕ್ಕಳು ಅತ್ಯಂತ ಗೌರವ ಪ್ರೀತಿಯಿಂದಲೇ ಬರೆದಿರುವ ರೀತಿಯೇ ಸರಸ್ವತಮ್ಮನವರ ವ್ಯಕ್ತಿತ್ವವನ್ನು ಇನ್ನಷ್ಟು ಎತ್ತರಕ್ಕೇರಿಸಿದೆ. ಇದರ ಜೊತೆ ಜೊತೆಗೇ ಎಷ್ಟೊಂದು ಜನರ ನೆನಪಿನಲ್ಲಿ ಸರಸ್ವತಿಯವರಲ್ಲಿದ್ದ ಜೀವನ ಪ್ರೀತಿ, ವಿನೋದಪ್ರಿಯತೆಗಳು ಲವಲವಿಕೆಯಿಂದ ಅರಳಿಕೊಂಡಿವೆ.

'ತಾಯಿಯನ್ನು ಕುರಿತು ಬರೆಯುವುದು ಹೇಗೆ? ಪ್ರಪಂಚದ ಎಲ್ಲಾ ಸಮಾಜ ಸಂಸ್ಕೃತಿಗಳೂ ಬಹು ದೊಡ್ಡ ಸ್ಥಾನ ಕೊಟ್ಟ, ತಾಯಿಯೆಂದರೆ ದೇವರೆನ್ನುವ ಪೂರ್ವ ಕಲ್ಪನೆಯ ಭಾರ ಹೊತ್ತಿರುವ 'ತಾಯಿ' ಎನ್ನುವ ವಸ್ತುವಿನ ಕುರಿತು ಬರೆಯುವ ಸವಾಲನ್ನು ಎದುರಿಸುವುದು ಹೇಗೆ' ಎಂಬ ಅತಿ ಸೂಕ್ಷ್ಮವಾದ, ಅತಿ ಗಹನವಾದ ಪ್ರಶ್ನೆಯನ್ನು ಕೇಳುತ್ತಲೇ ಪ್ರಾರಂಭವಾಗುತ್ತದೆ ಈ ಪುಸ್ತಕ. ಓದಿ ಮುಗಿಸಿದ ಬಳಿಕ ನಿಜಕ್ಕೂ ಎಷ್ಟೆಲ್ಲಾ ಜನರಿಗೆ ಎಷ್ಟೆಲ್ಲಾ ಬಗೆಯಲ್ಲಿ ಏನೆಲ್ಲಾ ಕೊಟ್ಟು ಪೊರೆದು 'ಹಲವು ಮಕ್ಕಳ ತಾಯಿ' ಎನಿಸಿದ ಸರಸ್ವತಿಯವರನ್ನು ಜೊತೆಗೇ ಇಂತಹ ಇನ್ನೂ ಹಲವು ಉದಾತ್ತ ವ್ಯಕ್ತಿತ್ವಗಳನ್ನು ಪರಿಚಯಿಸಿಕೊಂಡ ಸಂತೋಷ ಓದುಗರಿಗೆ ದಕ್ಕುತ್ತದೆ. ಈ ಎಲ್ಲಾ ನೆನಪುಗಳ ಪ್ರತಿಬಿಂಬದಂತೆ ಪುಸ್ತಕದ ಕಡೆಯಲ್ಲಿರುವ ಚಿತ್ರಗಳ ಸಂಗ್ರಹ, ಅದರಲ್ಲೂ ಕಪ್ಪು ಬಿಳುಪಿನ ಚಿತ್ರಗಳು ಈ ಪುಸ್ತಕವನ್ನು ಇನ್ನಷ್ಟು ಆಪ್ತವೆನಿಸುವಂತೆ ಮಾಡಿವೆ. ಹೀಗೆ ಪ್ರತಿ ಮನೆಯಲ್ಲೂ, ಪ್ರತಿ ಕುಟುಂಬದಲ್ಲೂ ಆ ಕುಟುಂಬಕ್ಕೆ ಸಂಬಂಧಿಸಿದ, ಆಯಾ ಕಾಲ, ಜೀವನ, ವ್ಯಕ್ತಿತ್ವಗಳನ್ನು ಪರಿಚಯಿಸುವ ಪುಸ್ತಕಗಳು ಇದ್ದರೆಷ್ಟು ಚೆಂದ ಎನ್ನುಸುವಂತೆ ಮಾಡುತ್ತದೆ ಈ ಪುಸ್ತಕ.

■

# ಬೆಳಕು ತೋರಿದ ಪಥದಲ್ಲಿ ನಡೆ

**–ಶ್ರೀವತ್ಸ ಜೋಶಿ**

ಅಮೆರಿಕನ್ನಡಿಗರಲ್ಲಿ ಕನ್ನಡ ಸಾಹಿತ್ಯದ ಬಗೆಗೆ ಅಭಿರುಚಿ–ಒಲವುಗಳನ್ನು ಹೆಚ್ಚಿಸುತ್ತಲೇ, ಸಾಹಿತ್ಯಕೃಷಿಗೂ ಉತ್ತೇಜನ ನೀಡಿದವರು ಎಚ್. ವೈ. ರಾಜಗೋಪಾಲ್. ಅವರ ಕಲ್ಪನೆಯ ಕೂಸು 'ಕನ್ನಡ ಸಾಹಿತ್ಯ ರಂಗ' ಈಗ ಹದಿಹರೆಯದ್ದಾಗಿದ್ದು ಅತ್ಯಂತ ಉತ್ಸುಕ ರೀತಿಯಲ್ಲೇ ಮುನ್ನಡೆಯುತ್ತಿದೆ ಎನ್ನುವುದು ನಮಗೆಲ್ಲರಿಗೂ ಅಭಿಮಾನದ ಸಂಗತಿ.

ಕನ್ನಡ ಸಾಹಿತ್ಯ ರಂಗ ಸಂಸ್ಥೆಯು ಒಂದು ನದಿ ಇದ್ದಂತೆ ಎಂದು ಪರಿಗಣಿಸಿದರೆ, ಅದನ್ನು ಸೇರುವ ಕಿರು ತೊರೆಗಳು, ಚಿಕ್ಕಚಿಕ್ಕ ಉಪನದಿಗಳು ಅಮೆರಿಕದ ವಿವಿಧ ನಗರಗಳಲ್ಲಿ ಹರಿಯುತ್ತಿವೆ ಎಂಬ ಸಂಗತಿಯೂ ಗಮನಾರ್ಹವಾದದ್ದೇ ಮತ್ತು ಅಭಿಮಾನ ಪಡುವಂಥದ್ದೇ. ಸ್ವತಃ ರಾಜಗೋಪಾಲ್ ಅವರೇ, ಫಿಲಡೆಲ್ಫಿಯಾ ಪ್ರದೇಶದಲ್ಲಿ 'ಪ್ರಸ್ತಾಪ' ಎಂಬ ಅಂಥದೊಂದು ಚಿಕ್ಕ ತೊರೆಯ ಉದ್ಭವಕ್ಕೆ ಕಾರಣರಾದವರು, ಕೈಹಿಡಿದು ನಡೆಸಿದವರು. ಲಾಸ್ ಏಂಜಲೀಸ್ ಪ್ರದೇಶದ 'ಸಾಹಿತ್ಯಾಂಜಲಿ' ಸಹ ಅಂಥದೇ ಒಂದು ತೊರೆ, ನಾಗ ಐತಾಳರ ಸಮರ್ಥ ಕಾರ್ಯಶೀಲತೆಯಿಂದ ಹುಟ್ಟಿಕೊಂಡದ್ದು.

ಇದೀಗ ಹೊಸದಾಗಿ ಹುಟ್ಟಿಕೊಂಡಿರುವ ಇಂಥದೊಂದು ಕಿರುತೊರೆಯನ್ನು ನೋಡುವ, ಅದರ ಚಟುವಟಿಕೆಗಳಲ್ಲಿ ಭಾಗವಹಿಸುವ ಅವಕಾಶ ಈ ವರ್ಷದ (೨೦೧೯)



ಜನವರಿ ಮೊದಲ ವಾರದಲ್ಲಿ ನನಗೆ ಒದಗಿಬಂದಿತ್ತು. ಅದು, ಟೆಕ್ಸಸ್ ಸಂಸ್ಥಾನದ ಡಲ್ಲಾಸ್ ನಗರದಲ್ಲಿ ಕನ್ನಡ ಸಾಹಿತ್ಯಾಸಕ್ತ ಸ್ನೇಹಿತರೊಂದಿಷ್ಟು ಜನರು ಸೇರಿ ರಚಿಸಿಕೊಂಡಿರುವ 'ಸಾಹಿತ್ಯ ಗೋಷ್ಠಿ'. ಡಲ್ಲಾಸ್ ನಗರಕ್ಕೆ ಮೂರ್ನಾಲ್ಕು ವರ್ಷಗಳಿಂದೀಚೆಗಷ್ಟೇ ಬಂದು ನೆಲೆಸಿರುವ (ಈ ಮೊದಲು ಹವಾಯಿ ದ್ವೀಪವಾಸಿಯಾಗಿದ್ದ) ವೈದ್ಯ ದಂಪತಿ ಡಾ. ಪ್ರಕಾಶ ಕಬ್ಬೂರ ಮತ್ತು ಡಾ. ಸುಮನಾ ಕಬ್ಬೂರ ಈ ಗೋಷ್ಠಿಯ ಅಧ್ವರ್ಯುಗಳು. ಕನ್ನಡ ಸಾಹಿತ್ಯದಲ್ಲಿ ಆಸಕ್ತಿಯುಳ್ಳವರನ್ನು ಸೇರಿಸಿಕೊಂಡು, ಮುಖ್ಯವಾಗಿ ಎರಡನೆಯ ತಲೆಮಾರಿನ ಅಮೆರಿಕನ್ನಡಿಗ ಮಕ್ಕಳಿಗೂ ಕನ್ನಡ ಸಾಹಿತ್ಯದ ಘಮ ಪಸರಿಸುವ ನಿಟ್ಟಿನಲ್ಲಿ ವಿನೂತನ ಕಾರ್ಯಕ್ರಮಗಳನ್ನು ರೂಪಿಸಿಕೊಂಡು ಇವರು ಒಳ್ಳೆಯ ಕೆಲಸ ಮಾಡುತ್ತಿದ್ದಾರೆ. ತಿಂಗಳಿಗೊಮ್ಮೆ ಅಥವಾ ಎರಡು ತಿಂಗಳುಗಳಿಗೊಮ್ಮೆ ಹಮ್ಮಿಕೊಳ್ಳುವ ಸಾಹಿತ್ಯಾವಲೋಕನ ಕಾರ್ಯಕ್ರಮಗಳಲ್ಲಿ ಕಳೆದೆರಡು ವರ್ಷಗಳಲ್ಲಿ ಹಳಗನ್ನಡ ಸಾಹಿತ್ಯದಿಂದ ಆರಂಭಿಸಿ ಇದೀಗ ನಡುಗನ್ನಡ ಕಾಲದ ವಚನಸಾಹಿತ್ಯದವರೆಗೆ ತಲುಪಿದ್ದಾರೆ.

ಈ ವರ್ಷದ ಜನವರಿ ೪ ಮತ್ತು ೫ರಂದು ನಡೆದ ಸಾಹಿತ್ಯಗೋಷ್ಠಿ ಕಾರ್ಯಕ್ರಮದಲ್ಲಿ ವಚನಸಾಹಿತ್ಯದ ಬಗ್ಗೆ ಮತ್ತಷ್ಟು ಮಂಥನ ನಡೆಯಿತು. ಮೊದಲ ದಿನ ಡಾ. ಕಬ್ಬೂರ ದಂಪತಿಯ ಮನೆಯಲ್ಲೇ ಕಾರ್ಯಕ್ರಮ. ಎರಡನೆಯ ದಿನದ್ದು ಸುಮಾರು ನೂರಕ್ಕಿಂತ ಹೆಚ್ಚು ಜನರು ಭಾಗವಹಿಸಿದ್ದ ದೊಡ್ಡ ಸಭೆ, ಅಲ್ಲಿನ ಸಮುದಾಯ ಭವನವೊಂದರಲ್ಲಿ ನಡೆದದ್ದು. ನ್ಯೂಜೆರ್ಸಿಯಿಂದ ಬಂದಿದ್ದ ಡಾ. ಎಂ. ಜಿ. ಪ್ರಸಾದ್ ಅವರಿಂದ ವಚನಸಾಹಿತ್ಯವನ್ನು ಕುರಿತು ವಿದ್ವತ್ಪೂರ್ಣ ಉಪನ್ಯಾಸಗಳು ಎರಡೂ ದಿನ. ನಾನು ಮೊದಲ ದಿನದ ಕಾರ್ಯಕ್ರಮದಲ್ಲಿ ದಿ. ಎಚ್. ವೈ. ರಾಜಗೋಪಾಲ್ ಅವರನ್ನು ಸ್ಮರಿಸುವ ಮತ್ತು ಸಾಹಿತ್ಯಗೋಷ್ಠಿಯ ಸದಸ್ಯರಿಗೆ ರಾಜಗೋಪಾಲ್ ಅವರ ಬಗ್ಗೆ ತಿಳಿಸುವ ಸಂದರ್ಭೋಚಿತ ಉದ್ದೇಶದಿಂದ, ರಾಜಗೋಪಾಲ್ 'ಅವರವರ ಭಕುತಿಗೆ' ಉದ್ಗ್ರಂಥಕ್ಕೆ (ಕ.ಸಾ.ರಂ. ಪ್ರಕಟಣೆ ೨೦೧೭) ಬರೆದಿದ್ದ 'ಬಸವಣ್ಣ - ಒಂದು ಬೆರಗು' ವೈಚಾರಿಕ ಪ್ರಬಂಧದಿಂದ ಕೆಲ ಭಾಗಗಳನ್ನು ಓದಿ ಹೇಳಿದೆ. ವಚನಸಾಹಿತ್ಯದ ಥೀಮ್‌ಗೆ ಸರಿಹೊಂದುವಂತೆಯೇ ಆ ಸಾಮಗ್ರಿ ಇದ್ದದ್ದು ಒಂದು ಕಾರಣವಾದರೆ, ಮುಖ್ಯವಾಗಿ ರಾಜಗೋಪಾಲ್ ಅವರ ಚಿಂತನೆಗಳ ಹೊಳಹುಗಳನ್ನು, ಬರವಣಿಗೆಯ ಶೈಲಿಯನ್ನು, ಬರಹದಲ್ಲೂ ಪರೋಕ್ಷವಾಗಿ ಕಂಡುಬರುವ ಅವರ ಸರಳ ನೇರ ವ್ಯಕ್ತಿತ್ವವನ್ನು ಅಲ್ಲಿನವರಿಗೆ ಪರಿಚಯಿಸುವುದು ನನ್ನ ಉದ್ದೇಶವಾಗಿತ್ತು. ಅದು ಬಹಳಷ್ಟು ಮಟ್ಟಿಗೆ ಸಫಲವಾಯಿತೆಂದು ಅಭಿಮಾನದಿಂದ ಹೇಳಬಲ್ಲೆ. ಬಹುಶಃ ರಾಜಗೋಪಾಲ್ ಅವರ ವ್ಯಕ್ತಿತ್ವದ ಶಕ್ತಿಯೇ ಅದು. ಅವರನ್ನು ಮುಖತಃ ಭೇಟಿಯಾಗದಿರುವವರೂ ಅವರ ಕೃತಿಗಳ ಮೂಲಕ ಅವರನ್ನರಿಯಬಹುದು!

ಡಲ್ಲಾಸ್‌ನ ಸಾಹಿತ್ಯಗೋಷ್ಠಿಯ ಚಟುವಟಿಕೆಗಳನ್ನು ರಾಜಗೋಪಾಲ್ ಕಣ್ಣಾರೆ ನೋಡಿದ್ದಿದ್ದರೆ ಖಂಡಿತ ಇಷ್ಟಪಟ್ಟು ಉತ್ತೇಜನ ಕೊಡುತ್ತಿದ್ದರು. ಈಗ ಭೌತಿಕವಾಗಿ ಅವರು ನಮ್ಮೊಂದಿಗಿಲ್ಲದಿದ್ದರೂ, ಅವರು ಬೆಳಕು ತೋರಿದ ಪಥದಲ್ಲಿ ಹೆಜ್ಜೆಯಿಡುವವ–ರಿದ್ದಾರೆ ಎಂಬ ಸಂಗತಿಯೇ ಅಭಿಮಾನ ಮೂಡಿಸುವಂಥದ್ದು. ಕನ್ನಡ ಸಾಹಿತ್ಯದ ಘಮಲನ್ನು ಪಸರಿಸುವ ಈ ಕಿರುತೊರೆಗಳೆಲ್ಲ ಕನ್ನಡ ಸಾಹಿತ್ಯ ರಂಗವೆಂಬ ನದಿಯನ್ನು ಸೇರಿ ಅದು ಮಹಾನದಿಯಾಗಿ ಹರಿದು ಸಾರಸ್ವತ ಸಮುದ್ರವನ್ನು ಸೇರುವ ಕಲ್ಪನೆ, ರಾಜಗೋಪಾಲ್ ಅವರಿಗೆ ನಾವೆಲ್ಲರೂ ಸಲ್ಲಿಸುವ ಚಿರಸ್ಮರಣೆ.



# ಎಚ್. ವೈ. ರಾಜಗೋಪಾಲ್ – ಒಂದು ನೆನಪು

**–ಜ್ಯೋತಿ ಜಯಕುಮಾರ್**

ನಾನು ಲೇಖಕಿಯಲ್ಲ. ಕೇವಲ ಸಾಹಿತ್ಯಾಸಕ್ತಳು ಎನ್ನಬಹುದಷ್ಟೇ. ರಾಜಗೋಪಾಲ್ ರವರವನ್ನು ಹತ್ತಿರದಿಂದ ಕಂಡವಳೂ ಅಲ್ಲ. ಕೇವಲ ಒಂದೇ ಬಾರಿ ಮುಖತಃ ನೋಡಿದವಳು. ೨೦೦೯ರಲ್ಲಿ ಮೇರಿಲ್ಯಾಂಡಿನಲ್ಲಿ ನಡೆದ ವಸಂತ ಸಾಹಿತ್ಯೋತ್ಸವದ ಪೂರ್ವ ತಯಾರಿಗೆಂದು ಮೈ. ಶ್ರೀ. ನಟರಾಜರವರ ಮನೆಯಲ್ಲಿ ಸಾಹಿತ್ಯೋತ್ಸವದ ಆಯೋಜಕರೆಲ್ಲ ಸೇರಿದ್ದ ಸಂದರ್ಭ. ಆಗ ನಾನು ನಾರ್ತ್ ವರ್ಜೀನಿಯದಲ್ಲಿದ್ದೆ. ನನಗೆ ಸಾಹಿತ್ಯರಂಗದ ಬಗ್ಗೆಯಾಗಲೀ, ರಾಜಗೋಪಾಲರ ಬಗ್ಗೆಯಾಗಲೀ ಏನೂ ತಿಳಿದಿರಲಿಲ್ಲ. ಸಾಹಿತ್ಯದ ಬಗ್ಗೆ ನನಗಿದ್ದ ಒಲವನ್ನು ಚೆನ್ನಾಗಿ ತಿಳಿದಿದ್ದ ಆತ್ಮೀಯ ಶ್ರೀವತ್ಸ ಜೋಶಿಯವರು, ಕನ್ನಡ ಸಾಹಿತ್ಯರಂಗದ ಬಗ್ಗೆ ತಿಳಿದುಕೊಳ್ಳಬಹುದು ಮತ್ತು ಮುಂದೆ ಭಾಗವಹಿಸಬಹುದು ಎಂದು ಈ ಕಾರ್ಯಕ್ರಮಕ್ಕೆ ಬರುವಂತೆ ಆಹ್ವಾನಿಸಿದ್ದರು, ಹಾಗಾಗಿ ಹೋಗಿದ್ದೆ. ಅಲ್ಲಿ ನಟರಾಜ ದಂಪತಿಗಳ ಆದರಪೂರ್ವಕ ಉಪಚಾರವಿತ್ತು. (ಆ ದಿನ ನಟರಾಜ ಅವರ ಪತ್ನಿ ಮಾಡಿದ ಇಡ್ಲಿ, ಸಾಂಬಾರಿನ ರುಚಿ ಇಂದಿಗೂ ನಾನು ಮರೆತಿಲ್ಲ!)

ಕನ್ನಡ ಸಾಹಿತ್ಯರಂಗದ ಜೊತೆ ತೊಡಗಿಸಿಕೊಂಡವರು ಒಂದೆಡೆ ಸೇರಿದ್ದರಿಂದ ಆತ್ಮೀಯ ವಾತಾವರಣವಿತ್ತು. ಅಲ್ಲಿ ರಾಜಗೋಪಾಲ್ ಅವರನ್ನು ಮೊದಲ ಬಾರಿ ಕಂಡಿದ್ದು. ಸಪೂರ ನಿಲುವು, ನುಗುಮೊಗ ಮೃದು ಮಾತು, ಸಾತ್ವಿಕತೆ ಚಿಮ್ಮುವಂತಿದ್ದ ಅವರನ್ನು ನೋಡುವಾಗಲೇ ಗೌರವದ ಭಾವನೆ ಮೂಡುತ್ತಿತ್ತು. ನನಗೆ ಆ ವಾತಾವರಣ

ಹೊಸದು, ಅಲ್ಲಿ ಸೇರಿದ್ದವರ ಹೃದಯ ಶ್ರೀಮಂತಿಕೆಯನ್ನು, ಅವರೆಲ್ಲರ ಉತ್ಸಾಹವನ್ನು ಮನತುಂಬಿ ಆಸ್ವಾದಿಸುತ್ತಿದ್ದೆ, ನನ್ನೊಳಗೆ ತುಂಬಿಕೊಳ್ಳುತ್ತಿದ್ದೆ. ಕಾರ್ಯಕ್ರಮದ ರೂವಾರಿಗಳು ಸಂಬಂಧಪಟ್ಟ ವಿವರಗಳನ್ನು ಕುರಿತು ಚರ್ಚಿಸುತ್ತಿದ್ದರು. ಆ ಸಮಯದಲ್ಲಿ ರಾಜಗೋಪಾಲ್‌ರವರು ಬಹುಶಃ ಕಾರ್ಯಕ್ರಮದ ವಿವರಣೆ ಕೊಡುವುದಕ್ಕಾಗಿ ಮಾತನಾಡಲು ಪ್ರಾರಂಭಿಸಿದರು. ಅವರ ಮಾತನ್ನು ಕೇಳುತ್ತಿದ್ದಂತೆ ನನಗನ್ನಿಸಿದ್ದು 'ಭೂಮಿ ತೂಕದ ಮಾತು' ಎಂದರೆ ಇದೇ ಎಂದು. ಅವರ ಭಾಷೆ ಶ್ರೀಮಂತವಾದದ್ದು. ಆದರೆ ಪದಗಳಲ್ಲಿ ಅಷ್ಟೇ ಸರಳತೆ ಇತ್ತು. ಕೆಲವೇ ಮಾತುಗಳಲ್ಲಿ ಅತ್ಯಂತ ನಿಖರವಾಗಿ ಅಷ್ಟೇ ಸಮಗ್ರವಾಗಿ ಚೊಕ್ಕದಾಗಿ ಕನ್ನಡ ಸಾಹಿತ್ಯ ರಂಗದ ಹುಟ್ಟು, ಬೆಳವಣಿಗೆ ಹಾಗೂ ಮುಂಬರಲಿದ್ದ ವಸಂತೋತ್ಸವದ ರೂಪುರೇಷೆಗಳನ್ನು ಬಹಳ ಅಚ್ಚುಕಟ್ಟಾಗಿ ಹೇಳಿದರೆಂದು ನೆನಪು. ನಾನಂತೂ ಕಟ್ಟಿಹಾಕಿ ಕೂತವಳಂತೆ ಅವರ ಮಾತು ಕೇಳಿದ್ದೆ. ತನ್ಮಯಳಾಗಿದ್ದೆ. ಬಹುಶಃ ಇಷ್ಟು ಪರಿಪಕ್ವವಾಗಿ, ಸ್ವಚ್ಛವಾಗಿ, ಒಂದು ಮಾತೂ ಹೆಚ್ಚಿಲ್ಲದಂತೆ ಕಡಿಮೆಯಿಲ್ಲದಂತೆ, ಕೇಳುವವರ ಮನದಲ್ಲಿ ನಿಲ್ಲುವಂತೆ ಮತ್ತು ಅಷ್ಟೇ ಆಪ್ತ ಎನ್ನಿಸುವಂತೆ ಮಾತನಾಡುವವರನ್ನು ನಾನು ಕಂಡಿದ್ದು ಬೆರಳೆಣಿಕೆಯಷ್ಟೇ ಎನ್ನಬಹುದು. ಅದಕ್ಕೆಂದೇ ಏನೋ ಹತ್ತು ವರ್ಷಗಳೇ ಕಳೆದರೂ ಆ ನೆನಪು ಹಾಗೆಯೇ ಇದೆ. ಅವರ ಮಾತಿನಲ್ಲೇ ಅವರ ವ್ಯಕ್ತಿತ್ವವೂ ಪ್ರತಿಫಲಿಸುತ್ತಿತ್ತು ಎಂದರೆ ತಪ್ಪಾಗದು.

ರಾಜಗೋಪಾಲ್‌ರವರ ಬಗ್ಗೆ ಮಾತಾಡುವಾಗ ಅವರ ಪತ್ನಿ ವಿಮಲಾರನ್ನು ನೆನೆಯದೇ ಇದ್ದರೆ ಅದು ಅಪೂರ್ಣವೆನ್ನಿಸುತ್ತದೆ. ಆಕೆ ಅವರಿಗೆ ನಿಜವಾದ ಅರ್ಥದಲ್ಲಿ 'ಸಹಧರ್ಮಿಣಿ'. ಆ ದಿನ ಅವರೂ ಸಹ ಕಾರ್ಯಕ್ರಮಕ್ಕೆ ಬಂದಿದ್ದರು. ಯಾರ ಪರಿಚಯವೂ ಅಷ್ಟಾಗಿರಲಿಲ್ಲವಾದ್ದರಿಂದ ನಾನು ಒಬ್ಬಳೇ ಕುಳಿತಿದ್ದಾಗ ತಾವೇ ನನ್ನ ಬಳಿಗೆ ಬಂದು 'ನಮಸ್ಕಾರ. ನಾನು ವಿಮಲಾ ರಾಜಗೋಪಾಲ್' ಎಂದು ಪರಿಚಯ ಮಾಡಿಕೊಂಡರು. ಮಾತುಕತೆ ಶುರು ಮಾಡಿದ ಕೆಲವೇ ನಿಮಿಷಗಳಲ್ಲಿ ನಾನು ಅವರೊಂದಿಗೆ ಎಷ್ಟೋ ವರ್ಷಗಳ ಅನುಬಂಧವಿರುವವಳಂತೆ ಹರಟಲು ಆರಂಭಿಸಿದ್ದೆ. ಅವರ ಪ್ರಭೆಯೇ ಅಂಥದ್ದು! ಆಕೆಯಂತೂ ಅವರ ಬಗ್ಗೆ, ಅವರ ತಂದೆಯ ಬಗ್ಗೆ, ಅವರ ಬಂಧುಗಳ ಬಗ್ಗೆಯೆಲ್ಲಾ ತುಂಬು ಪ್ರೀತಿಯಿಂದ ಅಭಿಮಾನದಿಂದ ಮಾತನಾಡುತ್ತಿದ್ದರು. ತುಂಬು ಹೃದಯದ, ವಾತ್ಸಲ್ಯಮಯಿ ಆಕೆ. ಅಂದೇ ಮೊದಲ ಬಾರಿಗೆ ಪರಿಚಯವಾಗಿದ್ದರೂ ನನ್ನ ಮಗನ ಬಗ್ಗೆ ಎಷ್ಟೊಂದು ಅಕ್ಕರೆಯಿಂದ ಕೇಳಿ ತಿಳಿದುಕೊಂಡರು! ಅವರ ಸ್ನೇಹ ಮತ್ತು ಸರಳತೆಯನ್ನು ನೆನಪಿಸಿಕೊಂಡಾಗಲೆಲ್ಲಾ ನನ್ನ ಮನಸ್ಸು ಪ್ರಫುಲ್ಲವಾಗುತ್ತದೆ. ಒಟ್ಟಿನಲ್ಲಿ ಆ ದಿನ ಅವರಿಬ್ಬರನ್ನೂ ಭೇಟಿ ಮಾಡಿ ಬಂದ ಮೇಲೆ ಮನೆ ತಲುಪುವುವವರೆಗೂ ಅದೇ ಗುಂಗಲ್ಲೇ ಇದ್ದೆ. ನಂತರ ಜೋಶಿಯವರ ಮೂಲಕ ಆಕೆಯ ಸಾಧನೆ, ಪ್ರತಿಭೆಗಳ ತಿಳಿದಾಗ ಇವರಂಥವರೇ 'ತುಂಬಿದ ಕೊಡ ತುಳುಕದು' ಎಂಬ ನಾಣ್ಣುಡಿಗೆ ನಿದರ್ಶನ ಎನ್ನಿಸಿತು. ನಮ್ಮ ಹಳೇ ಮೈಸೂರಿನ ಸಾಂಸ್ಕೃತಿಕ ಪ್ರತಿನಿಧಿಗಳನ್ನು ಭೇಟಿ ಮಾಡಿದಂತೆ ಅನ್ನಿಸಿತ್ತು.



ವಸಂತೋತ್ಸವ ಕಳೆದ ಕೆಲವೇ ದಿನಗಳಲ್ಲಿ ನಾವು ಅನಿವಾರ್ಯ ಕಾರಣಗಳಿಂದ ಮತ್ತೆ ಸ್ವಲ್ಪ ವರ್ಷಗಳ ಮಟ್ಟಿಗೆ ಬೆಂಗಳೂರಿಗೆ ಮರಳಬೇಕಾಯಿತು. ಮತ್ತೆ ಬಂದಿದ್ದು ಒಹಾಯೋಗೆ. ಅಲ್ಲಿ ಲೇಖಕಿ ಮತ್ತು ಸಾಹಿತ್ಯರಂಗದ ಚಟುವಟಿಕೆಗಳಲ್ಲಿ ಬಹಳ ಸಕ್ರಿಯವಾಗಿ ತೊಡಗಿರುವ ಸುಮತಿ ಮುದ್ದೇನಹಳ್ಳಿಯ ಪರಿಚಯವಾಯಿತು. ಸುಮತಿಯ ಒತ್ತಾಸೆಯಿಂದ, ಡಾ. ಗುರುಪ್ರಸಾದ್ ಕಾಗಿನೆಲೆ ಅವರು ದೂರವಾಣಿಯಲ್ಲಿ ನಡೆಸಿಕೊಡುತ್ತಿದ್ದ ಬುಕ್ ಕ್ಲಬ್ಬಿಗೆ ಸೇರುವ ಅವಕಾಶ ಸಿಕ್ಕಿತು. ಆ ಕಾರ್ಯಕ್ರಮಗಳಲ್ಲಿ ರಾಜಗೋಪಾಲ್ ದಂಪತಿ ಭಾಗವಹಿಸುತ್ತಿದ್ದರು. ಆಗ ಮತ್ತೆ ರಾಜಗೋಪಾಲ್‌ರವರ ಪ್ರಬುದ್ಧ ವಿಚಾರಾತ್ಮಕ ಅಭಿಪ್ರಾಯಗಳನ್ನು ಆಸಕ್ತಿಯಿಂದ ಆಲಿಸುತ್ತಿದ್ದೆ. ಅವರ ಮಾತು ಮೃದು, ಆದರೆ ವಿಚಾರಗಳು ಅಷ್ಟೇ ನಿಖರ, ವಸ್ತುನಿಷ್ಠ, ಸ್ಪಷ್ಟ, ಗಹನವೂ ಕೂಡ. ಅದರಲ್ಲೂ ಶಿವರಾಮ ಕಾರಂತರ 'ಮೂಕಜ್ಜಿಯ ಕನಸುಗಳು' ಬಗ್ಗೆ ಅವರ ಮಾತು ಕೇಳಿ ನನಗೆ ಆ ಕೃತಿಯನ್ನು ಹೊಸದೇ ರೀತಿಯಲ್ಲಿ ಅರ್ಥೈಸಿಕೊಳ್ಳಲಿಕ್ಕೆ ಸಹಾಯವಾಯಿತು. ವಿಮಲಾರವರದು ಅದೇ ವಾತ್ಸಲ್ಯ, ಉತ್ಸಾಹ. ಕೆಲವೊಮ್ಮೆ ಚರ್ಚೆ ನಡೆಯುತ್ತಿದ್ದ ಪುಸ್ತಕಗಳ ಬಗ್ಗೆ ನನಗೆ ತಿಳಿದಂತೆ ನನಗನ್ನಿಸಿದ್ದನ್ನು ಹೇಳಿದಾಗ ವಿಮಲಾ ನನ್ನ ಹೆಸರು ಕೇಳಿ 'ತುಂಬಾ ಚೆನ್ನಾಗಿ ಹೇಳಿದಿರಿ' ಎಂದು ಪ್ರೋತ್ಸಾಹಿಸುತ್ತಿದ್ದರು.

ಅರವತ್ತರ ದಶಕದಲ್ಲೇ ಅಮೇರಿಕಾದಲ್ಲಿ ನೆಲೆಗೊಂಡ ರಾಜಗೋಪಾಲರು, ಅವರೇ ಹೇಳುವಂತೆ ಸಾಹಿತ್ಯ ಚಿಂತನೆಯಂತಹ ಗಂಭೀರ ಮನೋವ್ಯಾಪಾರಕ್ಕೆ ವೇದಿಕೆ ಕಟ್ಟುವ ಕನಸು ಕಂಡರು, ಸಮಾನ ಮನಸ್ಕರೊಂದಿಗೆ ಅದನ್ನು ನನಸಾಗಿಸುವ ಸಾಹಸವನ್ನೂ ಮಾಡಿದರು. ಅದು ಯಶಸ್ವಿಯಾಗಿ ಬೆಳೆದದ್ದನ್ನು ಕಂಡು ಸಾರ್ಥಕತೆಯನ್ನೂ ಅನುಭವಿಸಿದರು. ಅವರ ತುಂಬು ಜೀವನದಲ್ಲಿ ಭಗವಂತ ಇದನ್ನು ಕರುಣಿಸಿದ ಎಂಬುದು ಸಮಾಧಾನಕರ ಅಂಶ.

ಪರಿಚಯ ಒಡನಾಟಗಳೊಂದೂ ಇಲ್ಲದಿದ್ದರೂ ಅವರು ಇನ್ನಿಲ್ಲವೆಂಬ ಸುದ್ದಿ ತಿಳಿದು ಬಹಳ ನೋವಾಯಿತು. ನನಗೇ ಏನನ್ನೋ ಕಳೆದುಕೊಂಡ ಅನುಭವವಾಯಿತು ಎಂದ ಮೇಲೆ ಅವರ ಪ್ರೀತಿಪಾತ್ರರ, ಬಂಧುಗಳ, ಅವರ ಗೆಳೆತನದ ಸವಿಯನ್ನುಂಡವರ, ಅವರ ಮಾರ್ಗದರ್ಶನದಲ್ಲಿ ಕನ್ನಡ ಸಾಹಿತ್ಯ ರಂಗದ ಬಳಗಕ್ಕೆ ಸೇರಿ ಸಾರ್ಥಕತೆಯನ್ನು ಕಂಡುಕೊಂಡವರೆಲ್ಲರ ನೋವಿನ ಆಳ, ಅನಾಥ ಪ್ರಜ್ಞೆಯ ಅಗಾಧತೆಯನ್ನು ಊಹಿಸುವುದು ಕಷ್ಟವೇನಲ್ಲ. ರಾಜಗೋಪಾಲರು ಭೌತಿಕವಾಗಿ ದೂರವಾಗಿದ್ದರೂ ಅವರ ಅದಮ್ಯ ಚೇತನ ಸಾಹಿತ್ಯ ರಂಗದ ಸದಸ್ಯರನ್ನು ಮತ್ತು ಅವರ ಕುಟುಂಬದ ಸದಸ್ಯರನ್ನೆಲ್ಲಾ ಅವರವರ ಕೈಂಕರ್ಯಗಳಲ್ಲಿ ದಾರಿದೀಪವಾಗಿ ಬೆಳಗುತ್ತಿರುತ್ತದೆ ಎಂಬುದು ನನ್ನ ನಂಬಿಕೆ.

■



# ಅಮೆರಿಕದಲ್ಲಿ ಕನ್ನಡದ ದೀಪಧಾರಿಗಳು

## ಡಾ. ಎಚ್. ವೈ. ರಾಜಗೋಪಾಲ್ ಮತ್ತು ವಿಮಲಾ ರಾಜಗೋಪಾಲ್ ಅವರೊಂದಿಗೆ ಸಂದರ್ಶನ

**ಸಂದರ್ಶಕಿ: ತ್ರಿವೇಣಿ ಶ್ರೀನಿವಾಸರಾವ್**

ಶ್ರೀ ಎಚ್. ವೈ. ರಾಜಗೋಪಾಲ್ ಅವರು ಹಿರಿಯ ಅಮೆರಿಕನ್ನಡಿಗರು. ಅಮೆರಿಕದಲ್ಲಿ ಕನ್ನಡದ ಕೆಲಸ ಮಾಡಿರುವವರಲ್ಲಿ ಪ್ರಮುಖರು. ಸಾಹಿತ್ಯಕ್ಕಾಗಿ ಮೀಸಲಾಗಿರುವ 'ಕನ್ನಡ ಸಾಹಿತ್ಯ ರಂಗ' ರಾಷ್ಟ್ರೀಯ ಸಂಸ್ಥೆಯ ಸ್ಥಾಪಕ ಸದಸ್ಯರಲ್ಲಿ ಒಬ್ಬರು. ವಿಮಲಾ ರಾಜಗೋಪಾಲ್ ಹೆಸರಾಂತ ಜಾನಪದ ಗಾಯಕಿ ಮತ್ತು ಲೇಖಕಿ. ವಿದ್ಯಾರಣ್ಯ ಕನ್ನಡ ಕೂಟದ 'ಸಂಗಮ' ಸಂಚಿಕೆಗಾಗಿ, ಇವರಿಬ್ಬರೊಂದಿಗೆ ನಾನು ನಡೆಸಿದ ಮಾತುಕತೆ ಇಲ್ಲಿದೆ:

**೧. ಅಮೆರಿಕಕ್ಕೆ ನೀವು ಬಂದಾಗ ಇಲ್ಲಿದ್ದ ಕನ್ನಡದ ಸ್ಥಿತಿಗತಿ ಹೇಗಿತ್ತು? ಅಂದಿಗೂ ಇಂದಿಗೂ ಹೋಲಿಸಿ ನೋಡಿದಾಗ ಹೇಗನ್ನಿಸುತ್ತದೆ?**

ನಾನು ೧೯೬೬ರಲ್ಲಿ ಅಮೆರಿಕಕ್ಕೆ ಬಂದಿದ್ದು, ಕಳೆದ ಸೆಪ್ಟೆಂಬರಿಗೆ ಐವತ್ತೊಂದು ವರ್ಷಗಳು ತುಂಬಿದವು. ಆಗ ನಾನಿದ್ದ ಪೆನ್ಸಿಲ್ವೇನಿಯಾ ಸ್ಟೇಟ್ ಯೂನಿವರ್ಸಿಟಿಯಲ್ಲಿ



ಸುಮಾರು ನೂರು ಜನ ಭಾರತೀಯರಿದ್ದರು – ವಿದ್ಯಾರ್ಥಿಗಳು, ಅಧ್ಯಾಪಕರು, ಅವರ ಕುಟುಂಬಗಳು – ಎಲ್ಲಾ ಸೇರಿ. ಇಂಡಿಯನ್ ಸ್ಟೂಡೆಂಟ್ಸ್ ಅಸೋಷಿಯೇಷನ್ ಎಂಬ ಒಂದೇ ಒಂದು ಸಂಸ್ಥೆ ನಮ್ಮೆಲ್ಲರಿಗೂ ಆಸರೆಯಾಗಿತ್ತು. ಅದರಲ್ಲಿ ಕನ್ನಡಿಗರು ಮಾತ್ರವಲ್ಲದೆ, ಇತರ ಭಾಷೆಯಾಡುವ ಭಾರತೀಯರೂ ಇದ್ದರು. ಭಾರತೀಯರ ಜೊತೆಗೆ ಕೆಲವು ಪಾಕಿಸ್ತಾನೀಯರು ಇದ್ದರು. ಸಂವಹನಕ್ಕೆ ಅನುಕೂಲವಾಗುವುದೆಂದು ಕಾರ್ಯಕ್ರಮಗಳು ಇಂಗ್ಲೀಷಿನಲ್ಲಿಯೇ ನಡೆಯುತ್ತಿದ್ದವು. ೧೯೬೫ರಲ್ಲಿ ಓದು ಮುಗಿಸಿ ಫಿಲಡೆಲ್ಫಿಯ ಸಮೀಪಕ್ಕೆ ಬಂದೆ. ಇಲ್ಲಿನ ಪರಿಸ್ಥಿತಿಯೂ ಹಾಗೆಯೇ ಇತ್ತು, ಯೂನಿವರ್ಸಿಟಿ ಆಫ್ ಪೆನ್ಸಿಲ್ವೇನಿಯಾದಲ್ಲಿದ್ದ ಇಂಡಿಯನ್ ಸ್ಟೂಡೆಂಟ್ಸ್ ಅಸೋಸಿಯೇಷನ್ ಒಂದೇ. ಎಪ್ಪತ್ತರ ದಶಕದಲ್ಲಿ ಭಾರತೀಯರ ವಲಸೆ ಹೆಚ್ಚಾಗಿ, ಪ್ರಾಂತೀಯ ಭಾಷೆಗಳು ತಮ್ಮದೇ ಸಂಸ್ಥೆಗಳನ್ನು ಪ್ರಾರಂಭಿಸಿದವು.

ಮೊತ್ತಮೊದಲಿಗೆ ಮಿಷಿಗನ್ನಿನಲ್ಲಿ 'ಪಂಪ' ಕನ್ನಡ ಕೂಟವು ಸ್ಥಾಪನೆಯಾಯಿತು. ಅದಾದ ಮೇಲೆ ಕ್ಯಾಲಿಫೋರ್ನಿಯ, ನ್ಯೂಯಾರ್ಕ್, ಫ಼ಿಲಡೆಲ್ಫಿಯ, ವಾಷಿಂಗ್ಟನ್ ಡಿ.ಸಿ. ಇನ್ನಿತರ ಪ್ರದೇಶಗಳಲ್ಲಿ ಕನ್ನಡ ಕೂಟಗಳು ಪ್ರಾರಂಭವಾದವು (ಉದಾ: 'ತ್ರಿವೇಣಿ', 'ಕಾವೇರಿ'). ಆಗ ಪ್ರಾರಂಭವಾದ ಕನ್ನಡ ಕೂಟಗಳು ಇಂದಿಗೂ ಬಹುಮಟ್ಟಿಗೆ ಉತ್ತಮ ರೀತಿಯಿಂದ ನಡೆಯುತ್ತಾ ಬಂದಿವೆ. ಈಗ ಪರಿಸ್ಥಿತಿ ಎಷ್ಟೋ ಉತ್ತಮ. ಅಂತರ್ಜಾಲ, ವಿದ್ಯುನ್ಮಾನ ಮಾಧ್ಯಮಗಳ ಮೂಲಕ ಕನ್ನಡದ ಕೆಲಸಗಳು ಹೆಚ್ಚಿನ ರೀತಿಯಿಂದ ನಡೆಯುತ್ತಾ ಬಂದಿವೆ. ಈ ನವೀನ ಮಾಧ್ಯಮಗಳನ್ನು ಕನ್ನಡ ಭಾಷೆಯನ್ನು ಬೆಳಸುವಲ್ಲಿ ಇನ್ನೂ ಹೆಚ್ಚಾಗಿ ಬಳಸಿಕೊಳ್ಳಬಹುದು. ನಾನು ಗಮನಿಸಿದಂತೆ, ಕನ್ನಡಿಗರು ಯಾಕೋ ಹೆಚ್ಚಾಗಿ ಇಲ್ಲಿಯ ರಾಜಕೀಯದತ್ತ ಆಸಕ್ತಿ ವಹಿಸಿಲ್ಲ. ಉಳಿದಂತೆ, ವೈದ್ಯಕೀಯ, ತಂತ್ರಜ್ಞಾನ ಕ್ಷೇತ್ರದಲ್ಲಿ ಉನ್ನತಿ ಸಾಧಿಸಿದ್ದಾರೆಂದು ನನಗನ್ನಿಸುತ್ತದೆ.

**೨. ಕನ್ನಡ ಪುಸ್ತಕಗಳೇ ಸಿಗದಿದ್ದ ಆ ಕಾಲದಲ್ಲಿ ಸಾಂಸ್ಕೃತಿಕ ಪರಿಸರದಿಂದ ಬಂದಿದ್ದ ನೀವನುಭವಿಸಿದ ತಲ್ಲಣಗಳೇನು?**

ನಾನು ಅಮೆರಿಕಕ್ಕೆ ಬರುವ ಮೊದಲು ಆಂಧ್ರಪ್ರದೇಶದಲ್ಲಿ ಇದ್ದಿದ್ದರಿಂದ ಅಲ್ಲಿಯೂ ಕನ್ನಡದ ಸಂಪರ್ಕದಿಂದ ದೂರವೇ ಇದ್ದೆ. ಆಗ ದೂರವಾಣಿಯೂ ಇರಲಿಲ್ಲ. ಪತ್ರ ವ್ಯವಹಾರವೊಂದೇ ಸಂಪರ್ಕ ಮಾಧ್ಯಮವಾಗಿತ್ತು. ಅಮೆರಿಕಕ್ಕೆ ಬಂದ ನಂತರ ಹೊಸ ಪರಿಸರಕ್ಕೆ ಹೊಂದಿಕೊಳ್ಳುವುದು, ವ್ಯಾಸಂಗ, ವೃತ್ತಿ ಬದುಕಿನ ಸವಾಲುಗಳನ್ನು ಎದುರಿಸುವುದೇ ಮುಖ್ಯವಾದ್ದರಿಂದ ಉಳಿದ ವಿಷಯಗಳತ್ತ ಗಮನ ಹರಿಯುತ್ತಿರಲಿಲ್ಲ. ಆದರೆ ಪಿಎಚ್.ಡಿ. ಮುಗಿದ ನಂತರ ಏನೋ ಕೊರತೆ ಇದೆಯೆಂದು ಅನ್ನಿಸುತ್ತಿತ್ತು.

ಭಾರತದಿಂದ ಬರುವವರು ಪತ್ರಿಕೆ, ಪುಸ್ತಕಗಳನ್ನು ತರುತ್ತಿದ್ದರು. ಕನ್ನಡ ಪುಸ್ತಕಗಳೂ ಈಗಿನಂತೆ ಆಗ ಹೆಚ್ಚಿನ ಪ್ರಮಾಣದಲ್ಲಿ ಪ್ರಕಟವಾಗುತ್ತಿರಲಿಲ್ಲ. ಹಾಗಾಗಿ, ನಾವೇನೋ

ಕಳೆದುಕೊಳ್ಳುತ್ತಿದ್ದೇವೆಂಬ ಭಾವನೆ ಇರಲಿಲ್ಲ. ಆಗ ಎಂ. ಕೆ. ಇಂದಿರಾ ಪ್ರಸಿದ್ಧರಾಗುತ್ತಿದ್ದರು. ಅವರ 'ತುಂಗಭದ್ರ' ಕಾದಂಬರಿಯನ್ನು ಸ್ನೇಹಿತರಾರೋ ತಂದುಕೊಟ್ಟಿದ್ದರು. ಅದನ್ನು ಓದಿ ಬಹಳವೇ ಸಂತೋಷ ಅನುಭವಿಸಿದೆ. ಆ ಸಮಯದಲ್ಲಿ ಅನೇಕ ಉತ್ತಮ ನಾಟಕಗಳು ರಚನೆಯಾಗಿ ರಂಗಭೂಮಿಯಲ್ಲಿ ಹೊಸ ಪ್ರಯೋಗಗಳು ನಡೆಯುತ್ತಿದ್ದವು. ನಾನು ಆ ಸಮಯದಲ್ಲಿ ಇಲ್ಲಿದ್ದಿದ್ದರಿಂದ ಆ ನಾಟಕ ಪ್ರಪಂಚದಿಂದ ದೂರ ಉಳಿದೆನೆಂದು ಅನ್ನಿಸುತ್ತದೆ.

**೩. ನೀವು ಮತ್ತು ಕೆಲವರು (ಹೆಸರುಗಳನ್ನು ಸೇರಿಸಬಹುದು) ಹುಟ್ಟುಹಾಕಿದ ಕನ್ನಡ ಸಾಹಿತ್ಯ ರಂಗ ಇಂದು ಸಾಕಷ್ಟು ಕೆಲಸ ಮಾಡುತ್ತಾ ಹಿರಿದಾಗಿ ಬೆಳೆದಿದೆ. ನಿಮ್ಮ ಉದ್ದೇಶ ಸಾರ್ಥಕವೆನ್ನಿಸುತ್ತಿದೆಯೇ?**

ನನಗೆ ಕನ್ನಡ ಸಾಹಿತ್ಯ ರಂಗದ ಕೆಲಸ ಬಹಳ ತೃಪ್ತಿ, ಸಂತೋಷ ನೀಡಿದೆ. ಇದನ್ನು ಪ್ರಾರಂಭಿಸಿದಾಗ ನಮ್ಮ ಧ್ಯೇಯವೇ ಇತರ ಸಂಸ್ಥೆಗಳಿಗಿಂತ ವಿಭಿನ್ನವಾಗಿತ್ತು. ಕನ್ನಡ ಕೂಟಗಳು ಸದಸ್ಯರಿಗೆ ಮನರಂಜನೆ ಒದಗಿಸುವುದನ್ನೇ ತಮ್ಮ ಗುರಿಯಾಗಿಸಿ-ಕೊಂಡಿವೆ. ಅದೂ ಕೂಡ ಮುಖ್ಯವೇ. ಆದರೆ ಸಾಹಿತ್ಯಿಕ ಚಿಂತನೆ, ಅನುಭವ ಹಂಚಿಕೊಳ್ಳಲು ವೇದಿಕೆ ಇರಲಿಲ್ಲ. ಸಾಹಿತ್ಯದಲ್ಲಿ ಆಸಕ್ತಿ ಇರುವವರು ಯಾವಾಗಲೂ ಅಲ್ಪಸಂಖ್ಯಾತರು. ಅವರ ಆಸಕ್ತಿಯನ್ನು ಪೋಷಿಸುವ ಒಂದು ಸಂಸ್ಥೆಯ ಅಗತ್ಯವಿದೆಯೆಂದು ನಾವು ಮನಗಂಡೆವು. ಅನಿವಾಸಿಗಳ ಅನುಭವಗಳು ಯಾವುದೇ ಉತ್ತಮ ಸಾಹಿತ್ಯಕ್ಕೆ ಒದಗಿಬರುವ ವಸ್ತು. ಆ ಕುರಿತ ಗಂಭೀರ ಚರ್ಚೆ, ಚಿಂತನೆಗಾಗಿ ಒಂದು ಸಂಸ್ಥೆಯನ್ನು ಪ್ರಾರಂಭಿಸಬೇಕೆಂದು ನಮ್ಮ ಯೋಜನೆಯಾಗಿತ್ತು. ಕಸಾರಂ ಈವರೆಗೆ ಹಲವಾರು ಸಮ್ಮೇಳನಗಳನ್ನು ನಡೆಸುತ್ತಾ ಬಂದಿದೆ. ಉತ್ತಮ ಭಾಷಣಗಳು, ಸೂಕ್ತ ರೀತಿಯ ಸಮಯ ನಿರ್ವಹಣೆ, ಇವೆಲ್ಲವೂ ಕನ್ನಡ ಸಾಹಿತ್ಯ ರಂಗದ ಹೆಗ್ಗಳಿಕೆ. ಕನ್ನಡ ಸಾಹಿತ್ಯ ರಂಗ ಪ್ರತಿ ಸಮ್ಮೇಳನದಲ್ಲಿ ಹೊರತರುವ ಪುಸ್ತಕಗಳು ಕರ್ನಾಟಕದ ಸಾಹಿತ್ಯ ವಲಯದಲ್ಲಿಯೂ ಉತ್ತಮ ಪ್ರತಿಕ್ರಿಯೆ ಪಡೆದಿವೆ.

ಆದರೆ, ನನಗೆ ಕಾಣುವ ಒಂದು ಕೊರತೆಯೆಂದರೆ, ಕನ್ನಡ ಸಾಹಿತ್ಯ ರಂಗ ಪ್ರಕಟಿಸುವ ಪುಸ್ತಕಗಳು ಹೆಚ್ಚು ಜನಕ್ಕೆ ತಲುಪಬೇಕು. ಮುಖ್ಯವಾಗಿ ಇಲ್ಲಿರುವ ಕನ್ನಡಿಗರಿಗೆ ಅವು ತಲುಪುವಂತೆ ಮಾಡಬೇಕು.

**೪. ಇಲ್ಲಿ ನಡೆಯುತ್ತಿರುವ ಕನ್ನಡ ಕೆಲಸಗಳ ಬಗ್ಗೆ ತೃಪ್ತಿ ಇದೆಯೇ? ಆಗಬೇಕಾದ ಕೆಲಸಗಳೇನು?**

ಕನ್ನಡದ ಕೆಲಸ ಅಂದರೆ ಏನು ಎಂಬುದನ್ನು ವಿಶದಪಡಿಸಿಕೊಳ್ಳಬೇಕು. ನನಗೆ ಹೊಳೆಯುವುದು:



– ಕನ್ನಡ ಜನರನ್ನು ಒಂದುಗೂಡಿಸುವುದು

– ಕನ್ನಡ ಭಾಷೆಯನ್ನು ಬೆಳಸುವುದು, ಪ್ರಚಾರ ಮಾಡುವುದು

– ಸಾಹಿತ್ಯದ ಬೆಳವಣಿಗೆ

– ಕನ್ನಡ ಸಂಸ್ಕೃತಿಯ ಬೆಳವಣಿಗೆ, ಪ್ರಚಾರ.

ಇದಕ್ಕೆ ನಮಗಿರುವ ಸಾಧನಗಳು:

– ಕನ್ನಡ ಕೂಟಗಳು (ಸ್ಥಳೀಯ ಮತ್ತು ರಾಷ್ಟ್ರೀಯ)

– ಕನ್ನಡ ಪತ್ರಿಕೆಗಳು

– ಎಲೆಕ್ಟ್ರಾನಿಕ್ ಸಂವಹನ ಸಾಧನಗಳು.

ಈ ರೀತಿಯಲ್ಲಿ ಯೋಚಿಸಿದರೆ – ಅಂದರೆ ನಮ್ಮ ಕನ್ನಡ ಕೂಟಗಳು ಕನ್ನಡದ ಕೆಲಸವನ್ನು ಎಷ್ಟುಮಟ್ಟಿಗೆ ಸಾಧಿಸಿವೆ ಎಂದು ನೋಡಿದರೆ – ನನ್ನ ಮನಸ್ಸಿಗೆ ಅವು ಕೆಲವು ವಿಭಾಗಗಳಲ್ಲಿ ಯಶಸ್ವಿಯಾಗಿದ್ದರೂ ಕೆಲವು ವಿಚಾರಗಳಲ್ಲಿ ಇನ್ನೂ ಹೆಚ್ಚು ಮಾಡಬಹುದು ಎನ್ನಿಸುತ್ತದೆ. ನಮ್ಮ ಸ್ಥಳೀಯ ಕೂಟಗಳು ಕನ್ನಡಿಗರನ್ನು ಒಟ್ಟುಗೂಡಿಸುತ್ತವೆ, ನಿಜ. ಸಾಂಸ್ಕೃತಿಕವಾಗಿ ಅವರಲ್ಲಿ ಒಂದು ಬಗೆಯಲ್ಲಿ ಕನ್ನಡ ಪ್ರಜ್ಞೆ (consciousness) ಬೆಳಸುತ್ತವೆ, ನಿಜ. ಆದರೆ ಭಾಷೆಯ ಬೆಳವಣಿಗೆ ವಿಷಯದಲ್ಲಿ ಅವು ಹೆಚ್ಚು ಸಾಧಿಸಲು ಆಗಿಲ್ಲ ಎನ್ನಿಸುತ್ತದೆ. ಈ ವಿಷಯ ಬಂದಾಗೆಲ್ಲ Kannada versus English ಎಂಬ ಪ್ರಶ್ನೆ ಏಳುತ್ತದೆ. ನಮಗೆ ಎರಡೂ ಇರಲಿ, ಇರಬೇಕು ಎಂಬ ನಿಲುವು ಮುಖ್ಯ. ಇಂಗ್ಲಿಷ್ ಜೊತೆಗೆ ಒಂದೆರಡು ಇತರ ಭಾಷೆಗಳನ್ನೂ ಕಲಿಯುವುದು ಒಟ್ಟಿನಲ್ಲಿ ಭಾಷಾಸಾಮರ್ಥ್ಯ ಬೆಳೆಯುವುದಕ್ಕೆ, ಮಾನಸಿಕ ಬೆಳವಣಿಗೆಗೆ ತುಂಬಾ ಮುಖ್ಯ ಎಂದು ಶಿಕ್ಷಣ ತಜ್ಞರೆಲ್ಲ ಹೇಳುತ್ತಾರೆ. ನಮ್ಮ ಮಕ್ಕಳೇ ಶಾಲೆಯಲ್ಲಿ ಫ್ರೆಂಚ್, ಜರ್ಮನ್ ಅಥವಾ ಸ್ಪ್ಯಾನಿಶ್ ಭಾಷೆಗಳನ್ನು ಕಲಿಯುತ್ತಾರೆ, ಕನ್ನಡ ಕಲಿಯುವ ಅವಕಾಶವಿಲ್ಲ. ಆದರೆ ಶಾಲೆಯಿಂದ ಹೊರಗೆ ಕನ್ನಡ ಕೂಟಗಳಲ್ಲಿ ಆ ಕೆಲಸ ನಡೆಯಬೇಕು. ಕೆಲವು ಕೂಟಗಳು 'ಕನ್ನಡ ಕಲಿ' ಕಾರ್ಯಕ್ರಮ ನಡೆಸುತ್ತಿದ್ದಾರೆ. ಅನೇಕ ತಂದೆತಾಯಿಯರು ತುಂಬಾ ಶ್ರದ್ಧೆವಹಿಸಿ ಈ ಕೆಲಸ ಮಾಡುತ್ತಿದ್ದಾರೆ. ಅದು ಶ್ಲಾಘನೀಯ. ಆದರೆ ಎಲ್ಲ ಕೂಟಗಳೂ ಇದನ್ನು ಮಾಡುತ್ತಿಲ್ಲ. ಅಲ್ಲದೆ ನಮ್ಮಲ್ಲಿ ಅದಕ್ಕೆ ತಕ್ಕ ಪಠ್ಯ ಪುಸ್ತಕಗಳು, ವಿದ್ಯುನ್ಮಾನ ಸಾಧನಗಳು ಬೇಕು. ಈ ದಿಸೆಯಲ್ಲಿ ಹೆಚ್ಚಿನ ಕೆಲಸ ಆಗಬೇಕು.

ಕೆಲವು ವಿಶ್ವವಿದ್ಯಾಲಯಗಳಲ್ಲಿ ಕನ್ನಡ ಕಲಿಯುವ ಅವಕಾಶ ಇದೆ. ಫಿಲಡೆಲ್ಫಿಯಾದ ಯೂನಿವರ್ಸಿಟಿ ಆಫ್ ಪೆನ್ಸಿಲ್ವೇನಿಯಾದಲ್ಲಿ ಸುಮಾರು ಹತ್ತು ವರ್ಷಕ್ಕೂ ಹೆಚ್ಚಾಗಿ ಕನ್ನಡ ಪಾಠ ಹೇಳಿರುವ ವಿಮಲಾ ರಾಜಗೋಪಾಲ್ ತಮ್ಮ ಅನುಭವವನ್ನು ಹೀಗೆ ಹಂಚಿಕೊಂಡರು:

ಅಲ್ಲಿಯೂ ಕೇವಲ ಏಳೆಂಟು ಮಂದಿ ವಿದ್ಯಾರ್ಥಿಗಳು ಬರುತ್ತಾರೆ. (ಎಲ್ಲರೂ ಕನ್ನಡ ಹಿನ್ನೆಲೆಯವರೇ ಅಲ್ಲ.) ಆದರೆ, ಗುಜರಾತಿ ಮತ್ತಿತರ ಕೆಲವು ಭಾಷೆಗಳ ತರಗತಿಗಳಿಗೆ ಹೋಲಿಸಿದರೆ, ಇದು ಕಮ್ಮಿ. ಎಷ್ಟೋ ಜನ ವಿದ್ಯಾರ್ಥಿಗಳೇ ಹೇಳುತ್ತಾರೆ: ತಮ್ಮ ತಂದೆತಾಯಿಯರೇ ಕನ್ನಡ ತೆಗೆದುಕೊಳ್ಳುವುದು ಬೇಡ, ಅದರಲ್ಲಿ ಸಾಕಷ್ಟು ನಂಬರು ಬರುವುದಿಲ್ಲ ಎಂದು ನಿರುತ್ಸಾಹಗೊಳಿಸುತ್ತಾರೆ ಎಂದು. ಇನ್ನು ಕೆಲವರು ಕನ್ನಡಕ್ಕಾಗಿ ಯಾಕೆ ನಾವು ಅಷ್ಟೊಂದು ಟ್ಯೂಷನ್ ಹಣ ಕೊಡಬೇಕು, 'ಆಡಿಟ್' ಮಾಡಿದರೆ ಸಾಲದೆ – ಅಂದರೆ ಸುಮ್ಮನೆ ಹಾಗೇ ಕ್ಲಾಸಿನಲ್ಲಿ ಕುಳಿತು ಕೇಳಿಸಿಕೊಂಡರೆ ಸಾಲದೆ ಎನ್ನುತ್ತಾರೆ ಎಂದು. ಕನ್ನಡದ ಬಗ್ಗೆ ಈ ಬಗೆಯ ತಾತ್ಸಾರ, ನಿರುತ್ಸಾಹ ವಿಷಾದದ ಸಂಗತಿ.

ಇನ್ನು ಪತ್ರಿಕೆಗಳ ಮಾತು ಬಂದರೆ ನಾವು ನಮ್ಮ ಗತಿಸಿದ ಮಿತ್ರ ಶ್ರೀ ಎಸ್. ಕೆ. ಹರಿಹರೇಶ್ವರರನ್ನು ನೆನೆಯಬೇಕು. ಅವರೂ ಅವರ ಪತ್ನಿ ನಾಗಲಕ್ಷ್ಮಿಯವರೂ ಸೇರಿ ನಡೆಸುತ್ತಿದ್ದ 'ಅಮೆರಿಕನ್ನಡ' ಒಂದು ಅತ್ಯಂತ ಸ್ತುತ್ಯರ್ಹವಾದ ಕೆಲಸ. ಅದು ನಿಂತು ಹೋದುದು (ಆರ್ಥಿಕ ಕಾರಣಗಳಿಂದ ಎಂದು ಕೇಳಿದ್ದೇನೆ) ತುಂಬಾ ವಿಷಾದಕರ. ಅದಾದ ಮೇಲೆ ಅಂಥ ಇನ್ನಾವ ಪತ್ರಿಕೆಯೂ ಇಲ್ಲ. ಇನ್ನು ಕೂಟಗಳು ವರ್ಷಕ್ಕೆ ಒಂದೆರಡು ಬಾರಿ ತರುವ ವಿಶೇಷ ಸಂಚಿಕೆಗಳಲ್ಲಿ 'ಸಂಗಮ' ತುಂಬಾ ಯಶಸ್ವಿಯಾಗಿದೆ. ಪ್ರತಿ ವರ್ಷವೂ ಎರಡು ವಿಶೇಷ ಸಂಚಿಕೆಗಳು ಹೊರಬರುತ್ತಿರುವುದು ತುಂಬಾ ಶ್ಲಾಘನೀಯ.

ನಮ್ಮ ಭಾಷೆಯ ಬಗ್ಗೆ ನಮ್ಮ ಜನರಲ್ಲಿ ಗೌರವ, ಇದು ನಮ್ಮದು ಎಂಬ ಅಭಿಮಾನ, ಆತ್ಮೀಯತೆ ಬೆಳೆಯಬೇಕು. ಅದನ್ನು ಕಾಪಾಡಿಕೊಳ್ಳಬೇಕು. ಇಲ್ಲಿ ಅದನ್ನು ನಮ್ಮ ಮಕ್ಕಳಿಗೆ ಕಲಿಸಲು ಒಳ್ಳೆಯ ಪುಸ್ತಕಗಳನ್ನು ತಯಾರಿಸಬೇಕು, ವಿದ್ಯುನ್ಮಾನ ಸಾಧನಗಳನ್ನು ಬಳಸಬೇಕು. ಇಲ್ಲಿ ವಿಮಲಾರವರು ಹೇಗೆ ತಾವು ಕನ್ನಡ ಶಿಕ್ಷಣಕ್ಕೆ ಹಾಡುಗಳನ್ನು ಬಳಸಿದರು ಎಂಬುದನ್ನು ಕುರಿತು ಹೇಳಿದರು.

ನಮ್ಮ ಕನ್ನಡ ಕೂಟಗಳು ಕನ್ನಡ ಭಾಷೆಯನ್ನು ಬೆಳೆಸುವತ್ತ ಹೆಚ್ಚು ಕೆಲಸ ಮಾಡುತ್ತಿಲ್ಲವೆನ್ನಿಸುತ್ತದೆ. ಬಹಳಷ್ಟು ಕನ್ನಡ ಕೂಟಗಳಲ್ಲಿ ಕಾರ್ಯಕ್ರಮಗಳು ಇಂಗ್ಲೀಷಿನಲ್ಲಿಯೇ ನಡೆಯುತ್ತವೆ. ಅದಕ್ಕೆ ಅನೇಕ ಕಾರಣಗಳು ಹೇಳುತ್ತಾರೆ. ನಾನು ನೋಡಿರುವಂತೆ ಎಷ್ಟೋ ಸಲ ಮಕ್ಕಳು ತಮಗೆ ವಹಿಸಿದ ಕಾರ್ಯಕ್ರಮವನ್ನು ಪ್ರಯತ್ನಪೂರ್ವಕವಾಗಿ ಕನ್ನಡದಲ್ಲೇ ನಡೆಸುತ್ತಾರೆ. ಆದರೆ ದೊಡ್ಡವರು, ಪದಾಧಿಕಾರಿಗಳು ಮಾತನಾಡಲು ಬಂದೊಡನೆ ಇಂಗ್ಲೀಷಿನಲ್ಲಿ ಶುರು ಮಾಡುತ್ತಾರೆ. ದೊಡ್ಡವರಲ್ಲಿಯೇ ಆ ಬದ್ಧತೆ ಏಕೆ ಇರುವುದಿಲ್ಲ ಎಂಬುದು ಯೋಚಿಸಬೇಕಾದ ವಿಷಯ. ನಮ್ಮವರಿಗೆ ಅದೇನೋ ಆಂಗ್ಲ ವ್ಯಾಮೋಹ. ನಮ್ಮ ಮನೋಭಾವದಲ್ಲಿ ಇನ್ನಷ್ಟು ಸುಧಾರಣೆಯಾಗ ಬೇಕೆನ್ನಿಸುತ್ತದೆ. ಎಲ್ಲೆಲ್ಲಿ ಸಾಧ್ಯವೋ ಅಲ್ಲಿ ಕನ್ನಡ ಬಳಸಬೇಕು.



**೫. ನೀವು ರಚಿಸಿರುವ ಸಾಹಿತ್ಯ ಕೃತಿಗಳ ಬಗ್ಗೆ ತಿಳಿಸಿ. ಮುಂದೇನಾದರೂ ಪುಸ್ತಕ ಪ್ರಕಟಿಸುವ ಯೋಜನೆಗಳಿವೆಯೇ?**

ನಾನು ಕತೆ, ಕವನಗಳನ್ನು ಬರೆದವನಲ್ಲ, ನನ್ನ ಸಾಹಿತ್ಯ ಸೃಷ್ಟಿ ಸೀಮಿತ. 'ಸೃಷ್ಟಿ' ಪುಸ್ತಕದಲ್ಲಿ ಅಮೆರಿಕನ್ ಇಂಡಿಯನ್ನರ ಜಾನಪದ ಪುರಾಣ, ಕಥೆಗಳನ್ನು ಅನುವಾದ ಮಾಡಿದ್ದೇನೆ. 'ಗಾಂಧಿಯುಗಕ್ಕೆ ಕನ್ನಡಿ' ಎಂಬ ಸಂಕಲನದಲ್ಲಿ ಹಲವು ಸಾಹಿತ್ಯಿಕ ಲೇಖನಗಳಿವೆ. ನಮ್ಮ ತಾಯಿಯವರ ಕುರಿತಾಗಿ 'ಹಲವು ಮಕ್ಕಳ ತಾಯಿ' ಎಂಬ ಹೊತ್ತಿಗೆಯನ್ನು ಸಂಪಾದಿಸಿದ್ದೇನೆ.

ಮುಂದಿನ ಯೋಜನೆಯಾಗಿ ಕೆಲವು ಕೃತಿಗಳನ್ನು ಸಂಪಾದಿಸಿ ಪ್ರಕಟಿಸುವ ಕೆಲಸ ಕೈಗೊಂಡಿದ್ದೇನೆ. ಅವುಗಳಲ್ಲಿ ಮುಖ್ಯವಾಗಿ ಒಂದೆರಡನ್ನು ಹೇಳಬಯಸುತ್ತೇನೆ: ನಮ್ಮ ಎರಡನೆಯ ಅಣ್ಣ ಶ್ರೀ ನಾರಾಯಣ ದತ್ತರು ಬಹು ಗೌರವಾನ್ವಿತ, ಸುಪ್ರಸಿದ್ಧ ಹಿಂದಿ ಪತ್ರಿಕಾ ಸಂಪಾದಕರು. ಅವರ ಬಗ್ಗೆ ಇತರ ಪ್ರತಿಷ್ಠಿತ ಹಿಂದಿ ಲೇಖಕರು, ಸಂಪಾದಕರು ಬರೆದಿರುವ ಲೇಖನಗಳು ಹಾಗೂ ಅವರದೇ ಆದ ಲೇಖನಗಳನ್ನು ಒಳಗೊಂಡ ಹಿಂದಿ ಪುಸ್ತಕವನ್ನು ಕನ್ನಡಕ್ಕೆ ಅನುವಾದ ಮಾಡಿಸಿ ಪ್ರಕಟಿಸುವ ಕೆಲಸದಲ್ಲಿ ತೊಡಗಿದ್ದೇನೆ. ಪುಸ್ತಕ ಮುಂದಿನ ಫೆಬ್ರುವರಿಯಲ್ಲಿ ಬರಲಿದೆ. ಇನ್ನೊಂದು,

ನಮ್ಮ ತಾಯಿ ತೆಲುಗಿನಿಂದ ಅನುವಾದಿಸಿದ 'ಮಕ್ಕಳ ಸಚಿತ್ರ ಭಾರತ'ದ ಎರಡನೆಯ ಆವೃತ್ತಿಯನ್ನು ಹೊರತರುವ ಯೋಜನೆ ಇದೆ. ಅಲ್ಲದೆ ನನ್ನ ಇತರ ಬಿಡಿ ಲೇಖನಗಳ ಸಂಕಲನವನ್ನೂ ಸಿದ್ಧಗೊಳಿಸುತ್ತಿದ್ದೇನೆ. ವಿಮಲಾರವರೂ ತಮ್ಮ ಪ್ರಬಂಧಗಳ ಸಂಕಲನ ಹೊರತರುವ ಯೋಜನೆ ಕೈಗೆತ್ತಿಕೊಂಡಿದ್ದಾರೆ.

**೬. ಕನ್ನಡ ಭಾಷೆಯು ಕರ್ನಾಟಕದಲ್ಲಿಯೇ ಅಳಿವಿನತ್ತ ಸಾಗುತ್ತಿದೆಯೆಂಬ ಅಳಲು ಆಗೀಗ ಕೇಳುತ್ತಲೇ ಇರುತ್ತದೆ. ಆ ಬಗ್ಗೆ ನಿಮ್ಮ ಅನಿಸಿಕೆ? ತಾಯ್ನೆಲದಲ್ಲೇ ನಶಿಸುತ್ತಿರುವ ಭಾಷೆಯನ್ನು ಇಲ್ಲಿ ನಾವುಳಿಸಬಲ್ಲೆವೇ?**

(ರಾಜಗೋಪಾಲ್ ಮತ್ತು ವಿಮಲಾ ರಾಜಗೋಪಾಲ್ ಜಂಟಿಯಾಗಿ ಈ ಪ್ರಶ್ನೆಗೆ ಉತ್ತರಿಸಿದರು.)

ಕನ್ನಡ ಭಾಷೆ ಅಳಿವಿನ ಅಂಚಿನಲ್ಲಿದೆ ಎಂದು ನಾವು ಒಪ್ಪುವುದಿಲ್ಲ. ಆ ನಿರಾಶಾವಾದ ನಮಗಿಲ್ಲ. ನಿಜ, ಯಾವುದೂ ಶಾಶ್ವತವಲ್ಲ. ವಿಮಲಾರವರು ತಾವು ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿದ್ದಾಗ ತಮ್ಮ ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದ ಶ್ರೀ ಕೆ. ಅನಂತರಾಮಯ್ಯನವರು ಹೇಗೆ ಮುಂದೊಂದು ದಿನ ಇಂಗ್ಲಿಷ್ ಎಲ್ಲ ಭಾಷೆಗಳನ್ನೂ ಕಬಳಿಸುತ್ತದೆ ಎಂದು ಹೇಳಿದ್ದುದನ್ನು ನೆನಸಿಕೊಂಡರು. ಕನ್ನಡ ಹೋಗಬಹುದು, ಹಿಂದಿ ಹೋಗಬಹುದು, ಕಡೆಗೆ ಎಲ್ಲವನ್ನೂ ಕಬಳಿಸುವ ಇಂಗ್ಲಿಷೂ ಹೋಗಬಹುದು.

ಆದರೆ ಹಾಗೆಂದು ನಾವು ಸುಮ್ಮನೆ ಕೈಕಟ್ಟಿ ಕುಳಿತಿರಲು ಸಾಧ್ಯವೇ? ಹುಟ್ಟಿದವನ ಮರಣ ಕಟ್ಟಿಟ್ಟದ್ದು ಎನ್ನುವ ಸಂಸ್ಕೃತ ಮಾತಿದೆ. ಆದರೆ ಒಂದು ಸಣ್ಣ ನೆಗಡಿ ಕೆಮ್ಮು ಬಂದರೂ ನಾವು ಡಾಕ್ಟರ ಬಳಿಗೆ ಓಡುವುದಿಲ್ಲವೇ? ಹೇಗೂ ಹೋಗುತ್ತೇವೆ ಎಂದು ಸುಮ್ಮನಿರುತ್ತೇವೆಯೆ? ಕನ್ನಡ ಹೋಗಬಹುದು – ದಶಕಗಳ ಮೇಲೆ, ಶತಮಾನಗಳ ಮೇಲೆ. ತತ್ಕ್ಷಣ, ನಾಳೆಯೇ ಏನೂ ಹೋಗುವುದಿಲ್ಲ. ಭಾಷೆ ನಶಿಸಲು ಮುಖ್ಯ ಕಾರಣ ರಾಜಕೀಯ ಪ್ರಾಬಲ್ಯ ಇಲ್ಲದಿರುವುದು, ಪ್ರಜಾಸಂಖ್ಯೆ ಸಾಕಷ್ಟು ಬೆಳೆಯದಿರುವುದು. ರಾಜಕೀಯವಾಗಿ ಭಾರತದಲ್ಲಿ ಕನ್ನಡದ ಪ್ರಾಬಲ್ಯ ಅಷ್ಟಾಗಿ ಇಲ್ಲವಾದರೂ ಪ್ರಜಾಸಂಖ್ಯೆ ನಶಿಸುವ ಹೆದರಿಕೆ ಏನೂ ಇಲ್ಲವಲ್ಲ! ಆದರೂ ನಾವು ಕೆಲವು ಕ್ರಮಗಳನ್ನು ಕೈಗೊಳ್ಳಬೇಕು. ಕನ್ನಡಕ್ಕೆ ಒದಗಿರುವ ದುಃಸ್ಥಿತಿ ಮುಖ್ಯವಾಗಿ ಅದು ಉದ್ಯೋಗಕ್ಕೆ ಅವಶ್ಯಕವಲ್ಲದ್ದರಿಂದ. ಕನ್ನಡ ಜ್ಞಾನ ಎಲ್ಲೋ ಕೆಲವು ಕೆಲಸಗಳ ವಿನಃ ಹೆಚ್ಚಿನವಕ್ಕೆ ಬೇಕಿಲ್ಲ. ಇದಕ್ಕೆ ತಕ್ಕ ಉಪಾಯ ಮಾಡಬೇಕು. ನಮ್ಮ ವಿದ್ಯಾಸಂಸ್ಥೆಗಳಲ್ಲಿ ಸರ್ಕಾರ ಒಂದು ಮಟ್ಟದವರೆಗೆ ಅದನ್ನು ಕಡ್ಡಾಯ ವಿಷಯವಾಗಿ ನಿಗದಿ ಮಾಡಿಲ್ಲ. ಇವನ್ನು ಅವಶ್ಯಕವಾಗಿ ಮಾಡಬೇಕಾದ್ದು ಎಂದು ನಮ್ಮ ಭಾವನೆ.

ಇನ್ನೂ ಒಂದು ಮಾತು: ಕನ್ನಡ, ಕರ್ನಾಟಕ ಅಂದರೆ ಬರೀ ಬೆಂಗಳೂರು ಮಾತ್ರ ಅಲ್ಲ. ಔದ್ಯೋಗಿಕ ಕಾರಣದಿಂದಾಗಿ ಬೆಂಗಳೂರಿನಲ್ಲಿ ಅನೇಕ ಭಾಷಿಕರು ಸೇರಿಕೊಂಡು ಕನ್ನಡ ಮಾತಾಡುವವರ ಸಂಖ್ಯೆ ಕಡಿಮೆಯಾಗಿದೆ. ಎಷ್ಟೋ ಕಾಸ್ಮೋಪಾಲಿಟನ್ ನಗರಗಳಲ್ಲಿ ಸ್ಥಳೀಯ ಭಾಷೆ ಹಾಗಾಗುವುದು ಅಪರೂಪವಲ್ಲ. ಉಳಿದ ಕಡೆ ಆ ಪರಿಸ್ಥಿತಿ ಇಲ್ಲ. ಒಟ್ಟಿನಲ್ಲಿ ಕನ್ನಡ ಭಾರತೀಯ ಪ್ರಾಂತೀಯ ಭಾಷೆಗಳಲ್ಲಿ ಒಳ್ಳೆಯ ಸ್ಥಾನ ಪಡೆದಿದೆ. ವರ್ಷದಲ್ಲಿ ಸುಮಾರು ನಾಲ್ಕು ಸಾವಿರ ಪುಸ್ತಕಗಳು ಅಚ್ಚಾಗುತ್ತವೆ. ಕನ್ನಡ ವೃತ್ತಪತ್ರಿಕೆಗಳು, ಟಿ.ವಿ., ಸಿನೆಮಾಗಳು ಬೆಳೆಯುತ್ತಿವೆ.

ಭಾರತದಲ್ಲಿ ಹೇಗಾದರೂ, ಇಲ್ಲಿ ನಾವು ನಮ್ಮ ಮಕ್ಕಳಿಗೆ ಕನ್ನಡ ಕಲಿಸುವುದನ್ನು ಖಂಡಿತ ಬಿಡಬೇಕಿಲ್ಲ. ಕನ್ನಡ ಒಂದು ಭಾಷೆ ಮಾತ್ರ ಅಲ್ಲ, ಅದೊಂದು ಭವ್ಯವಾದ ಪರಂಪರೆ. ಅಂಥ ದೊಡ್ಡ ಪರಂಪರೆಯನ್ನು, ಆಸ್ತಿಯನ್ನು ಸುಮ್ಮನೆ ನಿಸ್ಸಹಾಯಕರಾಗಿ ಕೈಬಿಡುವುದು ಒಪ್ಪತಕ್ಕ ಮಾತಲ್ಲ.

ಅಂದಹಾಗೆ ಈ ವರ್ಷ ಕರ್ನಾಟಕ ಕುಲಪುರೋಹಿತ ಎಂದು ಖ್ಯಾತಿ ಗಳಿಸಿದ ಶ್ರೀ ಆಲೂರ ವೆಂಕಟರಾಯರ ಅತ್ಯಂತ ಪ್ರಭಾವಶಾಲಿ ಪುಸ್ತಕ 'ಕರ್ನಾಟಕ ಗತವೈಭವ'ದ ಶತಮಾನೋತ್ಸವ. ಅದರಲ್ಲಿ ಅವರು ಹೇಳಿರುವಂತೆ ಕರ್ನಾಟಕತ್ವ ಬೆಳೆಸಿಕೊಳ್ಳಲು ನಾವು ಕರ್ನಾಟಕದಲ್ಲೇ ಇರಬೇಕಾಗಿಲ್ಲ. ಎಲ್ಲಿದ್ದರೂ ಅದನ್ನು ಮಾಡಬಹುದು. ಅವರು ಆ ಬಗ್ಗೆ ಹೇಳಿರುವ ಮಾತುಗಳನ್ನು ಎಲ್ಲರೂ ಮನನ ಮಾಡಬೇಕು. (ಇದನ್ನು ರಾಜಗೋಪಾಲ್ ೨೦೧೬ರ ಅಕ್ಕ ಸಮ್ಮೇಳನದ ಸಂದರ್ಭದಲ್ಲಿ ಪ್ರಕಟವಾದ ಪುಸ್ತಕ



'ಕನ್ನಡ ಪ್ರಜ್ಞೆ'ಯಲ್ಲಿ ಬಂದಿರುವ ತಮ್ಮ 'ಅನಿವಾಸಿ ಕನ್ನಡಿಗರು ಮತ್ತು ಕರ್ನಾಟಕತ್ವ' ಎಂಬ ಲೇಖನದಲ್ಲಿ ವಿವರಿಸಿದ್ದಾರೆ.) ಅಮೆರಿಕದಲ್ಲಿ ನಡೆಯುವ ಕನ್ನಡ ಕೆಲಸಗಳು ಅಲ್ಲಿನವರಿಗೆ ಪ್ರೇರಣೆ ನೀಡಬಹುದು. ಮೊದಲೇ ಹೇಳಿದಂತೆ ಇಲ್ಲಿಯ ವಿಶ್ವವಿದ್ಯಾಲಯ-ಗಳಲ್ಲಿಯೂ ಕನ್ನಡ ವಿಭಾಗಗಳಿವೆ. ಇಲ್ಲಿಯ ಮಕ್ಕಳೂ ಕೂಡ ಕನ್ನಡ ಕಲಿಯುತ್ತಿವೆ. ಈ ಮೂಲಕ ಕನ್ನಡವನ್ನು ಉಳಿಸಿ ಬೆಳೆಸುವತ್ತ ನಮ್ಮ ಕೈಜೋಡಿಸಬಹುದು. ತಾಯಂದಿರ ಮೂಲಕ ಯಾವುದೇ ಭಾಷೆ ಉಳಿಯುತ್ತದೆ. ಕನ್ನಡವನ್ನು ಮನೆಯಲ್ಲಿ ಮಾತಾಡುವುದು ಕನ್ನಡ ಉಳಿಕೆಗೆ ಅತಿ ಮುಖ್ಯ.

ಈ ಸಮಯದಲ್ಲಿ ನನಗೆ ಬಿಎಂಶ್ರೀಯವರು ಹೇಳಿರುವ ಒಂದು ಮಾತು ನೆನಪಾಗುತ್ತಿದೆ. 'ನಮ್ಮ ಭಾಷೆಯನ್ನು ನಾವು ಎತ್ತದೆ ಹೋದರೆ ಎತ್ತುವವರು ಯಾರು? ಎತ್ತುವುದಕ್ಕೆ ನಿಂತರೆ ನಮ್ಮನ್ನು ತಡೆಯುವರು ಯಾರು?' ಈ ಮಾತು ಬಹಳ ಯುಕ್ತವೆನ್ನಿಸುತ್ತದೆ. ನಶಿಸುತ್ತಿದೆ ಎಂದು ನಿಷ್ಕ್ರಿಯರಾಗಿ ಕೂತುಕೊಳ್ಳದೆ ನಮ್ಮಿಂದಾದ ಕೆಲಸವನ್ನು ಮಾಡುತ್ತಾ ಹೋಗಬೇಕು ಎಂಬುದು ನಮ್ಮ ದೃಢ ನಂಬಿಕೆ.



# ಅಮೆರಿಕದಲ್ಲಿದ್ದ ಕನ್ನಡಿಗ ಎಚ್. ವೈ. ರಾಜಗೋಪಾಲ್

**–ಡಾ. ಸುಮತೀಂದ್ರ ನಾಡಿಗ**

೧೯೭೧ರಲ್ಲಿ ನಾನು ಅಮೆರಿಕದ ಪ್ರಮುಖ ನಗರಗಳಲ್ಲಿ ಒಂದಾದ ಫಿಲಡೆಲ್ಫಿಯಾದಲ್ಲಿದ್ದೆ. ನನ್ನ ಹೆಂಡತಿಯ ಅಣ್ಣ ಪಿ. ಶ್ರೀನಿವಾಸರಾವ್ ಜೊತೆಯಲ್ಲಿರಲು ಹೋಗಿದ್ದೆ. ಫಿಲಡೆಲ್ಫಿಯದ ಟೆಂಪಲ್ ಯೂನಿವರ್ಸಿಟಿಯಲ್ಲಿ ಇಂಗ್ಲಿಷ್ ಎಂ.ಎ. ಪದವಿಯನ್ನು ಪಡೆಯುವ ನೆಪದಲ್ಲಿ ಅಲ್ಲಿಗೆ ಹೋಗಿದ್ದೆ. ಫಿಲಡೆಲ್ಫಿಯ ನಗರದ ಹತ್ತಿರದ ಊರಾದ ಮೀಡಿಯಾದಲ್ಲಿ ಎಲ್. ಗುಂಡಪ್ಪನವರ ಅಳಿಯ ಎಚ್. ವೈ. ರಾಜಗೋಪಾಲ್ ಎನ್ನುವ, ಪಿ. ಶ್ರೀನಿವಾಸರಾವ್ ಸ್ನೇಹಿತರೊಬ್ಬರಿದ್ದಾರೆಂದು ತಿಳಿಯಿತು. ಸೆಂಟ್ರಲ್ ಕಾಲೇಜಿನಲ್ಲಿ ನಾನು ಇಂಗ್ಲಿಷ್ ಎಂ.ಎ. ಓದುತ್ತಿದ್ದಾಗ ನನ್ನ ಕ್ಲಾಸ್‌ಮೇಟ್ ಆಗಿದ್ದ ಎಲ್. ಜಿ. ವಿಮಲ ರಾಜಗೋಪಾಲ್ ಹೆಂಡತಿಯೆಂದೂ ಗೊತ್ತಾಯಿತು. ಹಾಗಾಗಿ, ಒಂದು ವಾರದ ಕೊನೆಯಲ್ಲಿ ಶ್ರೀನಿವಾಸ ನನ್ನನ್ನು ಮೀಡಿಯಾದಲ್ಲಿದ್ದ ರಾಜಗೋಪಾಲ್ ಮನೆಗೆ ಕರೆದುಕೊಂಡು ಹೋದ. ಅಲ್ಲಿ ಪಿ. ಶ್ರೀನಿವಾಸರಾವ್ ಸ್ನೇಹಿತ ಮತ್ತು ನನ್ನ ಕ್ಲಾಸ್‌ಮೇಟ್ ವಿಮಲಳ ಗಂಡ ರಾಜಗೋಪಾಲ್ ಸ್ನೇಹಿತನಾಗಿಬಿಟ್ಟ. ಅವನನ್ನು ರಾಜು ಅಂತ ಕರೆಯಲಿಕ್ಕೆ ಶುರುಮಾಡಿದೆ.

ನಾನು ಮತ್ತು ಶ್ರೀನಿವಾಸ ಆಗಿಂದಾಗ್ಗೆ ಮೀಡಿಯಾಗೆ ಹೋಗಿ ಊಟ ತಿಂಡಿ ಹರಟೆ ಮುಗಿಸಿ ಬರುತ್ತಿದ್ದಾಗ ರಾಜು ಎಷ್ಟು ಸರಳ ವ್ಯಕ್ತಿ ಎನ್ನುವುದು ಗೊತ್ತಾಯಿತು.

ಅವನು ಬರೀ ಬಿ.ಇ. ಓದಿರಬೇಕು ಅಂದುಕೊಂಡಿದ್ದ ನನಗೆ ಅವನು ಮೈಸೂರಿನ ನ್ಯಾಷನಲ್ ಇನ್ಸ್‌ಟಿಟ್ಯೂಟ್ ಆಫ್ ಇಂಜಿನಿಯರಿಂಗ್‌ನಿಂದ ಬಿ.ಇ. ಪಡೆಯುವದರ ಜೊತೆಗೆ, ಬೆಂಗಳೂರಿನ ಇಂಡಿಯನ್ ಇನ್ಸ್‌ಟಿಟ್ಯೂಟ್ ಆಫ್ ಸೈನ್ಸ್‌ನಿಂದ ಎಂ.ಇ. ಡಿಗ್ರಿ ಪಡೆದವನೆಂದೂ ಗೊತ್ತಾಯಿತು. ಕ್ರಮೇಣ ಅವನು Raytheon Engineers & Constructors ಕಂಪೆನಿಯಲ್ಲಿ Consulting Engineer ಆಗಿ, ಆಮೇಲೆ ವಿಲನೋವಾ ವಿಶ್ವವಿದ್ಯಾಲಯದಲ್ಲಿ Adjunct Professor ಆಗಿದ್ದನೆಂದು ತಿಳಿದುಕೊಂಡೆ. ಅಷ್ಟೆಲ್ಲ ವಿದ್ಯೆ, ಅಂತಸ್ತು ಇದ್ದರೂ, ರಾಜು ನಿಗರ್ವಿ ಮತ್ತು ಗಳಾಬಿಳಿ ಮನುಷ್ಯನಾಗಿದ್ದ. ನಮ್ಮ ಅನೇಕ ಸಾಹಿತ್ಯ ವಿದ್ಯಾರ್ಥಿಗಳಿಗಿಂತ ಹೆಚ್ಚು ಸಾಹಿತ್ಯ ಅವನಿಗೆ ಗೊತ್ತಿತ್ತು.

ರಾಜೂಗೆ ಸಾಹಿತ್ಯದಲ್ಲಿದ್ದ ಆಸಕ್ತಿ ಅವನ ಸಂಸ್ಕೃತಿಯ ಒಂದು ಭಾಗವಾಗಿತ್ತು. ರಾಜೂ ತಾಯಿ ಎಚ್. ವೈ. ಸರಸ್ವತಮ್ಮ ಮೈಸೂರು ಮಕ್ಕಳ ಕೂಟವನ್ನು ಸ್ಥಾಪಿಸಿದ್ದರು. ರಾಜೂ ತಾತ ಮದ್ರಾಸಿನ ಸರ್ವೆಂಟ್ಸ್ ಆಫ್ ಇಂಡಿಯಾದ ಸದಸ್ಯರಾಗಿ, ಸೊಸೈಟಿ ಆವರಣದಲ್ಲಿ ವಾಸವಾಗಿದ್ದ ಮಹಾತ್ಮ ಗಾಂಧಿ, ರೈಟ್ ಆನರಬಲ್ ಶ್ರೀನಿವಾಸ ಶಾಸ್ತ್ರಿ ಮೊದಲಾದವರು ಅವರ ಮನೆಗೆ ಬಂದು ಹೋಗುತ್ತಿದ್ದರು. ಆ ವಾತಾವರಣದಲ್ಲಿ ರಾಜುವಿನ ತಾಯಿ ಸರಸ್ವತಮ್ಮನವರ ಮನಸ್ಸು ಸಮಾಜ ಸೇವೆಯ ಕಡೆಗೆ ತಿರುಗಿತ್ತು. ರಾಜೂ ತಂದೆ ಯೋಗಾನರಸಿಂಹ ಅವರು ಪ್ರೊಫೆಸರ್ ಹಿರಿಯಣ್ಣ ಮತ್ತು ಎಸ್. ರಾಧಾಕೃಷ್ಣ ಅವರ ಶಿಷ್ಯರಾಗಿದ್ದರು. ಸಂಗೀತ ಮತ್ತು ಸಂಸ್ಕೃತದಲ್ಲಿ ಪ್ರಸಿದ್ಧರಾಗಿದ್ದರು. ರಾಜೂ ಅಣ್ಣ ಎಚ್. ವೈ. ಶಾರದಾಪ್ರಸಾದ್ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದವರು; ಮೂವರು ಪ್ರಧಾನಿಗಳಿಗೆ ಮಾಧ್ಯಮ ಸಲಹೆಗಾರರಾಗಿದ್ದರು.

ರಾಜು ಅಮೆರಿಕನ್ನಡಿಗನಾಗಿದ್ದ. ಭಾರತದ ಬಗ್ಗೆ ಮತ್ತು ಕನ್ನಡದ ಬಗ್ಗೆ ಅವನಿಗೆ ಕರುಳಬಳ್ಳಿಯ ಪ್ರೀತಿ. ತನ್ನ ಮತ್ತು ತನ್ನಂತೆ ಅಮೆರಿಕಕ್ಕೆ ಹೋದ ಕನ್ನಡಿಗರ ಮೂಲಗಳನ್ನು ಹುಡುಕಿಕೊಳ್ಳುವ, ಗುರುತಿಸುವ ಮತ್ತು ತಾನು ಗಳಿಸಿಕೊಂಡ ಸಂಸ್ಕೃತಿಯನ್ನು ಮುಂದಿನ ಪೀಳಿಗೆಗೆ ಸಿಗುವಂತೆ ಮಾಡುವ ಕೆಲಸ ಅವನಿಗೆ ಪ್ರಿಯವಾಗಿತ್ತು. ಆದ್ದರಿಂದಲೇ ಅಮೆರಿಕದಲ್ಲಿ ನೆಲೆಸಿದ ಕನ್ನಡಿಗರಿಗಾಗಿ 'ಶ್ರುತಿ' ಎನ್ನುವ ಭಾರತೀಯ ನೃತ್ಯ ಸಂಗೀತ ಸಂಸ್ಥೆಯನ್ನು, ಭಾರತ ಮತ್ತು ಅಮೆರಿಕದ ಮಕ್ಕಳಿಗಾಗಿ 'ಇಂಡಸ್' ಎನ್ನುವ ಸಂಸ್ಥೆಯನ್ನು, ಕನ್ನಡ ಸಾಹಿತ್ಯ ಕಾರ್ಯಕ್ರಮಗಳಿಗಾಗಿ 'ಕನ್ನಡ ಸಾಹಿತ್ಯ ರಂಗ', ಮತ್ತು ಭಾರತದಲ್ಲಿ 'ದೇವಗೀತಂ ಟ್ರಸ್ಟ್' ಮೊದಲಾದ ಅನೇಕ ಸಂಘ ಸಂಸ್ಥೆಗಳ ಸ್ಥಾಪಕನಾಗಿ, ಅವುಗಳ ಕಾರ್ಯ ನಿರ್ದೇಶಕನೂ ಆಗಿದ್ದನು. ಅವನ ಆತ್ಮೀಯ ಸ್ನೇಹಿತ ಪಿ. ಶ್ರೀನಿವಾಸರಾವ್ ನಿಧನವಾದಾಗ, ಶ್ರೀನಿವಾಸರಾವ್ ಬರೆದ 'ಪ್ರಸ್ತಾಪ' ಎನ್ನುವ ಪುಸ್ತಕದ ಹೆಸರಿನಲ್ಲೊಂದು ವಿಚಾರ ವೇದಿಕೆಯನ್ನೂ ಪ್ರಾರಂಭಿಸಿದ. ಈ ಎಲ್ಲಾ ಕೆಲಸಗಳಲ್ಲೂ ಅವನ ಹೆಂಡತಿ ವಿಮಲಾ ಸಹಕಾರವನ್ನಿತ್ತಿದ್ದರು.



ರಾಜು ಕನ್ನಡ ನಾಡಿನ ಪ್ರೀತಿಯನ್ನು ಬೆಳೆಸಿಕೊಳ್ಳಲು ಅವನ ಹೆಂಡತಿ ವಿಮಲಾ, ವಿಮಲಾಳ ತಂದೆ ಎಲ್. ಗುಂಡಪ್ಪ, ಅವನ ತಾಯಿ ಸರಸ್ವತಮ್ಮ ಮೊದಲಾದವರು ಕಾರಣರಾದರೆ, ಅವನ ಅಣ್ಣ ಶಾರದಾಪ್ರಸಾದರ ಸಾಹಿತಿಗಳ ಸ್ನೇಹವಲಯವೂ ಕಾರಣವಾಗಿತ್ತು. ರಾಜು ಕಟ್ಟಿಕೊಂಡ ಕಲೆ ಮತ್ತು ಸಾಹಿತ್ಯ ಸಂಘಗಳು, ಅಮೆರಿಕದಲ್ಲಿದ್ದ ಕನ್ನಡಿಗರಿಗೆ ಭಾವನಾವಶ್ಯಕವಾದ ಸಾಮಾಜಿಕ ಮಿಲನಕ್ಕೆ ಆಸ್ಪದವಾಗಿದ್ದವು. ಈ ಸಂಘ ಸಂಸ್ಥೆಗಳು ಅವನಿಂದ ಹೆಚ್ಚು ಹೆಚ್ಚು ತೊಡಗುವಿಕೆಗೆ ತಕ್ಕ ವಾತಾವರಣವನ್ನು ಕಲ್ಪಿಸಿದವು. ಒಂದು ರೀತಿಯಲ್ಲಿ ಅವನ ವಿಸ್ತಾರವಾದ ಕಾರ್ಯಕ್ಷೇತ್ರ ಅವನ ಸೃಷ್ಟಿಶೀಲತೆಗೆ ಬೇಕಾದ ಸಮಯವನ್ನು ಕಡಿಮೆ ಮಾಡಿದವೋ ಏನೊ. ಇಷ್ಟಾದರೂ ರಾಜು ಎಂತಹ ಅದ್ಭುತ ಲೇಖಕನಾಗಿದ್ದ!

ಅದಕ್ಕೆ ಉದಾಹರಣೆಯಾಗಿ ಅವನು ಪ್ರಕಟಿಸಿದ 'ಗಾಂಧಿಯುಗಕ್ಕೆ ಕನ್ನಡಿ' ಎನ್ನುವ ವಿಚಾರ ವಿಮರ್ಶೆಯ ಪುಸ್ತಕವನ್ನು ನೋಡಬೇಕು. ಆ ಪುಸ್ತಕದಲ್ಲಿರುವ ಹನ್ನೆರಡು ಲೇಖನಗಳಲ್ಲಿ ಕುವೆಂಪು ಅವರ 'ಬೊಮ್ಮನಹಳ್ಳಿಯ ಕಿಂದರಜೋಗಿ'ಯನ್ನು ಕುರಿತು ರಾಜು ಬರೆದ ಅಧ್ಯಯನಪೂರ್ಣ ತೌಲನಿಕ ಅಧ್ಯಯನ, ತೌಲನಿಕ ಸಾಹಿತ್ಯಕ್ಕೆ ಅಪೂರ್ವ ಕೊಡುಗೆಯಾಗಿದೆ. ರಾಬರ್ಟ್ ಬ್ರೌನಿಂಗ್ ೧೮೪೨ರಲ್ಲಿ ಪ್ರಕಟಿಸಿದ 'The Pied Pipe of Hamalin: A Child's Story' ಎನ್ನುವ ಕವಿತೆಯ ನೆನಪಿನ ಆಧಾರದಲ್ಲಿ ಕೆ. ವಿ. ಪುಟ್ಟಪ್ಪನವರು ೧೯೨೮ರಲ್ಲಿ 'ಬೊಮ್ಮನಹಳ್ಳಿಯ ಕಿಂದರಜೋಗಿ' ಕವಿತೆಯನ್ನು ಪ್ರಕಟಿಸಿದರು. ವೆಸ್ಲಿಯನ್ ಮಿಷನ್ ಹೈಸ್ಕೂಲಿನಲ್ಲಿ, ಐದನೆಯ ಫಾರಂನಲ್ಲಿ ಓದುತ್ತಿದ್ದಾಗ ಪುಟ್ಟಪ್ಪನವರು ಬ್ರೌನಿಂಗ್‌ನ ಕವಿತೆಯನ್ನು ಪಠ್ಯಪುಸ್ತಕದಲ್ಲಿ ಓದಿದ್ದರು. ಕ್ರೈಸ್ತ ಉಪಾಧ್ಯಾಯರಾಗಿದ್ದ ಶ್ರೀ ಸುಂದರ ಎನ್ನುವವರು ಆ ಕವಿತೆಯನ್ನು ನಾಟಕೀಯವಾಗಿ ಓದಿ ಹೇಳಿದ್ದರು.

ಕೆ. ವಿ. ಪುಟ್ಟಪ್ಪನವರು ಪೈಡ್ ಪೈಪರನ್ನು ಕಿಂದರಜೋಗಿಯಾಗಿ ಮಾರ್ಪಡಿಸಿರುವುದೇ ಅಲ್ಲದೆ ಹ್ಯಾಮಲಿನ್ನನ್ನು ಬೊಮ್ಮನಹಳ್ಳಿಯಾಗಿ ಮಾಡಿ ಪಾತ್ರಗಳನ್ನು ನಮ್ಮ ಜನಗಳ ಹಾಗೆ ಚಿತ್ರಿಸಿದ್ದಾರೆ. ಬೊಮ್ಮನಹಳ್ಳಿಯ ಇಲಿಗಳ ಕಾಟಕ್ಕೆ ಪರಿಹಾರವಾಗಿ ಪರಮೇಶ್ವರನ ಸಹಾಯಕ್ಕಾಗಿ ಒಂದು ಪುರಾಣ ಕತೆಯನ್ನೂ ಸೃಷ್ಟಿಸುತ್ತಾರೆ. ಬ್ರೌನಿಂಗ್ ಕತೆ ಒಂದು ಚಾರಿತ್ರಿಕ ಘಟನೆಗೆ ಸಂಬಂಧಿಸಿದೆ. ಜರ್ಮನಿಯಲ್ಲಿ ಹ್ಯಾಮೆಲ್ನ್ ಎನ್ನುವ ಒಂದು ಊರಿದೆ. ಅಲ್ಲಿ ೧೬೦೨ರ ಸುಮಾರಿಗೆ ಕಟ್ಟಿದ Pied Piper House ಎನ್ನುವ ಮನೆಯಿದೆಯಂತೆ. ಆ ಊರಿನಲ್ಲಿ ೧೨೮೪ನೆಯ ಇಸವಿಯಲ್ಲಿ ಬಣ್ಣ ಬಣ್ಣದ ಉಡುಪನ್ನು ತೊಟ್ಟ ವಾದ್ಯಗಾರನೊಬ್ಬ ೧೩೦ ಮಕ್ಕಳನ್ನು ಸಮ್ಮೋಹನಗೊಳಿಸಿ, ಆ ಮಕ್ಕಳೆಲ್ಲಾ ಎಲ್ಲೋ ಹೋಗುವ ಹಾಗೆ ಮಾಡಿದನಂತೆ. ಆ ಕತೆಯಲ್ಲಿ ಇಲಿಗಳ ಪಾತ್ರವೇ ಇಲ್ಲ. ಇನ್ನೊಂದು ಕತೆಯಲ್ಲಿ ೧೪ನೇ ಶತಮಾನದ ಯೂರೋಪಿನಲ್ಲೆಲ್ಲ

ಪ್ಲೇಗ್ ರೋಗ ಹರಡಿ ಲಕ್ಷಾಂತರ ಮಂದಿ ಸತ್ತದ್ದರ ಪ್ರಸ್ತಾಪವಿದೆ. ಈ ಎರಡೂ ಕತೆಗಳು ಸೇರಿ, ಈ ಕತೆ ತಮ್ಮ ಊರಿನಲ್ಲಿ ನಡೆಯಿತೆಂದು ಜನ ಹೇಳತೊಡಗಿ, ಅದೊಂದು ಜಾನಪದ ಕತೆಯಾಯಿತು. ಈ ಜಾನಪದ ಕತೆಯ ಬೇರೆ ಬೇರೆ ರೂಪಗಳು ಹುಟ್ಟಿಕೊಂಡವು. ಒಂದು ಕತೆಯಲ್ಲಿ ಇಲಿಗಳ ಕಾಟವಿತ್ತೆಂದು ಹೇಳಿದೆ. ಅಲ್ಲಿಗೊಬ್ಬ ಬಣ್ಣದ ತೊಡಿಗೆಯ ವಾದಕ (ಪೈಡ್ ಪೈಪರ್) ಹೆಗ್ಗಣಗಳನ್ನೆಲ್ಲ ನಾಶ ಮಾಡುವುದಕ್ಕಾಗಿ ಒಂದಿಷ್ಟು ಹಣವನ್ನು ಕೇಳಿದನಂತೆ. ಅವನ ಕೊಳಲಿನ ವಾದಕ್ಕೆ ಇಲಿಗಳೆಲ್ಲ ಅವನನ್ನು ಹಿಂಬಾಲಿಸಿ ವೇಜರ್ ನದಿಯಲ್ಲಿ ಮುಳುಗಿ ಸತ್ತವಂತೆ. ಈ ಕತೆ ಮಕ್ಕಳನ್ನು ಅಪಹರಿಸಿ ಸೈನ್ಯಕ್ಕೆ ಸೇರಿಸಿಕೊಂಡದ್ದನು ಸೂಚಿಸುತ್ತಿರಬಹುದು ಅನ್ನುತ್ತಾರೆ.

ಹೀಗೆ ಅನೇಕ ವಿವರಗಳನ್ನು ಎಚ್. ವೈ. ರಾಜಗೋಪಾಲ ವಿವಿಧ ಅಂತರ್ಜಾಲ-ಗಳಿಂದ ಸಂಗ್ರಹಿಸಿ ಬೊಮ್ಮನಹಳ್ಳಿಯ ಕಿಂದರಜೋಗಿ ಎನ್ನುವ ಕುವೆಂಪು ಕೃತಿಯನ್ನು ಜಾನಪದ ಅಧ್ಯಯನವನ್ನು ಮತ್ತು ತೌಲನಿಕ ಅಧ್ಯಯನಗಳ ಶಿಸ್ತಿಗೆ ಒಳಪಡುವಂತೆ ಮಾಡಿದ್ದಾನೆ. ಇದಕ್ಕೆ ಅವರ ಪ್ರೀತಿಯ ಮಗಳು ಮಾಧವಿ ರಿಜಿಯೋ ತುಂಬಾ ಸಹಾಯ ಮಾಡಿದಳಂತೆ.

ರಾಜು ಅನೇಕ ಜನರಿಗೆ ಸಹಾಯ ಮಾಡಿದ ವ್ಯಕ್ತಿಯಾಗಿ ಸಾಹಿತ್ಯ ಕ್ಷೇತ್ರದಲ್ಲಿ ಮೌಲಿಕ ಕೊಡುಗೆಗಳಿಂದ ಸ್ಮರಣೀಯ ವ್ಯಕ್ತಿಯಾಗಿದ್ದಾನೆ.

■

# ರಾಜಗೋಪಾಲರ ಸ್ಮರಣೆ

–ಪ್ರೊ. ಪಿ. ಶ್ರೀಪತಿ ತಂತ್ರಿ

ಎಚ್. ವೈ. ರಾಜಗೋಪಾಲರ ಪರಿಚಯ ನನಗಾದದ್ದು ಆರೇಳು ವರ್ಷಗಳ ಹಿಂದೆ ಅವರು ಉಡುಪಿಗೆ ಬಂದಾಗ. ನಾನು ನೆನಪಿಸಿಕೊಳ್ಳುವಂತೆ ಅದು ೨೦೧೨ರಲ್ಲಿ. ಅದಾಗಲೇ ಅಮೇರಿಕದ ಕನ್ನಡ ಸಾಹಿತ್ಯ ರಂಗದ ೨೦೦೯ರ ದ್ವೈವಾರ್ಷಿಕ ಸಮ್ಮೇಳನದಲ್ಲಿ ಅತಿಥಿಯಾಗಿ ಹೋಗಿಬಂದಿದ್ದ ವೈದೇಹಿಯವರು, ರಾಜಗೋಪಾಲ ಮತ್ತು ಅವರ ಪತ್ನಿ ವಿಮಲಾರನ್ನು ಉಡುಪಿಯ ಮಹಾತ್ಮ ಗಾಂಧಿ ಮೆಮೋರಿಯಲ್ ಕಾಲೇಜಿನಲ್ಲಿ, ಉಡುಪಿಯವರಿಗೆ ಪರಿಚಯಿಸುವ ಕಾರ್ಯಕ್ರಮ ಒಂದನ್ನು ಏರ್ಪಡಿಸಿದ ಸಂದರ್ಭ. ಮೊದಲ ಭೇಟಿಯಲ್ಲೇ ಅವರು ತೀರ ಆತ್ಮೀಯರಾಗಿ ನಡೆದುಕೊಂಡ ರೀತಿ ಮರೆಯಲಾಗದ್ದು. ಅವರ ಹಿರಿಯ ಸೋದರ ಡಾ. ಎಚ್. ವೈ. ಶಾರದಾಪ್ರಸಾದರನ್ನೇ ಮತ್ತೊಮ್ಮೆ ಭೇಟಿಯಾದೆನೋ ಎಂದು ನನಗನ್ನಿಸಿತು ಆಗ. ಶಾರದಾಪ್ರಸಾದರ ಪರಿಚಯ ನನಗಾದದ್ದು ಶಿವರಾಮ ಕಾರಂತರ ಮೂಲಕ, ೧೯೯೦–೧೯೯೨ರ ಕಾಲದಲ್ಲಿ. ಶಿವರಾಮ ಕಾರಂತರು ನನ್ನಿಂದ 'ಸನೂತನ ಧರ್ಮದರ್ಶನ'ವನ್ನು ಬರೆಯಿಸಿ, ಪ್ರಕಟಿಸಿದ್ದಲ್ಲದೆ, ಅದರ ಒಂದು ಪ್ರತಿಯನ್ನು ತಾವೇ ಶಾರದಾಪ್ರಸಾದರಿಗೆ ಕಳುಹಿಸಿಕೊಟ್ಟಿದ್ದರು. ಅದನ್ನು ಓದಿ ಶಾರದಾಪ್ರಸಾದರು ಮೆಚ್ಚುಗೆಯ ಪತ್ರವನ್ನು ಕಾರಂತರಿಗೆ ಬರೆದಿದ್ದರು. ಅದನ್ನು ಕಾರಂತರು ನನಗೆ ಕೊಟ್ಟಿದ್ದರು. ಆ ಮೂಲಕ ನಮ್ಮಿಬ್ಬರ ಪಾರಸ್ಪರಿಕ ಸಂಬಂಧ ಸಂಪರ್ಕವುಂಟಾಗಿತ್ತು.

ನಡೆ-ನುಡಿಯಲ್ಲಿ ರಾಜಗೋಪಾಲರು ಶಾರದಾಪ್ರಸಾದರ ವ್ಯಕ್ತಿತ್ವದ ಪ್ರತಿರೂಪವೆಂಬ ರೀತಿಯಲ್ಲಿ ಕಂಡರು. ಸರಳ, ಸಜ್ಜನ, ವಿನಯಶೀಲ, ನಿರ್ಮಲ ಹೃದಯದ ಸುಸಂಸ್ಕೃತವಾದ ಅಪರೂಪದ ವ್ಯಕ್ತಿತ್ವ, ಮಾತಿನಲ್ಲಿನ ಮೃದುತ್ವ ಎಂತಹವರನ್ನೂ ಅವರೆಡೆಗೆ ಸೆಳೆಯುವಂತಹದ್ದು.

ವೈದೇಹಿಯವರ ವಿನಂತಿಯ ಮೇರೆಗೆ, ಮಣಿಪಾಲದ ವಿಜಯನಾಥ ಶೆಣೈಯವರಿಗೆ ರಾಜಗೋಪಾಲರ ಬಗ್ಗೆ ಹೇಳಿ, ಶೆಣೈಯವರ 'Heritage Village'ಗೆ ಕರೆದುಕೊಂಡು ಹೋಗಿದ್ದೆ. ರಾಜಗೋಪಾಲರು ತಮ್ಮ ಪತ್ನಿಯ ಜತೆಗೆ ಶೆಣೈಯವರ 'ವಿಶ್ವಾಮಿತ್ರ ಸೃಷ್ಟಿ' ಎನ್ನಬಹುದಾದ ಅಲ್ಲಿಯ ಪಾರಂಪರಿಕ ಕಟ್ಟಡಗಳ ಪುನರ್ನಿರ್ಮಾಣ ಸಂಕೀರ್ಣವನ್ನು ಸುಮಾರು ಮೂರುಗಂಟೆಗಳ ಕಾಲ ಒಂದೊಂದಾಗಿ ಸೂಕ್ಷ್ಮವಾಗಿ ನೋಡುತ್ತಾ, ಶೆಣೈಯವರು ನೀಡುತ್ತಿದ್ದ ವಿವರಗಳನ್ನು ಕುತೂಹಲದಿಂದ ಆಲಿಸುತ್ತಾ ತಲ್ಲೀನರಾಗಿದ್ದರು. ಅದನ್ನು ನೋಡಲು ತನಗೆ ಅವಕಾಶ ದೊರೆತದ್ದು ತನ್ನ ಅದೃಷ್ಟವೆಂದು ಉದ್ಗರಿಸಿದ್ದರು. ವಿಜಯನಾಥ ಶೆಣೈಯವರಿಗೂ ಅವರ ಬಗ್ಗೆ ಆದರ-ಆತ್ಮೀಯತೆ ಬೆಳೆಯಿತು. ರಾಜಗೋಪಾಲರನ್ನು ಪರಿಚಯಿಸಿದ್ದಕ್ಕೆ ನನಗೆ ಧನ್ಯವಾದವೂ ಶೆಣೈಯವರಿಂದ ಲಭಿಸಿತು. ಶೆಣೈಯವರಿಗೆ ಶಾರದಾಪ್ರಸಾದರ ಬಗ್ಗೆಯೂ ಅಭಿಮಾನವಿತ್ತು. 'ಅಣ್ಣನ ಹಾಗೆಯೇ ತಮ್ಮ' ಎಂಬ ಮಾತು ವಿಜಯನಾಥರು ಹೇಳಿದ್ದು. ರಾಜಗೋಪಾಲರೂ ಕೂಡಾ, ವಿಜಯನಾಥರ ಪರ್ವತಸದೃಶ ಯೋಜನೆಗೆ ತನ್ನ ಒಂದು ಕಿರುಕಾಣಿಕೆಯೆಂದು ಹೇಳಿ, ಮುಚ್ಚಿದ ಲಕೋಟೆಯಲ್ಲಿ ಒಂದು ಚೆಕ್ಕು ಇಟ್ಟು ನೀಡಿದ್ದು ನೆನಪು. ಅದರ ಮರುವರ್ಷವೂ ನಾನು ನ್ಯೂಜೆರ್ಸಿಯಿಂದ ನನ್ನೂರಿಗೆ ಮರಳುವಾಗ ಮತ್ತೊಂದು ಲಕೋಟೆಯನ್ನು ನನ್ನ ಕೈಗಿತ್ತು ವಿಜಯನಾಥರಿಗೆ ತಲುಪಿಸಲು ಹೇಳಿದ್ದರು. ವಿಜಯನಾಥರೂ ಅದನ್ನು ಬಹಳ ಸಂತೋಷದಿಂದ ಸ್ವೀಕರಿಸಿದ್ದರು.

ನಾನು ಮೊದಲಸಲ ಅಮೆರಿಕೆಗೆ ಭೇಟಿಯಿತ್ತಾಗ, ರಾಜಗೋಪಾಲರು ನ್ಯೂಜೆರ್ಸಿಯ ಕನ್ನಡದ ಸಾಹಿತ್ಯಾಸಕ್ತರ ಬಳಗಕ್ಕೆ ನನ್ನನ್ನು ಪರಿಚಯಿಸಿದ್ದಲ್ಲದೆ, ಆ ಬಳಿಕವೂ ಪ್ರತಿ ವರ್ಷ ನಾನು ಅಲ್ಲಿಗೆ ಬಂದಾಗ ಒಂದೋ ಎರಡೋ ಸಂವಾದ ಕೂಟವನ್ನು ಏರ್ಪಡಿಸುತ್ತಿದ್ದರು. ಅವರ ಮೂಲಕ ನನಗೆ ಅಲ್ಲಿಯ ಕನ್ನಡದ ಸಾಹಿತ್ಯಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದ ಹೆಚ್ಚಿನ ಎಲ್ಲರ ಪರಿಚಯ ಮಾತ್ರವಲ್ಲ, ನಿಕಟ ಸಂಪರ್ಕ, ಸ್ನೇಹದ ಪ್ರಯೋಜನವೂ ಲಭಿಸಿದ್ದನ್ನು ಮರೆಯುವಂತಿಲ್ಲ. ೨೦೧೩ರಲ್ಲಿ ಹ್ಯೂಸ್ಟನ್ ನಗರದಲ್ಲಿ ನಡೆದ, ಕನ್ನಡ ಸಾಹಿತ್ಯ ರಂಗದ ದ್ವೈವಾರ್ಷಿಕ ಸಮಾವೇಶಕ್ಕೆ ಅತಿಥಿಯಾಗಿ ನನ್ನನ್ನು ಕರೆಸಿಕೊಂಡು, ಕರ್ನಾಟಕದ ಕರಾವಳಿಯ ಸಮಾಜ-ಸಂಸ್ಕೃತಿಯ ಪರಿಚಯವನ್ನು ಮಾಡಿಕೊಡಲು ಕೇಳಿಕೊಂಡಿದ್ದರು. ಅಲ್ಲಿ ನೆರೆದವರಿಗೆ ನನ್ನ ಪರಿಚಯವನ್ನು ಮಾಡಿದ್ದೂ ಅವರೇ.



ಬೆಂಗಳೂರಿನಲ್ಲಿ, ಅವರ ತಾಯಿ ಶ್ರೀಮತಿ ಎಚ್. ವೈ. ಸರಸ್ವತಿಯವರ ಬಗ್ಗೆ ಸಂಪಾದಿಸಿದ 'ಹಲವು ಮಕ್ಕಳ ತಾಯಿ' ಗ್ರಂಥದ ಬಿಡುಗಡೆಯ ಸಂದರ್ಭದಲ್ಲೂ ನನ್ನನ್ನು ಬರಲೇಬೇಕೆಂದು ಆತ್ಮೀಯವಾಗಿ ಒತ್ತಾಯಿಸಿದ್ದರಿಂದ ಆ ಕಾರ್ಯಕ್ರಮಕ್ಕೆ ಹೋಗಿದ್ದೆ. 'ಹಲವು ಮಕ್ಕಳ ತಾಯಿ' ಒಂದು ಅಪೂರ್ವ ಕೃತಿ. ಅದನ್ನು ಓದಿದ ಬಳಿಕ ಅವರ ತಾಯಿ, ಅವರಿಗೆ ಮಾತ್ರವಲ್ಲ, ನಮ್ಮೆಲ್ಲರಿಗೂ ತಾಯಿಯೋ ಎಂಬಂತೆ ನನಗನ್ನಿಸಿತು. ದೇವಿಯನ್ನು ಸ್ತುತಿಸುವಾಗ, 'ಯಾ ದೇವೀ ಸರ್ವಭೂತೇಷು ಮಾತೃರೂಪೇಣ ಸಂಸ್ಥಿತಾ'– ಎಂದು ಸ್ತುತಿಸುತ್ತೇವೆ. ಎಲ್ಲರಿಗೂ 'ಮಾತೃರೂಪೇಣ ಸಂಸ್ಥಿತಾ' ಈ ಸರಸ್ವತಿಯೇ ಆಗಿರಬಹುದೇ! ಎಂದು ಒಂದು ಕ್ಷಣ ನಮಗನ್ನಿಸಿದರೆ ತಪ್ಪಾಗದು. ಪ್ರಾಯಃ ರಾಜಗೋಪಾಲರು, ಶಾರದಾಪ್ರಸಾದರು, ನಾರಾಯಣದತ್ತರು, ಮೋಹನ್‌ರಾಮ್, ಎಚ್. ವೈ. ಮುಕುಂದ, ಮತ್ತು ನೀರಜಾರಂತಹವರಿಗೆ ಜನ್ಮವಿತ್ತು, ಎಲ್ಲರನ್ನೂ ಅತ್ಯಂತ ಸಜ್ಜನರನ್ನಾಗಿ, ಉದಾರಚರಿತರನ್ನಾಗಿ, ಉದಾರಮನಸ್ಕರನ್ನಾಗಿ ಬೆಳೆಸಿದ ಸರಸ್ವತಿಯವರನ್ನು ಎಲ್ಲರೂ 'ಮಾತೃರೂಪಿಣಿ'ಯಾಗಿ ಭಾವಿಸಿದರೆ ಆಶ್ಚರ್ಯವಿಲ್ಲ. ಇವರೆಲ್ಲರೂ, ತಂದೆ ಯೋಗಾನರಸಿಂಹ ಮತ್ತು ತಾಯಿ ಸರಸ್ವತಿಯವರು ತಮ್ಮ ತಪಸ್ವೀ, ನಿಷ್ಕಳಂಕ, ಆದರ್ಶಜೀವನದ ಮೂಲಕ ಹೆತ್ತು ಬೆಳೆಸಿ ಸಮಾಜಕ್ಕೆ ನೀಡಿದ ಕೊಡುಗೆಯೆನ್ನಬೇಕು.

ಒಂದೆರಡು ವರುಷಗಳ ಹಿಂದೆ, ಅವರ ಸೋದರ ನಾರಾಯಣದತ್ತರ ಬಗೆಗೆ ಹಿಂದಿಯಲ್ಲಿದ್ದ ಹೊತ್ತಗೆಯನ್ನು ಕನ್ನಡಕ್ಕೆ ಅನುವಾದಿಸಲು ಯೋಗ್ಯರಾದವರನ್ನು ಹುಡುಕುತ್ತಿದ್ದಾಗ, ನನ್ನ ಗೆಳೆಯ ಭಾಸ್ಕರ ಮೈಯ್ಯರಿಗೆ ಆ ಕೆಲಸವನ್ನು ಮಾಡಲು ಒಪ್ಪಿಸಿದ್ದೆ. ಅತ್ಯಂತ ಸುಂದರ ಅನುವಾದವದು. ಅದರ ಬಿಡುಗಡೆಗೆ ಮಾತ್ರ, ರಾಜಗೋಪಾಲರಿಗೆ ಸ್ವತಃ ಉಪಸ್ಥಿತರಿದ್ದು ಸಂತೋಷಪಡಲು ಸಾಧ್ಯವಾಗದಂತಹ ಸ್ಥಿತಿಗೆ ಅವರ ಆರೋಗ್ಯ ತಲುಪಿದ್ದುದು ಶೋಚನೀಯ. ಆದರೂ, ಬೆಂಗಳೂರಿನಲ್ಲಿ ನಡೆದ ಇಡೀ ಕಾರ್ಯಕ್ರಮವನ್ನು ಅವರು ಪತ್ನಿ ವಿಮಲಾರವರ ಜತೆ, ವಿಡಿಯೋ ಮೂಲಕ ನೋಡಿ, ತಮ್ಮ ಸಂತೋಷ ವ್ಯಕ್ತಪಡಿಸಿದ್ದರು.

ನಾನು ನ್ಯೂಜೆರ್ಸಿಯಲ್ಲಿದ್ದಾಗೆಲ್ಲ ದೂರವಾಣಿಯ ಮೂಲಕ ಸದಾ ಸಂಪರ್ಕದಲ್ಲಿದ್ದೆವು. ನನಗೊಬ್ಬ ಆತ್ಮೀಯ ಹಿರಿಯಣ್ಣನೆಂಬ ಭಾವನೆ ಅವರ ಬಗ್ಗೆ ಬೆಳೆದು ಗಟ್ಟಿಯಾಗಿತ್ತು.

ಒಬ್ಬ ಅತ್ಯಂತ ಸಭ್ಯ, ಸ್ವಭಾವತಃ ಸಜ್ಜನ, ಸಾಹಿತ್ಯ ಮಾತ್ರವಲ್ಲದೆ ಎಲ್ಲ ಜ್ಞಾನಪ್ರಕಾರಗಳ ಬಗ್ಗೆಯೂ ಕುತೂಹಲ, ತಿಳಿದುಕೊಳ್ಳುವ ಆಸಕ್ತಿ, ಭಾರತದ ಜ್ಞಾನಪರಂಪರೆಯನ್ನು ನಿರ್ದುಷ್ಟವಾಗಿ, ಮುಕ್ತವಾಗಿ ಅರಿಯುವ ಹಂಬಲ– ಇವೆಲ್ಲವೂ ಒಟ್ಟಾಗಿ ಬೆಳೆದ, ಬೆಳೆಸಿಕೊಂಡ, ಹುಟ್ಟಿದ ನೆಲ, ಸಮಾಜ, ಸಂಸ್ಕೃತಿಯಿಂದ ದೂರವಿದ್ದೂ ಮಾನಸಿಕವಾಗಿ

ಅದರಲ್ಲೇ ತನ್ನನ್ನು ತೊಡಗಿಸಿಕೊಂಡ, ತನ್ನೆಲ್ಲ ಸೋದರ-ಸೋದರಿಯರ ಕುಟುಂಬಕ್ಕೆ ಅತ್ಯಂತ ಪ್ರಿಯನಾದ ಹಿರಿಯ ಬಂಧುವಾಗಿ ಬದುಕಿದ, ತನ್ನ ಸುದೀರ್ಘ ಜೀವನದಲ್ಲಿ ಎಲ್ಲರಿಗೂ ಒಳ್ಳೆಯವನಾಗಿ, ಯಾರೂ ಕೆಟ್ಟವನೆಂದು ಭಾವಿಸದ ರೀತಿಯಲ್ಲಿ ಬದುಕಿದ, ನಿಜವಾದ ಮಾನವೀಯತೆಯ ಬದುಕು ಹೇಗಿರಬೇಕೆಂದು ತೋರಿಸಿಕೊಟ್ಟ ಜೀವನ- ಇದು ನನ್ನ ಆತ್ಮೀಯ ಗೆಳೆಯ ರಾಜಗೋಪಾಲರದ್ದು.

ಅಮೆರಿಕದ ನೆಲವನ್ನು ತಮ್ಮ ನೆಲೆಯಾಗಿ ಸ್ವೀಕರಿಸಿ, ತಮ್ಮ ಪ್ರಿಯವಾದ ಕನ್ನಡದ ಅಸ್ಮಿತೆಯನ್ನು ಕಾಪಾಡಿಕೊಂಡು ಬದುಕುತ್ತಿರುವ ಅಲ್ಲಿಯ ಹಿರಿಯ ತಲೆಮಾರಿನವರೆಲ್ಲರಿಗೆ ಅತ್ಯಂತ ಪ್ರಿಯವಾದ ಹೆಸರು, ವ್ಯಕ್ತಿತ್ವವಾಗಿದ್ದು ಇದೀಗ ನೆನಪಾಗಿ, ಚಿರಂಜೀವಿತ್ವವನ್ನು ಪಡೆದವರು- ಡಾ. ಎಚ್. ವೈ. ರಾಜಗೋಪಾಲರು, ಬಾಳಿನಲ್ಲಿ ಧನ್ಯತೆಯನ್ನು ಕಂಡವರು.



# ದೂರವಿದ್ದೂ ಹತ್ತಿರಾದ ಬಂಧು ಎಚ್. ವೈ. ರಾಜಗೋಪಾಲ್

**–ವೈದೇಹಿ**

ಅದು ದಶಂಬರ ೨೦೦೮, ಅಮೆರಿಕಾದಿಂದ ರಾಜಗೋಪಾಲ್ ಅವರ ಪತ್ರವೊಂದು ಬಂತು. ೨೦೦೯ರ ಮೇ ತಿಂಗಳಲ್ಲಿ ಅಮೆರಿಕಾದ ಕನ್ನಡ ಸಾಹಿತ್ಯ ರಂಗ ಹಮ್ಮಿಕೊಂಡಿರುವ ವಸಂತೋತ್ಸವಕ್ಕೆ ಬಂದು ಸಾಹಿತ್ಯ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಎಂದು ಆ ಪತ್ರಮೂಲಕ ಆಹ್ವಾನ ನೀಡಿದ್ದರು. ಅಮೆರಿಕಾಕ್ಕೆ ಒಂದು ಬಾರಿ ಹೋಗಿ ಬಂದ ನನಗೋ ಅಲ್ಲಿಗೆ ಮತ್ತೆ ಹೋಗುವ 'ಜಂಬೇ' – ಎಂದರೆ ಹಂಬಲವೇ– ಇರಲಿಲ್ಲ. ಹೇಳಿದೆ. ಯಾರನ್ನಾದರೂ ಸೂಚಿಸಿ, ಹಿರಿಯ ಸೃಜನಶೀಲ ಲೇಖಕಿಯಾದರೆ ಹೆಚ್ಚು ಸಂತೋಷ ಎಂದರು. ನಮ್ಮ ವೀಣಾ ಶಾಂತೇಶ್ವರ ಅವರನ್ನು ಸೂಚಿಸಿದೆ. ಅವರು ಸರಿ; ನೀವೂ ಬನ್ನಿ, ಇಬ್ಬರೂ ಬನ್ನಿ ಎಂದು ಮತ್ತೆ ಆಗ್ರಹಪೂರ್ವಕ ಪತ್ರ ಬರೆದರು. ಫೋನು ಮಾಡಿದರು. ಅವರ ದನಿಯಲ್ಲಿನ ಆಪ್ತತೆ ಹೇಗಿತ್ತೆಂದರೆ ಒಪ್ಪದೆ ಇರಲು ಸಾಧ್ಯವೇ ಇರಲಿಲ್ಲ. ಸರಿ, ನಾನೂ ಹೊರಟೆ. ಅಚ್ಚರಿಯೆಂದರೆ ಅದುವರೆಗೆ ನಾನು ರಾಜಗೋಪಾಲ ಅವರನ್ನು ಕಣ್ಣಲ್ಲಿ ಕಂಡವಳಲ್ಲ, ಕೇಳಿದವಳೂ ಅಲ್ಲ.

ಕೆಲದಿನ, ನಮ್ಮ ಜೆಟ್‌ಲಾಗ್ ಕಳೆದ ನಂತರವೇ ಉತ್ಸವ. ಅದುವರೆಗೆ ನಮಗೆ ಮೇರಿಲ್ಯಾಂಡಿನಲ್ಲಿ ಶಶಿಕಲಾ ಚಂದ್ರಶೇಖರ್ ಅವರ ಮನೆಯಲ್ಲಿ ವಸತಿ ಏರ್ಪಡಿಸಿದ್ದರು.

ಸಂಜೆ ನಮ್ಮನ್ನು ಮಾತಾಡಿಸಲು ರಾಜಗೋಪಾಲ್ ತಮ್ಮ ಕನ್ನಡ ಸಾಹಿತ್ಯ ರಂಗದ ಬಳಗದ ಗುಂಡೂ ಶಂಕರ್ ಮತ್ತಿತರರೊಂದಿಗೆ ಶಶಿ ಮನೆಗೆ ಬಂದರು. ಅವರು ಅವರೆಂದು ತಿಳಿದದ್ದು ಆಗಲೇ. ಎಚ್. ವೈ. ಶಾರದಾ ಪ್ರಸಾದರ ತಮ್ಮ ಅವರು ಎಂದು ಗೊತ್ತಾಗಿದ್ದೂ ಆಗಲೇ.

ನೋಡಿದೊಡನೆ ಗೌರವ ಹುಟ್ಟುವಂಥ ಮುಖಭಾವ ಅಂತಾರಲ್ಲ, ಹಾಗಿದ್ದರು ಅವರು. ಮಾತು ನಡವಳಿಕೆ ಎಲ್ಲದರಲ್ಲಿಯೂ ನಸುನಗು ಬೆರೆತೇ ಇರುವ ಸ್ನಿಗ್ಧ ಗಾಂಭೀರ್ಯ ಅವರದು. ಅಂದು ಮಾತಾಡಿ 'ಶಶಿ ಜೊತೆ ನೀವು ಇದ್ದೀರಿ ಎಂದರೆ ನಮಗೆ ಚಿಂತೆಯೇ ಇಲ್ಲ' ಎಂದು ಪರೋಕ್ಷವಾಗಿ ಶಶಿ ಅವರ ವ್ಯಕ್ತಿತ್ವ ಪರಿಚಯಿಸಿದವರು. ಅದು ಮುಂದೆ ನೂರಕ್ಕೆ ನೂರು ಸತ್ಯವಾಯಿತು. ಶಶಿಯ ಮನೆಯಲ್ಲಿ ವೀಣಾ ಮತ್ತು ನಾನು ಕಳೆದ ಆ ದಿನಗಳು ಈಗಲೂ ಮನದಲ್ಲಿ ಮುದದಿ ನೆನೆವ ದಿನಗಳಾಗಿ ಉಳಿದಿವೆ. ಸೌಜನ್ಯ, ತುಂಟತನ, ಬರವಣಿಗೆಯ ಆಸೆಯ ಶಶಿ ಆಗಲೇ ಕೆಲ ಕಥೆಗಳನ್ನು ಬರೆದಿದ್ದಳು. ಕೇರಳಸುಂದರಿಯಂತೆ ಕಾಣುವ ಶಶಿ, ಉತ್ಸಾಹದ ಚಿಲುಮೆ. ಒಂದು ದಿನವೂ ನಮಗೆ ಬೇಸರ ಅಂತ ಆಗಿದ್ದಿಲ್ಲವಲ್ಲ, ಆ ಅದುವರೆಗಿನ ತೀರಾ ಅಪರಿಚಿತ ದಂಪತಿಗಳ ಮನೆಯಲ್ಲಿ! ಇರಲಿ. ಅದೊಂದು ಬೇರೆಯೇ ಬರಹಕ್ಕೆ ಸಲ್ಲುವಂಥದು.

ಮೇ ಮೊದಲ ವಾರದಲ್ಲಿ ನಡೆದ ವಸಂತೋತ್ಸವದಲ್ಲಿ ರಾಜಗೋಪಾಲ್ ಪತ್ನಿ ವಿಮಲಾ ಅವರ ಭೇಟಿಯಾಯ್ತು. ಬಲುಬೇಗ ಆತ್ಮೀಯರಾಗುವ ಪೈಕಿ, ವಿಮಲಾ. ಅವರು ಕನ್ನಡದ ಹಿರಿಯ ಸಾಹಿತಿ ವಿದ್ವಾನ್ ಎಲ್. ಗುಂಡಪ್ಪನವರ ಮಗಳು, ಜಾನಪದ ಹಾಡುಗಾರ್ತಿ ಅಂತೆಲ್ಲ ತಿಳಿದದ್ದೂ ಆಗಲೇ. ಸಂಗೀತಕ್ಕೆ ಸಂಬಂಧಿಸಿದ ಮ್ಯೂಸಿಕ್ ಥೆರೆಪಿಯ ಉದ್ಯೋಗದಲ್ಲಿದ್ದ ವಿಮಲಾ, ಹಾಡುಗಾರ್ತಿ ಅಷ್ಟೇ ಅಲ್ಲ; ಒಳ್ಳೆಯ ಮಾತುಗಾತಿ ಕೂಡ. ಹಳೆಯ ನೆನಪುಗಳ ಭಂಡಾರ; ಭಂಡಾರ ಅಲ್ಲ, ಖನಿ. ಬೆಂಗಳೂರಿನಲ್ಲಿ ತವರುಮನೆಯಲ್ಲಿ ತಾನು ಹತ್ತಿರದಿಂದ ಕಂಡ ಅನೇಕ ಸಾಹಿತಿಗಳ ಮತ್ತು ಆಕಾಶವಾಣಿಯ ವೃತ್ತಿ ಜೀವನದಲ್ಲಿ ಕಂಡ ಅಸಂಖ್ಯ ಸಂಗೀತಗಾರರ ಸ್ವಾರಸ್ಯಕರ ನೆನಪುಗಳನ್ನು ತೆರೆದರೆಂದರೆ, ಅದು ನೆನಪುಗಳ ದಭದಭೆ. ಕೇಳುವವರು ಕೇಳುತ್ತಲೇ ಇರಬೇಕು, ಅಂತಹ ಓಘ ಅದಕ್ಕೆ. ಅವರ ಬರವಣಿಗೆಯೂ ಅಷ್ಟೇ ಲಲಿತ ಮತ್ತು ಸುಂದರ; ಹೀಗೆನ್ನುವುದು ಸುಮ್ಮನೆ ಅಲ್ಲ. ಇದಕ್ಕೆ ಅವರು ಮಾಸ್ತಿಯವರ ಕುರಿತು ಬರೆದ ಲೇಖನವೇ ಸಾಕ್ಷಿ. ಬರೆದಿರುವುದು ಒಂದಿನಿತು ಮಾತ್ರ, ಬರೆಯಲಿರುವುದು ಇನ್ನೂ ಸಾವಿರ ಇದೆ ಎನ್ನುವ ವಿಮಲಾ ಎಲ್ಲವನ್ನೂ ಹೇಳಿಹೇಳಿಯೇ ಕರಗಿಸಿ ಬಿಡುತ್ತಾರೋ ಎಂಬ ಆತಂಕ ನನಗೆ. ನಾನದನ್ನು ಅವರಿಗೆ ಹೇಳಿದಾಗೆಲ್ಲ ದನಿಗೂಡಿಸುವರು ಪತಿ ರಾಜಗೋಪಾಲ್. ಪತ್ನಿಯೆಂದರೆ ಪ್ರೀತಿ ಜೊತೆಗೇ ಒಂದು ಬಗೆಯ ಕೊಂಡಾಟದಿಂದ ಕೂಡಿದ ಗೌರವ. ವಿಮಲಾ ಕುರಿತು ಹೇಳ ಹೊರಟರೆಂದರೆ



ರಾಜಗೋಪಾಲರ ನೆನಪೂ ಹಿನ್ನಡೆಯಲ್ಲಿ ಸಾಗುವುದು. ತಾನು ಆಕೆಯನ್ನು ಭೇಟಿ ಮಾಡಿದ್ದರಿಂದ ತೊಡಗಿ ತಮ್ಮ ಮದುವೆಯಾಗಿದ್ದು, ಅಲ್ಲಿಂದ ತಾವು ಅಮೆರಿಕೆಗೆ ಬಂದು ಇಲ್ಲಿ ಸಂಸಾರ ಹೂಡಿದ ಕತೆ ಎಲ್ಲವನ್ನು ಈಗ ಈಗ ನಡೆಯಿತೇನೋ ಎಂಬಷ್ಟು ಉತ್ಕಂಠರಾಗಿ ಹೇಳುವರು. ಅದು ಕೇವಲ ನಿರೂಪಣೆಯಷ್ಟೇ ಅಲ್ಲ. ಅಂದು ಅಮೆರಿಕಾ ಅಮೆರಿಕಾ ಎಂದು ಮಹತ್ವಾಕಾಂಕ್ಷೆಯಿಂದ ಬಂದು ನೆಲೆಸಿದವರ ಬದುಕಿನ ಕಥನವೂ ಆಗಿರುವುದರಿಂದಲೇ ಕೇಳುವವರು ತಲ್ಲೀನರಾಗಿ ಕೇಳಬೇಕು, ಅಂಥ ಗುಣದ ನಿರೂಪಣೆಯದು. ಅದರಲ್ಲಿ ಮನೆ ಊರು ರಾಜ್ಯ ದೇಶ ಬಿಟ್ಟು ಬರುವಾಗಿನ ಸಖೇದ ಸಂಭ್ರಮ, ಬಂದ ಮೇಲಿನ ಹೊಂದಾಣಿಕೆಯ ಹೊಯ್ದಾಟ, ಆಕರ್ಷಣೆ, ವಿಕರ್ಷಣೆ ಎಲ್ಲದರ ನಡುವೆ ದಿನ ಹೋಗಿದ್ದೇ ಗೊತ್ತಾಗದೆ ವರ್ಷಗಳೇ ಉರುಳಿಹೋದ, ಆಯುಷ್ಯದ ಬಹುಭಾಗವೇ ಕಳೆದುಹೋದ ಬಗೆ, ಒಂದೊಂದು ಸಲ ಇಂಡಿಯಾಕ್ಕೆ ಹೋಗಿ ಬರುವಾಗಲೂ ಪಡುವ ವಿವಿಧ ಬಗೆಯ ಖುಷಿ ಮತ್ತು ಸಂಕಟ, ವಿಭ್ರಮೆ– ಮುಂತಾಗಿ ಎಷ್ಟೆಲ್ಲಾ ವಿಷಯ ವಿಚಾರಗಳು ತುಂಬಿತುಳುಕುತಿದ್ದವು.

ನಮ್ಮನ್ನು ಅಮೆರಿಕೆಗೆ ಕರೆಸಿದ ರಾಜಗೋಪಾಲ – ವಿಮಲಾ ಸಮಾರಂಭ ಮುಗಿಯುತ್ತಲೇ ತಮ್ಮ ಮನೆಯಲ್ಲಿಯೂ ಎರಡು ದಿನ ಇರಿಸಿಕೊಂಡು, ಫಿಲಡೆಲ್ಫಿಯಾದ ಸುತ್ತಮುತ್ತ ತಿರುಗಿಸಿದ್ದರು. ಆಗಲೇ ಅವರಿಗೆ ಎಪ್ಪತ್ತರ ವಯಸ್ಸು. ಆದರೆ ವಯಸ್ಸು ಮಣಿಸದ ನಿತ್ಯೋತ್ಸಾಹದ ದಂಪತಿ ಅವರು. ಒಂದು ಚಿತ್ರಾನ್ನದಲ್ಲಿಯೂ ಮೈಸೂರಿನ ಮನೆಯ ಪರಿಮಳವನ್ನು ನೆನೆವವರು. ಇಂಜಿನಿಯರ್ ರಾಜಗೋಪಾಲ್ ಮೂಲತಃ ಸಾಹಿತ್ಯ ಮತ್ತು ಸಂಗೀತಪ್ರಿಯರು. ಇವತ್ತು ಅಮೆರಿಕಾದಲ್ಲಿ ಕನ್ನಡ ಉಳಿದಿದೆಯೆಂದರೆ ಅದರಲ್ಲಿ ರಾಜಗೋಪಾಲ್ ಅವರ ಪಾತ್ರವೂ ಮಹತ್ವದ್ದು. 'ಕನ್ನಡ ಸಾಹಿತ್ಯ ರಂಗ' ಎಂಬ ಸಂಸ್ಥೆ ಕಟ್ಟಿಕೊಂಡು ಅದರ ಮೂಲಕ ಕನ್ನಡ ತಮ್ಮಿಂದ ಮರೆಯಾಗದಂತೆ ಅಥವಾ ಕನ್ನಡ ತಾಯಿ ತಮ್ಮನ್ನು ಮರೆಯದಂತೆ ಕಾಪಾಡಿಕೊಳ್ಳುವ ಪ್ರಯತ್ನದಲ್ಲಿ ನಾಗ ಐತಾಳ, ಮೈ. ಶ್ರೀ. ನಟರಾಜ ಮುಂತಾದ ಸಮಾನ ಮನಸ್ಕರನ್ನು ಕೂಡಿಕೊಂಡು ದುಡಿದವರು. ಕನ್ನಡ ಸಾಹಿತ್ಯ ರಂಗ ಬಳಗದ ಅಧ್ಯಕ್ಷರಾಗಿ ಎರಡು ವರ್ಷಕ್ಕೊಮ್ಮೆ ವಸಂತೋತ್ಸವ, ಅಮೆರಿಕಾದಲ್ಲಿರುವ ಲೇಖಕರ ಪುಸ್ತಕ ಪ್ರಕಟಣೆ ಇತ್ಯಾದಿಗಳಲ್ಲಿ ಅನವರತ ತೊಡಗಿಕೊಂಡವರು. ಸಂಘಟನೆಯಲ್ಲಿಯೂ ಸೈ ಎನಿಸಿಕೊಂಡವರು. ನುಡಿಯ ಘನತೆಯನ್ನು ಕಾಯ್ದುಕೊಂಡು ಕನ್ನಡವನ್ನು ತಮ್ಮ ಪಾರಂಪರಿಕ ಆಸ್ತಿಯಂತೆ ಜತನದಿಂದ ಜೋಪಾನ ಮಾಡಿಕೊಂಡವರು. ಸ್ವತಃ ಅವರು ಬರಹಗಾರರು. ಗಾಯಕರು ಕೂಡ. ಆದರೆ ತನಗಾಗಿ ಹಾಡಿಕೊಳ್ಳುವ ಅಥವಾ ಗುನುಗುವ ಪಂಥದವರು.

ಅಮೆರಿಕಾದಲ್ಲಿ ಮತ್ತು ನಮ್ಮೂರಲ್ಲಿ ಅವರು ವೇದಿಕೆಯ ಮೇಲೆ ಮಾತಾಡಿರುವುದನ್ನು ನಾಲ್ಕೈದು ಬಾರಿ ಕೇಳಿದವಳು ನಾನು. ಅವರ ಕನ್ನಡ ಭಾಷಣವೆಂದರೆ ಅದು ಸಂಪೂರ್ಣ

ಕನ್ನಡದಲ್ಲಿಯೇ ನಡೆವ ಭಾಷಣ. ಸಹಜವಾಗಿ ಹೊಮ್ಮಿಹೊಮ್ಮಿ ಬರುವ ಕನ್ನಡ ಶಬ್ದಗಳಿಂದ ಕೂಡಿದ ಭಾಷಣ. ನಮ್ಮ ಕನ್ನಡ ಭಾಷೆ ಇಷ್ಟು ಚೆಲುವಾಗಿದೆಯೇ ಎಂದು ಕನ್ನಡ ನಾಡಿನಲ್ಲಿಯೇ ಉಸಿರಾಡುವ ನಾವೇ ಅಂದುಕೊಳ್ಳಬೇಕು, ಅಂತಹ ಮಾತುಗಾರಿಕೆ ಅವರದು. ತಪ್ಪಿಯೂ ಒಂದೇ ಒಂದು ಇಂಗ್ಲಿಷ್ ಶಬ್ದಕ್ಕೆ ನಡುವೆ ಮೂಗುಹಾಕಲು ಗುಂಡಿಗೆ ಏಳದು. ಸ್ವತಂತ್ರವಾದ ಆತ್ಮವಿಶ್ವಾಸದಿಂದ ಕೂಡಿದ ಸರಾಗವಾದ 'ಲೀಲಾ'ಜಾಲವಾದ ಜೊತೆಗೇ ಪ್ರಬುದ್ಧವಾದ ಕನ್ನಡ ಕೇಳಬೇಕೆಂದರೆ ರಾಜಗೋಪಾಲ್ ಅವರ ಭಾಷಣ ಕೇಳಬೇಕು ಎಂಬಷ್ಟರ ಮಟ್ಟಿಗೆ ಕನ್ನಡದಲ್ಲಿ ಚಿತ್ತವನ್ನು ನಿತ್ಯ ನಿಲ್ಲಿಸಿಕೊಂಡವರು ಅವರು. ಅವರ ಬರವಣಿಗೆಯಾದರೂ ಅಷ್ಟೆ. ಪ್ರಶಸ್ತವೆಂಬುದಕ್ಕೆ ಇನ್ನೊಂದು ಹೆಸರು. ಅವರ 'ಗಾಂಧೀಯುಗಕ್ಕೆ ಕನ್ನಡಿ' ಕೃತಿ, ಇದಕ್ಕೊಂದು ಪುಟ್ಟ ಉದಾಹರಣೆ. ತನ್ನ ಸೋದರರ, ತಾಯಿ, ತಂದೆ ಕುರಿತು ಅವರು ಬರೆದ ಲೇಖನಗಳಲ್ಲಾಗಲೀ, ಅವರ ಕೆಲ ಪ್ರಸ್ತಾವನೆಗಳಲ್ಲಾಗಲೀ ನಾವು ಕಾಣುವುದು ಎಲ್ಲೂ ಕಲುಷಿತವಾಗದ, ಹಾಗಂತ ಕೃತಕತೆ ಅಥವಾ ಬಲವಂತದ ಗುರುತೂ ಇಲ್ಲದ, ಭಾವನೆಗಳನ್ನು ಸ್ವಚ್ಛವಾಗಿ ಪ್ರತಿಫಲಿಸುವ ಸುಶುಭ್ರ ಕನ್ನಡವನ್ನು. ಆ ವ್ಯಕ್ತಿತ್ವವೇ ಅಂಥದು. ಅವರೊಡನೆ ಒಡನಾಡುವಾಗೆಲ್ಲ ಅವರ ಸ್ವಚ್ಛ ಮನಸ್ಸು, ಪಕ್ವ ಚಿಂತನೆ, ಸಾವಧಾನತೆ, ತಾಳ್ಮೆ, ದಾರ್ಶನಿಕತೆ ಅನುಭವಕ್ಕೆ ತಾಕುತಿತ್ತು. ನನಗನಿಸುವಂತೆ ಅವು ಅವರ ವ್ಯಕ್ತಿತ್ವದ ಮುಖ್ಯಭಾಗಗಳೇ ಆಗಿದ್ದುವು. ಯಾವುದನ್ನೇ ಕೈಗೆತ್ತಿಕೊಳ್ಳಲಿ, ಅದು ಮುಗಿಯುವ ವರೆಗೂ ತನ್ಮಯತೆಯನ್ನೇ ಹೊದ್ದಂತೆ, ಗಮನ ಒಂದಿಷ್ಟೂ ಅತ್ತಿತ್ತ ಸರಿಯದಂತೆ, ಅದು ಬಿಟ್ಟು ಇನ್ನೊಂದು ಈ ಜಗತ್ತಿನಲ್ಲಿ ಇಲ್ಲ ಎನುವಂತೆ ದೈಹಿಕ ಆಯಾಸದ ಪರಿವೆಯೇ ಇಲ್ಲದಂತೆ ಕೆಲಸ ಮಾಡುವ ಪರಿ, ಅದು ಅವರದೇ. ಕೊನೆಯ ದಿನಗಳಲ್ಲಿಯೂ ತಮ್ಮ ಅಣ್ಣ ನಾರಾಯಣ ದತ್ತ ಅವರ ಕುರಿತ ಕೃತಿಯ ಪ್ರಕಟಣೆಯ ಕೆಲಸದಲ್ಲಿ ಅವರು ಮಗ್ನರಾಗಿದ್ದುಕೊಂಡೇ ಇದ್ದರಲ್ಲವೆ!

ರಾಜಗೋಪಾಲ್ ಎಷ್ಟು ಲೋಕಪ್ರೇಮಿಯೋ ಅಷ್ಟೇ ಅಪ್ಪಟ ಕುಟುಂಬ ಪ್ರೇಮಿಯೂ. ತನ್ನ ತಂದೆ ತಾಯಿ ಅಣ್ಣ ತಮ್ಮಂದಿರು ಅಕ್ಕ ತಂಗಿ ಎಲ್ಲರ ನೆನಪಿನಲ್ಲಿ ಸದಾ ತೋಯುತ್ತಿರುವವರು. ಆ ಒಡಹುಟ್ಟಿದವರಲ್ಲಿ ಒಬ್ಬೊಬ್ಬರೂ ಒಂದೊಂದು ಬಗೆಯ ಅಪರೂಪದ ವ್ಯಕ್ತಿತ್ವದವರು. ಮನೆಗೆ ಬಂದ ಸೊಸೆಯಂದಿರೂ ಅಷ್ಟೆ, ಅವರ ವಿಮಲಾ ಕೂಡಿಯೇ. ಈ ಒಡಹುಟ್ಟಿದವರು ಹೊರತಂದ 'ಮೊಮ್ಮಕ್ಕಳು ಹೇಳಿದ ಅಜ್ಜೀ ಕತೆ'ಯಲ್ಲಿ ತಮ್ಮ ಅಜ್ಜಿಯ ಬಗೆಗೆ ಬರೆದ ಲೇಖನಗಳನ್ನು ಓದಬೇಕು; ಅಷ್ಟೂ ಒಂದು ಸೊಗಸಾದ ಬರಹಗಳವು. ರಾಜಗೋಪಾಲ್ ಆಮೇಲೆ ತಂದೆ ಯೋಗಾ ನರಸಿಂಹಂ ಅವರ ಬಗೆಗಿನ 'ಸಂಗೀತ ಸಿರಿ' ಎಂಬ ಸ್ಮೃತಿಕೃತಿಯನ್ನು ಹೊರತಂದರು. ತನ್ನ ತಾಯಿಯ ಕುರಿತೂ 'ಹಲವು ಮಕ್ಕಳ ತಾಯಿ' ಎಂಬ ನೆನಪಿನ ಸಂಪುಟವನ್ನು ಸೋದರ ಮೋಹನ್‌ರಾಂ ಮತ್ತು ಸೋದರಿ ನೀರಜಾ ಜೊತೆಗೆ ಕೂಡಿಕೊಂಡು



ತಾನೇ ಮುಂದೆ ನಿಂತು ಸಿದ್ಧಪಡಿಸಿದರು. ಅಣ್ಣ ನಾರಾಯಣದತ್ತ ಅವರ ಬಗ್ಗೆ ಇನ್ನಿಲ್ಲದಷ್ಟು ಗೌರವದವರು ಅವರು. ದತ್ತ ಅವರ ಕುರಿತೂ 'ಮಾರ್ಗದರ್ಶಕ ಆಚಾರ್ಯ ಸಂಪಾದಕ – ಶ್ರೀ ನಾರಾಯಣ ದತ್ತ' ಎಂಬ ಅನುವಾದಿತ ಕೃತಿ ಪ್ರಕಟವಾಗುವಲ್ಲಿ ಶ್ರಮಿಸಿದರು. ಅಣ್ಣ ಶಾರದಾ ಪ್ರಸಾದ, ಅವರ ಪತ್ನಿ ಕಮಲಮ್ಮನವರ ಕುರಿತು ಹೇಳ ಹೊರಟರಂತೂ ಹೇಳಿದಷ್ಟೂ ಮುಗಿಯದ ನೆನಪಿನ ಕಾರಂಜಿಯೇ ಆಗುವರು. ಆ ಅತ್ತಿಗೆ ತೀರಿಕೊಂಡಾಗ ವಿಜಯಕರ್ನಾಟಕದಲ್ಲಿ ಪ್ರಕಟವಾದ ಅವರ ಲೇಖನದಲ್ಲಿ ಕಮಲಮ್ಮನ ವ್ಯಕ್ತಿತ್ವವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದರು. ಅವರ ಒಳ-ಹೊರ ಎರಡು ರೂಪಗಳನ್ನೂ, ಅವರ ಅನುರೂಪ ದಾಂಪತ್ಯವನ್ನೂ ಅವರು ಕಳೆದ ಬದುಕಿನ ಘನಸ್ಥಿಕೆಯನ್ನೂ ನುಡಿಶಿಲ್ಪಿಯಂತೆ ಕೆತ್ತಿದ್ದರು. ಯೋಚಿಸಿದರೆ ಒಂದು ಕುಟುಂಬದಲ್ಲಿ ಇಷ್ಟೊಂದು ಉಜ್ವಲ ಗ್ರಹಿಕೆಯ ದಂಡೇ ಇರಲು ಸಾಧ್ಯವೆ ಎಂದು ಆಶ್ಚರ್ಯ ಕವಿಯುತ್ತದೆ. ಎಷ್ಟು ಪಾಂಡಿತ್ಯಪೂರ್ಣವಾದ, ಪರಸ್ಪರ ಗೌರವಿಸುವ ಪ್ರೀತಿಸುವ, ಕಾಳಜಿವಹಿಸುವ, ಅರಿತು ನಡೆಯುವ ಕುಟುಂಬವಾಗಿತ್ತು ಅವರದು. ಅವರಲ್ಲಿ ಯಾರ ಭಾವಚಿತ್ರ ನೋಡಿದರೂ ಕಣ್ಣಿನಲ್ಲಿ ಅಲ್ಲೊಂದು ಹೌದೋ ಅಲ್ಲವೋ ಎಂಬಂಥ ಸಣ್ಣ ಹಾಸ, ವಾತ್ಸಲ್ಯ, ಮುಖದಲ್ಲಿ ವಿದ್ಯೆಯ ಕಳೆ.

ಅವರಲ್ಲಿ ಒಬ್ಬೊಬ್ಬರು ತೀರಿಕೊಂಡಾಗಲೂ ದೂರದೇಶದಲ್ಲಿದ್ದು ಅತೀವ ತಳಮಳ ಅನುಭವಿಸುತಿದ್ದರು ರಾಜಗೋಪಾಲ್. ಪ್ರೀತಿಯ ದೊಡ್ಡ ಅಕ್ಕ ತೀರಿಕೊಂಡ ಒಂದೇ ವರ್ಷದ ಅಂತರದಲ್ಲಿ ಅಣ್ಣ ನಾರಾಯಣ ದತ್ತ ಹೊರಟುಹೋಗಿದ್ದರು. ಈ ವೇದನೆಗಳೆಲ್ಲ ಅವರನ್ನು ಒಳಗೇ ಹದ ಮಾಡಿತ್ತು. ಒಮ್ಮೊಮ್ಮೆ ಕರೆ ಮಾಡಿ ಇಬ್ಬರೂ ತಮ್ಮ ದುಗುಡವನ್ನು ಹೇಳಿಕೊಳ್ಳುವುದಿತ್ತು. ವಿಮಲಾ ಅವರಿಗೋ, ತನ್ನ ಅತ್ತಿಗೆಯಂದಿರನ್ನು ಭಾವ ಹಾಗೂ ಮೈದುನಂದಿರು, ಅತ್ತೆ ಮಾವ ಮತ್ತಿತರರ ಕುರಿತು ಹೇಳಿದಷ್ಟೂ ಹೆಚ್ಚುವ, ದೀಪದಂತೆ ಬೆಳಕು ಚೆಲ್ಲುವ ತಮ್ಮದೇ ಆದ ಹೊನ್ನೆನಪುಗಳು. ಎಷ್ಟೋ ಸಲ ಕುಟುಂಬದಿಂದ ದೂರವಿರುವ ಅವರ ಅಂತರ್ಮುಖವು ಪುನಶ್ಚೇತನಗೊಳ್ಳುವುದೇ ಆ ಎಲ್ಲ ವ್ಯಕ್ತಿತ್ವಗಳ ನೆನವರಿಕೆಯಲ್ಲಿ ಅಂತಲೂ ಅನಿಸುತ್ತಿದೆ.

ಅಭಿನವ ಪ್ರಕಾಶನ ಹೊರತಂದ ತಮ್ಮ 'ಸೃಷ್ಟಿ: ನಾಲ್ಕು ಜಗತ್ತುಗಳು' ಪುಸ್ತಕ ಬಿಡುಗಡೆಗಾಗಿ ಉಡುಪಿಗೆ ಬಂದ ರಾಜಗೋಪಾಲ್-ವಿಮಲಾ ನಮ್ಮೊಡನೆ ಒಂದು ದಿನವಿಡೀ ಕಳೆದಿದ್ದರು. ಅಂದು ಅವರಲ್ಲಿಗೆ ಹೋದಾಗ ಫಿಲಡೆಲ್ಫಿಯಾ ತಿರುಗಾಟದ ನೆನಪಿಗೆಂದು ಅವರು ನೀಡಿದ, ಇತಿಹಾಸದ ಹಿನ್ನೆಲೆ ಇರುವ 'ಬಿರಿದಗಂಟೆ' ಯನ್ನು ಅಲ್ಲಿಂದ ಬಂದವಳೇ ಒಳಗೆ ತೂಗುಬಿಟ್ಟಿದ್ದೆ. ಅದನ್ನು ನೋಡಿ 'ಓ, ಇದೆಯಲ್ಲ ಇದು! ಪರವಾಗಿಲ್ಲ, ಇಟ್ಟುಕೊಂಡಿದ್ದೀರಿ' ಎಂದು ಸಂತಸಪಟ್ಟರು. ಯಾವತ್ತೋ ಮನೆಯಿಂದ ಹೊರಹೋದ ಬಂಧುಗಳು ಮರಳಿ ಮನೆಗೆ ಬಂದರೆ ಹೇಗೆ- ಅಷ್ಟು ಆಪ್ತವಾಗಿ

ಕಳೆದ ದಿನವದು. ಸಂಜೆ ಶ್ರೀಕೃಷ್ಣನನ್ನೂ ನೋಡಿದೆವು, ಕೃಷ್ಣ ಮತ್ತು ಅಮೆರಿಕಾ ಸಂಬಂಧದ ಕುರಿತು ಮಾತಾಡುತ್ತ ರಥಬೀದಿ ಸುತ್ತಿದೆವು. ವಿಮಲಾ ಮುಖದಲ್ಲಿ ಅವತ್ತು ಕಂಡ ಏನೋ ಒಂದು ಬಗೆಯ ಅನಿರ್ವಚನೀಯ ಹರ್ಷ ಈಗಲೂ ಕಣ್ಣೆದುರು ಕಟ್ಟುತ್ತಿದೆ. ಮುಂದೊಮ್ಮೆ ಬರುವೆವು, ಆಗ ಇನ್ನಷ್ಟು ಇಲ್ಲೆಲ್ಲ ಸುತ್ತೋಣ, ಉಡುಪಿಯ ಆಸುಪಾಸಿನ ಎಲ್ಲ ವೀಕ್ಷಣೀಯ ಸ್ಥಳಗಳಿಗೆಲ್ಲ ಹೋಗಿ ಬರೋಣ ಎಂದಿದ್ದರು ವಿಮಲಾ.

ಅವತ್ತು ಮರಳಿ ಹೋದ ದಂಪತಿಗಳು ಮತ್ತೆ ಆಳ್ವಾಸ್ ನುಡಿ ಸಮ್ಮಾನ ಸ್ವೀಕರಿಸಲು ಬೆಂಗಳೂರಿಗೆ ಬಂದಿಳಿದರೇನೋ ಸರಿ. ಆದರೆ ಏನೋ ತೊಂದರೆ ಬಂದು ಸಮಾರಂಭಕ್ಕೆ ವಿಮಲಾ ಬರಲಿಲ್ಲ. ರಾಜಗೋಪಾಲ್ ತಂಗಿ ನೀರಜಾ ಜೊತೆ ಬಂದರು. ಸಮಾರಂಭ ಮುಗಿಯುತ್ತಲೂ ಉಡುಪಿಗೆ ಬಂದು ಇಲ್ಲಿನ ಕಿದಿಯೂರ್ ಹೋಟೆಲಿನಲ್ಲಿ ಉಳಿದುಕೊಂಡಿದ್ದರು. ಬೆಳಗಿನ ತಿಂಡಿಗೆ ನಮ್ಮಲ್ಲಿಗೆ ಬರುವವರು. ಬರುವಾಗ ತಡವಾಯಿತು. ಕಾರಣ, ರಾತ್ರಿಯೆಲ್ಲ ಅಸ್ವಸ್ಥರಾಗಿ ಅಂತೂ ಹೇಗೋ ಚೇತರಿಸಿಕೊಂಡ ವಿಚಾರ ನೀರಜಾ ವಿವರಿಸಿ ಬೇಸರಗೊಂಡಾಗ ಅದು ಅವರ ಅಗಲಿಕೆಯ ಸಾಂಕೇತಿಕ ಮುನ್ಸೂಚನೆ ಎಂದು ಅವರಿಗಾಗಲೀ ನಮಗಾಗಲೀ ಹೊಳೆಯಲೇ ಇಲ್ಲವಲ್ಲ! ಹೊಳೆಯುವುದಾದರೂ ಎಂತು?

ಇನ್ನೊಮ್ಮೆ ವಿಮಲಾ ಜೊತೆ ಬಂದೇ ಬರುತ್ತೇನೆಂದು ಹೇಳಿ ಅಂದು ಹೊರಟು ಹೋದ ರಾಜಗೋಪಾಲ್ ಮತ್ತೆ ಬರಲೇ ಇಲ್ಲ. ಬಂದದ್ದು ಅವರ ಅನಾರೋಗ್ಯದ ಹೆಸರು ಹೊತ್ತ ಸುದ್ದಿ. ಆ ಅಸ್ವಾಸ್ಥ್ಯವನ್ನೂ ಅದರ ಸ್ವರೂಪವನ್ನೂ ಶಾಂತಚಿತ್ತತೆಯಿಂದ ಫೋನಿನಲ್ಲಿ ವಿವರಿಸುತಿದ್ದ ರಾಜಗೋಪಾಲ್ ಅವರ ಧ್ವನಿ. ಏನಂದರೂ ಅವರು ಕೂಡ ಅದಕ್ಕೆ ವಶವಾಗುವರೆಂದು ನಾವು ಅಂದುಕೊಳ್ಳಲೇ ಇಲ್ಲ. ಬದಲು ಖಂಡಿತ ಅವರೆದುರು ಆ ಕಾಯಿಲೆಯೇ ಸೋಲುತ್ತದೆ, ಅವರು ಮುಂಚಿನಂತಾಗುತ್ತಾರೆ ಎಂದು ಹುಂಬರಂತೆ ನಂಬಿಕೊಂಡೆವು. ನಾರಾಯಣ ದತ್ತ ಕುರಿತ ಗ್ರಂಥದ ಬಿಡುಗಡೆಗೆ ಅವರು ಬೆಂಗಳೂರಿಗೆ ಬರುವರು, ಬಂದಾಗ ನಮ್ಮಲ್ಲಿಗೂ ಬರುವರು ಎಂದುಕೊಂಡೆವು. ಆದರೆ ಅನಿವಾರ್ಯವಾಗಿ ಅವರ ಅನುಪಸ್ಥಿತಿಯಲ್ಲಿ ಇಲ್ಲಿ ಗ್ರಂಥ ಬಿಡುಗಡೆಯಾಯಿತು. ತನ್ನ ಕರ್ತವ್ಯ ಮುಗಿಯಿತು ಎಂಬಂತೆ ಇದ್ದರಂತೆ ರಾಜಗೋಪಾಲ್, ಕೆಲ ಕಾಲದಲ್ಲಿಯೇ ತಮ್ಮ ಭೌತಾಕೃತಿ ಕೊಡಹಿ ಎದ್ದು ಹೊರಟುಬಿಟ್ಟರು.

ಪತ್ನಿಗಾಗಿ ಕಾದು, ಆಕೆ ಬರುತ್ತಲೂ ಮೆಲುಮಾತಿಂದ ಸಂತೈಸಿ, ಧೈರ್ಯ ತುಂಬಿ ಮೆಲ್ಲನೆ ವಿದಾಯ ಹೇಳಿ ದಾರ್ಶನಿಕನಂತೆ ಮರಣವನ್ನು ನಿಧನಿಧಾನವಾಗಿ ಅವರು ಎದುರುಗೊಂಡದ್ದು ಇತ್ಯಾದಿಯಾಗಿ ಅವರ ಕೊನೆಯ ಕ್ಷಣಗಳನ್ನು ವಿಮಲಾ ದುಃಖಬಿಗಿದ ಧ್ವನಿಯಲ್ಲಿ ಕಡಿಕಡಿದು ವಿವರಿಸುತ್ತಿದ್ದಾಗಲೂ ಅವರು ಇನ್ನು ಇಲ್ಲವೆಂಬುದು ನಿಜ ಎಂದು ಅರಗಿಸಿಕೊಳ್ಳಲು ಸುತರಾಂ ಆಗದೇ ಹೋಯ್ತು.



ಈಗಲೂ ಅವರನ್ನು ನೆನೆದವೆಂದರೆ, ಮನಃಪಟಲದಲ್ಲಿ ಕಾಣುವುದು ಜಕ್ಕವಕ್ಕಿಗಳಂತೆ ಇದ್ದ ಆ ದ್ವಾ–ಸುಪರ್ಣರು. ಒಬ್ಬರ ಮಾತು ಮುಗಿದೊಡನೆ ಇನ್ನೊಬ್ಬರ ಮೌನ ಮುಗಿಯುವ, ಮಾತು–ಮೌನಗಳ ಅದ್ಭುತ ಸಂಭ್ರಮ. ಶಿಸ್ತಿನ, ತೂಕದ ಮಾತಿನ, ತೂಕದ ನಡೆಯ, ಎಲ್ಲಿಯೂ ಅನವಶ್ಯಕ ದನಿ ಏರಿಸದೆಯೇ ಹೇಳಬೇಕಾದ್ದನ್ನೆಲ್ಲ ಹೇಳಬಲ್ಲ, ಸದಾ ಎಲ್ಲರಿಗೂ ಒಳಿತನ್ನೇ ಹಾರೈಸುತಿದ್ದ ರಾಜಗೋಪಾಲ್, ಯಾವುದೇ ಭಾಷೆಯೊಂದರ ಬಾಂಧವ್ಯ ಹೇಗಿರಬೇಕೆಂಬುದಕ್ಕೆ ಮಾದರಿಯಂತೆ ಇದ್ದವರು. ಇನ್ನು ಅವರು ಪ್ರೀತಿಯ ವಿಮಲಾ ಜೊತೆಗೂಡಿ ಬರುವುದೇ ಇಲ್ಲ ಎಂಬುದನ್ನು ನಂಬುವುದೂ ಕಷ್ಟ, ನುಂಗುವುದೂ.





# ಅಮೆರಿಕದಲ್ಲಿ ಕನ್ನಡನಾಡ ಕಟ್ಟಿದ ರಾಜಗೋಪಾಲ್

**–ಭುವನೇಶ್ವರಿ ಹೆಗಡೆ**

ಉಡುಗೆ ತೊಡುಗೆಗಳಲ್ಲಿ ಅಚ್ಚುಕಟ್ಟುತನ, ಕನ್ನಡಕದೊಳಗಿನ ಕಣ್ಣುಗಳಲ್ಲಿ ಅಪಾರ ಬುದ್ಧಿಮತ್ತೆ, ಜ್ಞಾನ ಹಾಗೂ ವಿನಯಗಳಿಂದ ತುಂಬಿದ ಬೆಳಕು, ಮೃದುಮಾತು, ಮೊದಲ ನೋಟದಲ್ಲೇ ಸಜ್ಜನ, ಸರಳ, ಸಂಸ್ಕಾರವಂತ, ಹಿರಿಯ ವ್ಯಕ್ತಿ ಎಂಬ ಗೌರವಕ್ಕೆ ಪಾತ್ರರಾಗಿಬಿಡುವ ಅಪ್ಪಟ ಗಾಂಧಿವಾದಿಯೊಬ್ಬರು ಅಮೆರಿಕದಲ್ಲಿ 'ಕನ್ನಡ ಸಾಹಿತ್ಯ ರಂಗ' ಎಂಬ ಸಂಸ್ಥೆಯನ್ನು ಕಟ್ಟಿ ಅಲ್ಲಿ ನೆಲೆಸಿರುವ ಕನ್ನಡಿಗರನ್ನೆಲ್ಲ ಏಕಸೂತ್ರದಿಂದ ಬಂಧಿಸಿ, ಕನ್ನಡಪ್ರೇಮದ ಪುತ್ಥಳಿಯಂತೆ ಕನ್ನಡಿಗರ ಹೃದಯಕ್ಕೆ ಹತ್ತಿರವಾದವರು. ಅರವತ್ತರ ದಶಕದಲ್ಲಿ ಅಮೆರಿಕೆಗೆ ತೆರಳಿದ ಪ್ರತಿಭಾವಂತರು ಈಗಿನ ಐಟಿ ಉದ್ಯೋಗಿಗಳಂತೆ ಸೌಲಭ್ಯಗಳನ್ನು ಹೊಂದಿರಲಿಲ್ಲ. ಹಣವನ್ನೂ ಹೊಂದಿರಲಿಲ್ಲ. ಆದರೆ ಮನೆಗಳಲ್ಲಿ ಉಜ್ವಲ ಸಂಸ್ಕಾರ, ಮನೋಸ್ಥೈರ್ಯ, ಸಾಧಕ ಪ್ರವೃತ್ತಿಗಳನ್ನು ಧಾರಾಳವಾಗಿ ಪಡೆದವರಾಗಿದ್ದರು. ಇಂಥ ಪ್ರತಿಭಾವಂತ ಮನೆತನದ ಯುವಕ ಮೈಸೂರಿನಿಂದ ಅಮೆರಿಕೆಗೆ ಹೊರಟು ನಿಂತವ ಮುಂದೆ ಅಲ್ಲಿನ ಫಿಲಡೆಲ್ಫಿಯಾದಲ್ಲಿ ಪತ್ನಿ ವಿಮಲಾರೊಂದಿಗೆ ನೆಲೆಸಿ ಅಮೆರಿಕದಲ್ಲಿಯೇ ಒಂದು ಸಹೃದಯರ ಕನ್ನಡ ನಾಡನ್ನು ನಿರ್ಮಿಸಿದರು.



ಇವರ ಕುಟುಂಬವೇ ಪ್ರತಿಭಾವಂತರ ಕುಟುಂಬ. ಸೋದರ ಎಚ್. ವೈ. ಶಾರದಾಪ್ರಸಾದ್ ದೇಶಮಟ್ಟದ ವಕ್ತಾರರಾಗಿ ತಮ್ಮ ಕಾರ್ಯಕ್ಷಮತೆಯಿಂದ ಆಗಿನ ಪ್ರಧಾನಮಂತ್ರಿ ಇಂದಿರಾ ಗಾಂಧಿಯವರ ಪತ್ರಿಕಾ ಸಲಹೆಗಾರರಾಗಿದ್ದವರು. ಮೂಲತಃ ಸಿವಿಲ್ ಇಂಜಿನಿಯರಿಂಗ್ ವಿಷಯದಲ್ಲಿ ಸ್ನಾತಕೋತ್ತರ ಪದವಿ ಪಡೆದ ರಾಜಗೋಪಾಲ್ ತಮ್ಮ ಕ್ಷೇತ್ರದಲ್ಲಿ ಗೈದ ಸಾಧನೆ ಭಾರತೀಯರಿಗೆ ಹೆಮ್ಮೆ ತರುವಂಥದ್ದು. ಇಲ್ಲಿಂದ ಹೋದ ವಿದ್ಯಾರ್ಥಿಗಳನೇಕರಿಗೆ ಮಾರ್ಗದರ್ಶನ, ಆಶ್ರಯ, ಆಸರೆ ನೀಡಿದವರು. ಇವರ ಪತ್ನಿ ವಿಮಲಾ ರಾಜಗೋಪಾಲ್ ಪತಿಯ ಪ್ರತಿಭೆಗೆ ತಕ್ಕ ಜೋಡಿ. ಖ್ಯಾತ ಹಾಡುಗಾರ್ತಿ ಸಹ. ತಮ್ಮ ಅಪಾರ ಜೀವನಾಸಕ್ತಿಯಿಂದ ಕನ್ನಡದ ಕೆಲಸಗಳಿಗೆ ಬೆನ್ನೆಲುಬಾಗಿ ನಿಂತವರು. ರಾಜಗೋಪಾಲ್ ಅವರ ಕನ್ನಡದ ಕೂಸು, ಅಮೆರಿಕೆಯಲ್ಲಿ ಅವರು ಸ್ಥಾಪಿಸಿದ 'ಕನ್ನಡ ಸಾಹಿತ್ಯ ರಂಗ' ಎಂಬ ಸಂಸ್ಥೆ. ವಿದೇಶದಲ್ಲಿ ನೆಲೆಸಿದ ಕನ್ನಡಿಗರಿಗೆ ತಮ್ಮ ಮೂಲನೆಲದ ಬೇರುಗಳಿಂದ ಬೇರ್ಪಟ್ಟ ನೋವನ್ನು ಮರೆಯಲು ತಮ್ಮ ಭಾಷೆ ಮಾತನಾಡುವವರೇ ಬಂಧುಗಳು. ಪ್ರತಿ ಊರಲ್ಲಿ ಕನ್ನಡಿಗರ ಕೂಟಗಳಿವೆ. ಆಗಾಗ ಎಲ್ಲರೂ ಒಂದೆಡೆ ಸೇರುವುದು, ಊರಿನ ಊಟ, ಪೂಜೆ, ಹಾಡು, ಆಟ ಎಂದು ಬೆರೆತು ಕಲೆತು ಬಾಂಧವ್ಯ ಬೆಳೆಸುವ ಪರಿಪಾಠವಿದೆ. ರಾಜಗೋಪಾಲ್ ಅವರಿಗೆ, ಅವರೊಳಗಿರುವ ಧೀಮಂತ ವ್ಯಕ್ತಿತ್ವಕ್ಕೆ ಈ ಕೂಟಗಳು ಆಟ ಊಟಗಳಿಗೆ, ಮನರಂಜನೆಗೆ ಸೀಮಿತವಾಗಬಾರದೆಂದೆನಿಸಿತು. ವಲಸೆ ಬಂದ ಕನ್ನಡಿಗರಲ್ಲಿ ಕನ್ನಡ ಸಾಹಿತ್ಯವನ್ನು ಗಂಭೀರವಾಗಿ ಓದಿ ಬರೆಯಬಲ್ಲವರು, ಕವಿಗಳು, ಕತೆಗಾರರು ಇರುವುದು ಗೊತ್ತಿತ್ತು. ಕನ್ನಡನಾಡಿನಿಂದ ದೂರವಿದ್ದೂ ಕನ್ನಡ ಭಾಷೆಗೆ ಗಣನೀಯ ಕೊಡುಗೆಗಳನ್ನು ನೀಡಬಲ್ಲ ಸಮಾನಮನಸ್ಕ ಸ್ನೇಹಿತರನ್ನು ಜೊತೆಗೂಡಿಸಿಕೊಂಡು 'ಕನ್ನಡ ಸಾಹಿತ್ಯ ರಂಗ'ವೆಂಬ ಸಾಹಿತ್ಯಿಕ ಸಂಸ್ಥೆಯನ್ನು ಅಪಾರ ಕನಸುಗಳೊಂದಿಗೆ ಸ್ಥಾಪಿಸಿದರು ೨೦೦೪ರಲ್ಲಿ. ತಮ್ಮ ಅನಾರೋಗ್ಯದ ಕೊನೆಯ ದಿನಗಳವರೆಗೂ ಸಾಹಿತ್ಯ ರಂಗದ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ದುಡಿದರು.

ನಾಗ ಐತಾಳ, ಮೈ. ಶ್ರೀ. ನಟರಾಜ, ನಳಿನಿ ಮಯ್ಯ, ಗುರುಪ್ರಸಾದ ಕಾಗಿನೆಲೆ, ತ್ರಿವೇಣಿ ಶ್ರೀನಿವಾಸರಾವ್, ಮೀರಾ ರಾಜಗೋಪಾಲ್, ವಲ್ಲೀಶ ಶಾಸ್ತ್ರಿ, ಅಲಮೇಲು ಐಯ್ಯಂಗಾರ್ (ಪುತಿನ ಪುತ್ರಿ), ಶ್ರೀವತ್ಸ ಜೋಶಿ, ದತ್ತಾತ್ರಿ, ಪ್ರಕಾಶ್ ನಾಯಕ್ – ಹೀಗೆ ಹೆಸರಿಗಾಗಿ ಹಂಬಲಿಸದ ದೊಡ್ಡ ಬಳಗವೇ ಇದೆ. ಎಲ್ಲರನ್ನೂ ರಾಜಗೋಪಾಲ್ ತಮ್ಮ ಸ್ನೇಹಪರಿಧಿಯೊಳಗೆ ಸೇರಿಸಿಕೊಂಡ ಪರಿ ವಿಸ್ಮಯಕಾರಿ. ಹಿರಿಯರು, ಅನುಭವಿಗಳ ಜೊತೆಗೆ ಯುವಕ–ಯುವತಿಯರ ಸಾಹಿತ್ಯಿಕ ಪ್ರತಿಭೆಗೆ ಅವರು ಬೆಂಗಾವಲಾಗಿ ನಿಂತವರು. ಗುಣಮಟ್ಟದಲ್ಲಿ ಅತ್ಯುತ್ಕೃಷ್ಟವಾದ ಕನ್ನಡ ಕೃತಿಗಳನ್ನು ಪ್ರಕಟಿಸಿದ ಕೀರ್ತಿ ಕನ್ನಡ ಸಾಹಿತ್ಯ ರಂಗಕ್ಕಿದೆ. ಸಾಹಿತ್ಯ ರಂಗದ ಸಾಧನೆಗಳಲ್ಲಿ ಪ್ರತಿ ಎರಡು ವರ್ಷಕ್ಕೊಮ್ಮೆ

ನಡೆಸುವ 'ವಸಂತ ಸಾಹಿತ್ಯೋತ್ಸವ' ಅಪಾರ ಜನಮನ್ನಣೆ ಗಳಿಸಿದ ಸಮಾರಂಭ. ಅಮೆರಿಕೆಯ ಬೇರೆಬೇರೆ ಪ್ರದೇಶಗಳಲ್ಲಿ ಅಲ್ಲಿಯ ಸ್ಥಳೀಯ ಕನ್ನಡ ಕೂಟಗಳ ನೆರವಿನಿಂದ ಎರಡು ದಿನಗಳ ಕಾಲ ನಡೆಯುವ ಸಾಹಿತ್ಯ ಸಮ್ಮೇಳನ. ಅಮೆರಿಕ ಭೌಗೋಳಿಕವಾಗಿ ಬಲು ವಿಸ್ತಾರವಾದ ದೇಶ. ಇಡೀ ದೇಶದುದ್ದಕ್ಕೂ ನೆಲೆಸಿರುವ ಕನ್ನಡಿಗರು ಈ ವಸಂತ ಸಾಹಿತ್ಯೋತ್ಸವವನ್ನು ತಮ್ಮ ಮನೆಯ ಹಬ್ಬವೆಂಬಂತೆ ಆಚರಿಸುವುದನ್ನು ಕಣ್ಣಾರೆ ಕಂಡ ಅನುಭವ ನನಗಿದೆ.

ಕರ್ನಾಟಕದಿಂದ ಖ್ಯಾತನಾಮರಾದ ಇಬ್ಬರು ಸಾಹಿತಿಗಳನ್ನೋ ಚಿಂತಕರನ್ನೋ ಆಹ್ವಾನಿಸಲಾಗುತ್ತದೆ. ಅವರ ಅಧ್ಯಕ್ಷತೆಯಲ್ಲಿ ಸಾಹಿತ್ಯ ರಂಗದ ಸಮ್ಮೇಳನ ನಡೆಯುತ್ತದೆ. ಪುಸ್ತಕ ಬಿಡುಗಡೆ ಸಮಾರಂಭಗಳಾಗುತ್ತವೆ. ಸಾಹಿತ್ಯ ಗೋಷ್ಠಿ, ವಿಶೇಷ ಉಪನ್ಯಾಸಗಳು, ಕವಿಗೋಷ್ಠಿ, ಚರ್ಚೆ–ಸಂವಾದಗಳು ನಡೆಯುತ್ತವೆ. ಎಚ್. ವೈ. ರಾಜಗೋಪಾಲ್ ನೇತೃತ್ವದಲ್ಲಿ ನಡೆಯುವ ರಾಷ್ಟ್ರೀಯ ಸಾಹಿತ್ಯ ಸಮ್ಮೇಳನ – 'ವಸಂತ ಸಾಹಿತ್ಯೋತ್ಸವ'ಕ್ಕೆ ಕರ್ನಾಟಕದ ಸಾಹಿತ್ಯ ದಿಗ್ಗಜರೆಲ್ಲ ಹೋಗಿಬಂದಿದ್ದಾರೆ. ತಮ್ಮ ವಿಚಾರಧಾರೆಯನ್ನು ಹಂಚಿ ಅಮೆರಿಕನ್ನಡಿಗರ ಕನ್ನಡದ ಮೇಲಿನ ಅಭಿಮಾನವನ್ನು ಕಂಡು ಸಂತೋಷಪಟ್ಟು ಬಂದಿದ್ದಾರೆ. ಕುವೆಂಪು ಜನ್ಮ ಶತಾಬ್ದಿಯ ಭಾಗವಾಗಿ ಆಚರಿಸಿದ ಮೊದಲ ಸಮ್ಮೇಳನಕ್ಕೆ ಡಾ. ಪ್ರಭುಶಂಕರರೂ, ಕನ್ನಡ ಸಾಹಿತ್ಯದಲ್ಲಿ ಸೃಜನಶೀಲತೆಯನ್ನು ಮುಖ್ಯವಸ್ತುವನ್ನಾಗಿ ಇರಿಸಿಕೊಂಡ ಎರಡನೆಯ ಸಮ್ಮೇಳನಕ್ಕೆ ಪ್ರೊ. ಬರಗೂರು ರಾಮಚಂದ್ರಪ್ಪನವರೂ ಮುಖ್ಯ ಅತಿಥಿಗಳಾಗಿ ಹೋಗಿ ಭಾಷಣ ಮಾಡಿದ್ದಾರೆ. ನಂತರದ ವರ್ಷಗಳಲ್ಲಿ ಅರಾ ಮಿತ್ರ, ವೈದೇಹಿ, ವೀಣಾ ಶಾಂತೇಶ್ವರ, ನಾನು, ಸುಮತೀಂದ್ರ ನಾಡಿಗ, ಕೆ. ವಿ. ತಿರುಮಲೇಶ್, ಪ್ರಧಾನ್ ಗುರುದತ್ತ, ಚಿಂತಕ ಲಕ್ಷ್ಮೀಶ ತೋಳ್ಪಾಡಿ ಹೀಗೆ ಸಾಹಿತಿಗಳು ಹೋಗಿಬರುತ್ತಲೇ ಇದ್ದಾರೆ. ಇವರೆಲ್ಲರ ಭಾಷಣಗಳನ್ನು ಸಾಹಿತ್ಯ ರಂಗ ತನ್ನ ಭಾಷಣಮಾಲೆಯಲ್ಲಿ ಪ್ರತ್ಯೇಕವಾಗಿ ಮುದ್ರಿಸುತ್ತದೆ. ಅಲ್ಲದೆ ಕಡಲಾಚೆಯ ಕನ್ನಡಿಗರ ಕಥಾಸಂಕಲನಗಳು, ವೈಚಾರಿಕ ಪ್ರಬಂಧಗಳ ಸಂಕಲನ, ಹಾಸ್ಯ ಸಾಹಿತ್ಯದ ಆಕರವಸ್ತು ಹೊಂದಿದ ಲೇಖನಗಳ ಸಂಕಲನ – 'ನಗೆಗನ್ನಡಂ ಗೆಲ್ಗೆ,' 'ಕುವೆಂಪು ಸಾಹಿತ್ಯ ಸಮೀಕ್ಷೆ,' ಹೀಗೆ ಉತ್ತಮ ಆಕರಗ್ರಂಥಗಳನ್ನು ಪ್ರಕಟಿಸುತ್ತ ಬಂದಿದೆ.

ಲಾಭೋದ್ದೇಶವಿಲ್ಲದ ಇಂಥ ಸಂಸ್ಥೆಯೊಂದು ಪರಕೀಯ ನೆಲದಲ್ಲಿದ್ದೂ ಗೈಯುತ್ತಿರುವ ಕನ್ನಡ ಸೇವೆಯನ್ನು ಗುರುತಿಸಿ 'ವಿಶ್ವ ನುಡಿಸಿರಿ' ಸಂದರ್ಭದಲ್ಲಿ ಮೂಡುಬಿದಿರೆಯಲ್ಲಿ ರಂಗದ ಸ್ಥಾಪಕರಾದ ರಾಜಗೋಪಾಲರನ್ನು ಸನ್ಮಾನಿಸಲಾಯಿತು. ಅದು ರಾಜಗೋಪಾಲ್ ಎಂಬ ಧೀಮಂತ ವ್ಯಕ್ತಿ ಮತ್ತು ನನ್ನ ನಡುವಿನ ಕೊನೆಯ ಭೇಟಿ. ರಾಜಗೋಪಾಲ್ ದಂಪತಿಯನ್ನು ನಾನು ಮುಖತಃ ಭೇಟಿಯಾಗಿದ್ದು ಬೆಂಗಳೂರಿನ ನ್ಯಾಷನಲ್ ಕಾಲೇಜಿನ ಕಿಕ್ಕಿರಿದ ಹೊರಸಭಾಂಗಣದಲ್ಲಿ, ೨೦೦೮ ಇರಬೇಕು 'ಅಪರಂಜಿ



ಸಾಹಿತ್ಯೋತ್ಸವ' ಅದ್ದೂರಿಯಾಗಿ ನಡೆಯುತ್ತಿದ್ದ ದಿನಗಳವು. ಬೆಳಗಿನ ಜಾವವೇ ತಿಂಡಿ ಕಟ್ಟಿಕೊಂಡು ಬಂದು ಸೀಟು ಹಿಡಿದು, ಇಡೀ ದಿನ ಮಿಸುಗಾಡದೇ ಕೂತು ಉರುಳಿಉರುಳಿ ನಕ್ಕು 'ನಗೆಯೆಂಬ ಸಮೂಹಸನ್ನಿ' ಹಿಡಿಸಿದ್ದ ಹಾಸ್ಯೋತ್ಸವಗಳು. ಆ ವರ್ಷ ಮಾಸ್ಟರ್ ಹಿರಣ್ಣಯ್ಯ ಮೊದಲಾದ ದಿಗ್ಗಜರ ಜೊತೆ ನನ್ನದೂ ಹಾಸ್ಯ ಭಾಷಣ. ನಾನು ಜೋಕುಗಳನ್ನು ಮಾತ್ರ ಆಶ್ರಯಿಸದೇ ಇಡೀ ಕನ್ನಡ ಸಾಹಿತ್ಯದಲ್ಲಿ ಇರುವ ಹಾಸ್ಯ, ಮತ್ತು ವಿಮರ್ಶಕರ ಪ್ರಪಂಚದಲ್ಲಿ ನಿರ್ಲಕ್ಷ್ಯಕ್ಕೊಳಗಾಗಿರುವ ಹಾಸ್ಯ ಸಾಹಿತ್ಯ ಹೀಗೆಲ್ಲ ಮಾತಾಡಿದ್ದೆ. ಕಾರ್ಯಕ್ರಮ ಮುಗಿದ ಬಳಿಕ 'ಅಪರಂಜಿ' ಸಂಪಾದಕರು ಅಮೆರಿಕೆಯ 'ಕನ್ನಡ ಸಾಹಿತ್ಯ ರಂಗ'ದ ಸ್ಥಾಪಕಾಧ್ಯಕ್ಷರು ಇವರು ಎಂದು ಪರಿಚಯಿಸಿದ್ದರು. ಎಚ್. ವೈ. ರಾಜಗೋಪಾಲ್ ಎಂಬ 'ರಾಜನೂ ಗೋಪಾಲನೂ' ಎರಡೂ ವ್ಯಕ್ತಿತ್ವಗಳ ಮಿಳಿತವಾದಂತೆ ಇದ್ದ ವ್ಯಕ್ತಿಯನ್ನು ಮೊದಲ ಬಾರಿ ಕಂಡಾಗ ಉದ್ಭವಿಸಿದ ಬೆರಗು, ಗೌರವ, ಪ್ರೀತಿಗಳು ಇಂದಿಗೂ ಹಾಗೇ ಉಳಿದುಕೊಂಡಿವೆ.

೨೦೧೦ರ ಡಿಸೆಂಬರ್‌ನಲ್ಲಿ ಸ್ವತಃ ರಾಜಗೋಪಾಲರದ್ದೇ ಫೋನು ಒಂದು ದಿನ. ಈ ಬಾರಿ ಕ್ಯಾಲಿಫೋರ್ನಿಯಾದ ಸ್ಯಾನ್‌ಹೋಸೆಯಲ್ಲಿ ನಮ್ಮ 'ವಸಂತ ಸಾಹಿತ್ಯೋತ್ಸವ' ನಡೆಯಲಿದೆ. ನೀವು ವಿಶೇಷ ಅತಿಥಿಯಾಗಿ ಬಂದು ಕನ್ನಡ ಹಾಸ್ಯಸಾಹಿತ್ಯದ ಕುರಿತು ಉಪನ್ಯಾಸ ನೀಡಬೇಕು ಎಂದರು. ಯಾವ ಅಮೆರಿಕ ಪ್ರವಾಸದ ಕಲ್ಪನೆಯೂ ಇಲ್ಲದ ನಾನು ಪ್ಯಾಸ್‌ಪೋರ್ಟ್ ಎಂಬ ಪ್ರಾಥಮಿಕ ಅಗತ್ಯವನ್ನೂ ಪೂರೈಸಿಕೊಂಡಿರಲಿಲ್ಲ. ಅಮೆರಿಕದಲ್ಲೇ ನೆಲೆಸಿರುವ ಕನ್ನಡಪ್ರಾಜ್ಞ ಸನ್ಮಿತ್ರ ಶ್ರೀವತ್ಸ ಜೋಶಿ ಈ ವಿಷಯದಲ್ಲಿ ತುಂಬ ನೆರವು ನೀಡಿದರು. ಕವಿ ಸುಮತೀಂದ್ರ ನಾಡಿಗರು ವಿಮಾನದಲ್ಲಿ ಬೇಂದ್ರೆ ಹಾಡುಗಳನ್ನು ಹಾಡುತ್ತ 'ಬಾನದಾರಿ'ಯನ್ನು ಕಾವ್ಯಮಯವಾಗಿಸಿದ್ದರು. ಮರುದಿನ, ಕಾರ್ಯಕ್ರಮದ ಸಭಾಂಗಣ ತಲುಪುವಾಗ ಎರಡು ನಿಮಿಷ ತಡವಾಗಿತ್ತು. ಅಷ್ಟರಲ್ಲಾಗಲೇ ರಾಜಗೋಪಾಲ್ ವೇದಿಕೆಯೇರಿ ಸ್ವಾಗತ ಭಾಷಣ ಪ್ರಾರಂಭಿಸಿದ್ದರು. ಸರಳ ಸಜ್ಜನರು ಸಾತ್ವಿಕ ನಿಷ್ಠುರರು ಎದುರಿಗಿರುವಾಗ ಉಕ್ಕುವ ಗೌರವ–ಪ್ರೀತಿಗಳನ್ನು ಪದಗಳಲ್ಲಿ ವರ್ಣಿಸುವುದು ಅಸಾಧ್ಯ. ಸಂಸ್ಕಾರ ತುಂಬಿದ ಸಜ್ಜನಿಕೆ ಅವರದ್ದು.

ಕಾರ್ಯಕ್ರಮ ಮುಗಿದ ಮೇಲೆ ರಾಜಗೋಪಾಲ್ ದಂಪತಿ ನಮ್ಮನ್ನು ಸ್ಯಾನ್‌ಫ್ರಾನ್ಸಿಸ್ಕೋ ಸುತ್ತಾಟಕ್ಕೆ ಕರೆದೊಯ್ದರು. ಅಲ್ಲಿನ 'ರೆಡ್‌ವುಡ್' ಫಾರೆಸ್ಟಿನ ನದಿಯಲ್ಲಿ ಕಾಲು ಇಳಿಬಿಟ್ಟು ಕೂತ ರಾಜಗೋಪಾಲರ ಪಾದಗಳನ್ನೇ ನಾನು ದಿಟ್ಟಿಸಿದೆ. ಹೊಳೆನರಸೀಪುರದಿಂದ ಫಿಲಡೆಲ್ಫಿಯದವರೆಗೆ ಕ್ರಮಿಸಿದ ಆ ಪಾದಗಳು! ಆ ಬಳಿಕ ನಾನವರನ್ನು ನೋಡಿದ್ದು ಮೂಡುಬಿದಿರೆಯ 'ಆಳ್ವಾಸ್ ವಿಶ್ವ ನುಡಿಸಿರಿ' ಸಂದರ್ಭದಲ್ಲಿ. ವಿಮಲಾ ಜೊತೆಗಿರಲಿಲ್ಲ. ಬದಲು ಅವರ ಸೋದರಿ ಇದ್ದರು. ಒಟ್ಟಿಗೆ ಊಟ ಮಾಡಿದೆವು.

ವಿಶ್ವಕನ್ನಡಿಗರ ಒಡನಾಟದ ಕುರಿತ ಪುಸ್ತಕದಲ್ಲಿ, ನಾನು ಕನ್ನಡ ಸಾಹಿತ್ಯ ರಂಗದ ಕುರಿತು ಬರೆದ ಸಂಪುಟವನ್ನು ಮೆಚ್ಚಿಕೊಂಡರು. ಕನ್ನಡಿಗರಲ್ಲಿ ಸಂಭ್ರಮಪಡುವ ಗುಣ ರಕ್ತದಲ್ಲೇ ಇದೆ ಎಂದರು. ಯಾಕೋ ದಣಿದವರಂತೆ ಕಂಡುಬಂದಿದ್ದರು. ಅಷ್ಟರಲ್ಲೇ ಕಾಲ ಅವರನ್ನು 'ಹಣಿಯುತ್ತಿರುವ' ಸೂಚನೆಯೆಂಬಂತೆ ಹಣೆತುಂಬ ಬೆವರಿತ್ತು. ಕಣ್ಣಿನ ಕಾಂತಿ ಕುಂದಿರಲಿಲ್ಲ. ಇದೀಗ ರಾಜಗೋಪಾಲ್ ಇನ್ನಿಲ್ಲವೆಂಬ ಸುದ್ದಿ ಬಂದಿದೆ. ಅಮೆರಿಕೆಯ ಕನ್ನಡಿಗರ ಪಾಲಿನ ಹಿರಿಯ ಜೀವ ಶಾಶ್ವತ ಶಾಂತಿಯ ಗಮ್ಯ ತಲುಪಿದ್ದಾರೆ. 'ಕನ್ನಡ ಸಾಹಿತ್ಯ ರಂಗ' ಅನಾಥವಾಗಿದೆ. ಅಮೆರಿಕನ್ನಡಿಗರ ಹಾಗೂ ಕನ್ನಡ ನಾಡಿನ ಕನ್ನಡಿಗರ ನಡುವೆ ಶಾಶ್ವತ ಕೊಂಡಿಯಾಗಿ ನೆಲೆಸಿರುವ ಈ ದಿವ್ಯಾತ್ಮಕ್ಕೆ ಚಿರಶಾಂತಿಯಿರಲಿ. ಅವರ ಸರಳ ಸಜ್ಜನಿಕೆಯ ಕನ್ನಡಪ್ರೀತಿ, ಕರ್ತೃತ್ವಶಕ್ತಿ ಶಾಶ್ವತವಾಗಲಿ.

* ಏಪ್ರಿಲ್ ೫, ೨೦೧೮ರಂದು ವಿಜಯವಾಣಿ ಪತ್ರಿಕೆಯಲ್ಲಿ ಪ್ರಕಟವಾದ ಅಂಕಣ 'ಮುಗುಳು'ನಲ್ಲಿ ಪ್ರಕಟವಾದ ಲೇಖನ.



# ರಾಜಗೋಪಾಲ್ ಮತ್ತು ಸಾಂಸ್ಕೃತಿಕ ಋಣ

**–ಕೆ. ಸತ್ಯನಾರಾಯಣ**

ರಾಜಗೋಪಾಲರೊಡನೆ ಇದ್ದ ಪರಿಚಯ ಮತ್ತು ಒಡನಾಟ ಎರಡೂ ತುಂಬಾ ಕಡಿಮೆ ಮತ್ತು ಈಚಿನ ಆರೇಳು ವರ್ಷಗಳದ್ದು. ಆದರೆ ಅವರು ಸಂವೇದನಾಶೀಲ–ರಾಗಿದ್ದರಿಂದ ಈ ಸೀಮಿತ ಒಡನಾಟದಲ್ಲೇ ನಮ್ಮ ಕಾಲ ಮತ್ತು ಸಮಾಜವನ್ನು ಅರ್ಥ ಮಾಡಿಕೊಳ್ಳಲು ಸೂಕ್ಷ್ಮವಾದ ಹೊಳಹುಗಳು ಸಿಕ್ಕವು. ಮನುಷ್ಯ ಸಂಬಂಧದಲ್ಲಿ ಇನ್ನೊಬ್ಬರು ನಮಗೆ ಎಷ್ಟು ಅರ್ಥವಾಗುತ್ತಾರೆ, ಹತ್ತಿರವಾಗುತ್ತಾರೆ ಎಂದು ನೋಡುವುದು ಒಂದು ವಿಧಾನ. ಇನ್ನೊಂದು ವಿಧಾನವೆಂದರೆ ಅವರ ಮೂಲಕ ನಮ್ಮ ಸಮಾಜ ಮತ್ತು ನಾವು ಬದುಕುತ್ತಿರುವ ಕಾಲ ಎಷ್ಟು ಅರ್ಥವಾಗುತ್ತದೆ ಎಂಬುದು.

ರಾಜಗೋಪಾಲರಲ್ಲಿ, ಅವರ ಬರವಣಿಗೆಯಲ್ಲಿ ನನಗೆ ಮುಖ್ಯವಾಗಿ ಕಂಡದ್ದು 'ಸಾಂಸ್ಕೃತಿಕ ಋಣ'ದ ಪರಿಕಲ್ಪನೆ. ಇದು ಅಸ್ಮಿತೆಯ ಬಗ್ಗೆ ಮಾತನಾಡುವ ಕಾಲ. ನಾವು ಯಾವಾಗಲೂ ನಮ್ಮ ಮತ್ತು ಅನ್ಯರ 'ಚಹರೆ' ಮತ್ತು ಗುರುತಿನ ಬಗ್ಗೆಯೇ ಮಾತನಾಡುತ್ತೇವೆ, ಯೋಚಿಸುತ್ತೇವೆ. ಆದರೆ ಬದುಕಿನಲ್ಲಿ ನಾವು ತೀರಿಸಬೇಕಾದ 'ಋಣ'ಗಳು ಕೂಡ ಇರುತ್ತವೆ. ವೃತ್ತಿ–ಕುಟುಂಬದ ಕಾರಣದಿಂದಾಗಿ ನಾಲ್ಕಾರು ದಶಕಗಳ ಕಾಲ ವಿದೇಶದಲ್ಲಿ ಬದುಕಬೇಕಾಗಿ ಬಂದ ಒಬ್ಬ ಸಂವೇದನಾಶೀಲ ಕನ್ನಡಿಗನ ಸಾಂಸ್ಕೃತಿಕ ಋಣದ ಸ್ವರೂಪ ಯಾವುದಿರುತ್ತದೆ, ಯಾವುದಕ್ಕೆ ನಿಷ್ಠನಾಗಿರಬೇಕು – ಬಿಟ್ಟು ಬಂದ





ಮಾತೃ ಭೂಮಿಗೆ, ಬಾಲ್ಯದ ನೆನಪುಗಳಿಗೆ, ಮಾತೃ ಭಾಷೆಗೆ, ಹೊಸದಾಗಿ ಪೌರತ್ವ ಪಡೆದ ದೇಶಕ್ಕೆ, ತನ್ನ ಮೂಲ ಸಂಸ್ಕೃತಿ ಸೂಚಿಸುವ ಸಾಂಸ್ಕೃತಿಕ ಸ್ತರಗಳಿಗೆ, ವೃತ್ತಿಗೆ? ಇದಕ್ಕೆ ನಿರ್ದಿಷ್ಟ ಉತ್ತರವಿಲ್ಲ. ವಲಸೆ ಹೋಗುವ ಪ್ರತಿಯೊಬ್ಬ ಭಾರತೀಯನೂ ತನ್ನದೇ ಆದ 'ಸಾಂಸ್ಕೃತಿಕ ಋಣ'ದ ಪರಿಕಲ್ಪನೆಯನ್ನು ರೂಢಿಸಿಕೊಳ್ಳುತ್ತಾನೆ.

'ಸೃಷ್ಟಿ' ನಾಲ್ಕು ಜಗತ್ತುಗಳು – ಉತ್ತರ ಅಮೆರಿಕದ ಇಂಡಿಯನ್ನರ ಪುರಾಣ ಮತ್ತು ಜಾನಪದ ಕತೆಗಳು – ೨೦೧೪ರಲ್ಲಿ ಪ್ರಕಟಿಸಿದ ಪುಸ್ತಕ. 'ಬಿನ್ನಹ'ದಲ್ಲಿ ರಾಜಗೋಪಾಲ್ ಈ ಕತೆಗಳ ಅನುವಾದದ ಹಿಂದಿರುವ ಪಯಣವನ್ನು ಸೂಚಿಸಿದ್ದಾರೆ. ರಾಜಗೋಪಾಲ್, ಅಮೆರಿಕನ್ ಸಾಹಿತ್ಯದ ಕ್ಲಾಸಿಕ್ ಕೃತಿಗಳನ್ನು ಅನುವಾದಿಸಬಹುದಿತ್ತು, ಕಪ್ಪು ಸಾಹಿತ್ಯವನ್ನು ಅನುವಾದಿಸಬಹುದಿತ್ತು, ವೃತ್ತಿಯ ಶ್ರೀಮಂತ ಅನುಭವದ ಹಿನ್ನೆಲೆಯಲ್ಲಿ ತಾಂತ್ರಿಕ ಸಾಹಿತ್ಯವನ್ನು ಅನುವಾದಿಸಬಹುದಿತ್ತು. ಇದೆಲ್ಲವನ್ನೂ ಬಿಟ್ಟು ಈ ಕತೆಗಳನ್ನೇ ಏಕೆ ಆಯ್ದುಕೊಂಡರು? ರಾಜಗೋಪಾಲ್ ಬರೆಯುತ್ತಾರೆ – 'ಸುಮಾರು ನಲವತ್ತೇಳು ವರ್ಷಗಳಿಂದ ಅಮೆರಿಕದ ನೆಲದಲ್ಲಿ ವಾಸಿಸಿರುವ ನಾನು ಇಲ್ಲಿನ ಮೂಲ ನಿವಾಸಿಗಳಿಗೆ ಒಪ್ಪಿಸುವ ಕಾಣಿಕೆ ಇದು'. ಈ ಆಯ್ಕೆ ದಿಢೀರನೆ ಮಾಡಿದ್ದಲ್ಲ. ೧೯೮೭ರಲ್ಲಿ ಮೂರ್ತಿರಾಯರ 'ಅಪರವಯಸ್ಕನ ಅಮೆರಿಕಾ ಯಾತ್ರೆ'ಯನ್ನು ಸಮೀಕ್ಷಿಸುವಾಗ, ಈ ಕತೆಗಳ, ಅಮೆರಿಕಾದ ಮೂಲ ನಿವಾಸಿಗಳ ಪ್ರಸ್ತಾಪ ಬರುತ್ತದೆ (ಪುಟ ೧೪೯ – ಗಾಂಧಿ ಯುಗಕ್ಕೆ ಕನ್ನಡಿ). ಮೂಲ ನಿವಾಸಿಗಳ ಸಂವೇದನೆ ಮೂಲಭೂತವಾಗಿ ವಿಶ್ವಾತ್ಮಕವಾದದ್ದು, ಮಾನವೀಯವಾದದ್ದು, ಸ್ಥಳೀಯ ಚೈತನ್ಯವನ್ನು ಎತ್ತಿ ಹಿಡಿಯುವಂತದ್ದು. ರಾಜಗೋಪಾಲರ ಎಲ್ಲ ಬರಹಗಳಲ್ಲೂ ಈ ಮೂರು ಅಂಶಗಳನ್ನು ಮತ್ತೆ ಮತ್ತೆ ಎತ್ತಿ ಹಿಡಿಯಲಾಗಿದೆ. ಇದೇ ಸಂಕಲನದ 'ಮಾಸ್ತಿ ಎಂಬ ಋಷಿ ಹೇಳಿದ ಕತೆಗಳು' ಲೇಖನದಲ್ಲೂ ಈ ಮೂರೂ ಅಂಶಗಳೂ ಇವೆಯಷ್ಟೆ. ಅಮೆರಿಕಾದಲ್ಲಿ ಕುಳಿತುಕೊಂಡು ಮಾಸ್ತಿಯ ಕತೆಗಳನ್ನು ನಿರಚನೆ ಮಾಡುವಾಗ ಅವರಿಗೆ ಮುಖ್ಯವಾಗಿ ಕಂಡದ್ದು ವಲಸಿಗರಿಗೆ, ಸ್ಥಳೀಯರಿಗೆ, ಎಲ್ಲ ದೇಶಕ್ಕೂ, ಸಂಸ್ಕೃತಿಗೂ ಅಗತ್ಯವಾದ 'ಲೋಕ ಕಾರುಣ್ಯ'. ಲೋಕ ಕಾರುಣ್ಯವಿಲ್ಲದವನು ಚಿಂತನೆಯಲ್ಲಾಗಲೀ, ವೃತ್ತಿಯಲ್ಲಾಗಲೀ, ಬರಹದಲ್ಲಾಗಲೀ ಸಾಂಸ್ಕೃತಿಕ ಋಣವನ್ನು ತೀರಿಸಲಾರ.

ಲೋಕ ಕಾರುಣ್ಯದ ಮುಖ್ಯ ಲಕ್ಷಣವೆಂದರೆ, ಸೃಷ್ಟಿಯ ವೈವಿಧ್ಯ, ವಿಸ್ತಾರವನ್ನು ಒಪ್ಪುವುದು ಮತ್ತು ಸೃಷ್ಟಿಯಲ್ಲಿ ನಡೆಯುವ ಎಲ್ಲ ವ್ಯಾಪಾರಗಳ ನಡುವೆ ತರತಮ ಎಣಿಸದಿರುವುದು. ಗಂಭೀರ, ತಾತ್ವಿಕ ಸ್ವರೂಪದ ಬರಹಗಳನ್ನು ಮಾಡಿರುವ ರಾಜಗೋಪಾಲ್, ಹಾಸ್ಯ ಬರವಣಿಗೆಗೆ ಸಂಬಂಧಿಸಿದ ಹಾಗೆ 'ನಗೆಗನ್ನಡಂ ಗೆಲ್ಗೆ' ಎಂಬ ಕೃತಿಯ ಸಂಪಾದಕರೂ ಆಗಿದ್ದಾರೆ ಎಂಬುದೂ ಮುಖ್ಯ. ತಾನು ಬಿಟ್ಟು ಬಂದ ಸಂಸ್ಕೃತಿಯ ಸ್ತರದೊಡನೆ ವಲಸಿಗ ಯಾವ ಸ್ತರದ ಸಂಬಂಧವನ್ನು ಸ್ಥಾಪಿಸಿಕೊಳ್ಳುತ್ತಾನೆ



ಎಂಬುದು ಸಾಂಸ್ಕೃತಿಕ ಋಣದ ಸ್ವರೂಪವನ್ನು ಕುರಿತಂತೆ ಮುಖ್ಯವಾದ ಪ್ರಶ್ನೆ – ಕೇವಲ ನೆನಪುಗಳ, ಹಳಹಳಿಕೆಯ, ಭಾವನಾತ್ಮಕ ಸ್ತರದಲ್ಲಿನ ಜೀವನ ಶೈಲಿಯ ಪ್ರಶ್ನೆಗಳ ಸ್ತರದಲ್ಲೆ? ಇಲ್ಲ ಕೇವಲ ತಾತ್ವಿಕತೆಯ ಅಥವಾ ಪರಿಕಲ್ಪನೆಗಳ ಸ್ತರದಲ್ಲೆ?

ರಾಜಗೋಪಾಲ್ ಈಗ ಮಾಡಿರುವ ಎಲ್ಲ ಬರಹಗಳನ್ನೂ ಇಂಗ್ಲೀಷಿನಲ್ಲಿ ಮಾಡಬಹುದಿತ್ತು. 'ಗಾಂಧಿ' ಸಂಕಲನದ ಬಹುಪಾಲು ಲೇಖನಗಳು ಇಂಗ್ಲೀಷಿನಲ್ಲಿ ಪ್ರಕಟವಾಗಿದ್ದರೆ, ಅದಕ್ಕೆಲ್ಲ ಒಂದು ಸಿದ್ಧ ಇಂಗ್ಲಿಷ್ ಓದುಗ ವರ್ಗವೂ ಇತ್ತು. ಮತ್ತು ಇಂತಹ ಓದುಗ ವರ್ಗ ಬಯಸುವ ಮನೋಧರ್ಮ–ವೈಚಾರಿಕತೆಯ ಧಾಟಿ ಕೂಡ ರಾಜಗೋಪಾಲರ ಬರವಣಿಗೆಗಳಲ್ಲಿದೆ. ಆದರೂ ರಾಜಗೋಪಾಲ್ ಕನ್ನಡದಲ್ಲಿ ಬರೆದರು. ಬರವಣಿಗೆಗೆ ಒಂದು Cultural Space ಮತ್ತು Institutional Space ಕೊಡುವಲ್ಲಿ, ಸಾಹಿತ್ಯ–ಸಂಸ್ಕೃತಿಯನ್ನು ನಿರ್ವಹಿಸುವ ಒಂದು ವರ್ಗ ಯಾವಾಗಲೂ ಯಜಮಾನಿಕೆಯ ಧೋರಣೆಯಲ್ಲಿ ಕೆಲಸ ಮಾಡುತ್ತದೆ, ಶ್ರೇಣೀಕರಣಗಳನ್ನು ಸೃಷ್ಟಿಸುತ್ತಿರುತ್ತದೆ. ಯಜಮಾನರು ಯಾರು, ಅವರು ಯಾವ ಯಾವ ರೀತಿಯ ಸಂಸ್ಥೆ–ಅಧಿಕಾರ ಕೇಂದ್ರಗಳನ್ನು ನಿರ್ವಹಿಸುತ್ತಿದ್ದಾರೆ ಎಂಬಂಶದ ಮೇಲೆ, ಒಬ್ಬ ಲೇಖಕನ ಬರಹಗಳಿಗೆ ಸಿಗುವ ಸಮಕಾಲೀನ Cultural ಮತ್ತು Institutional Space ನಿರ್ಧಾರವಾಗುತ್ತದೆ. ಕಿಂದರಿ ಜೋಗಿ, ಶಬರಿ, ಪುತಿನ ಸಂಗೀತ, ಈ ಲೇಖನಗಳನ್ನು ಒಳಗೊಂಡ 'ಗಾಂಧಿ' ಸಂಗ್ರಹಕ್ಕೆ ಕರ್ನಾಟಕದ ಒಳಗಡೆಯೂ ಓದು, ವ್ಯಾಖ್ಯಾನ, ವಾಗ್ವಾದ, ಮೆಚ್ಚುಗೆ ನಿರ್ಮಾಣವಾಗಬೇಕಾಗಿತ್ತು. ಆದರೆ ಹಾಗಾಗಲಿಲ್ಲ. ಹಾಗಾಗುವುದಿಲ್ಲವೆಂದು ರಾಜಗೋಪಾಲರಿಗೂ ಗೊತ್ತಿರುತ್ತದೆ. ಹಾಗಿದ್ದರೆ, ಅವರ, ಅಂತಹವರ ಇಂತಹ ಬರಹಗಳಿಗೆ ಓದುಗವರ್ಗ ಯಾರು? ಕರ್ನಾಟಕದಿಂದ ಹೊರಗಡೆ ಇರುವ ಓದುಗರು ಗಮನಿಸುತ್ತಾರೆಯೆ? ಈ ಬರಹ ಅವರ ಸಾಂಸ್ಕೃತಿಕ ಅಪೇಕ್ಷೆಗಳಿಗನುಗುಣವಾಗಿ ಇದೆಯೆ? ಕೊನೆಗೂ ಇಂತಹ ಬರಹಗಳಿಗೆ ಓದುಗ ಬರೆಯುವವನೇ ಆಗಿರುತ್ತಾನೆ ಅಥವಾ ಅವನ ಆಪ್ತ ವಲಯ ಮಾತ್ರವಾಗಿರುತ್ತದೆ.

ಇದು ರಾಜಗೋಪಾಲರಿಗೆ ಗೊತ್ತಾಗಿದ್ದೂ ಅವರು ಯಾವ ರೀತಿಯ ನಿಲುವನ್ನು ತಳೆಯುತ್ತಿದ್ದರು ಎಂಬುದು ಮುಖ್ಯ. ಅಮೆರಿಕಾದಲ್ಲಿರುವ ಕನ್ನಡಿಗರ ಸಂವೇದನೆಯ ಸ್ವರೂಪವನ್ನು ಕುರಿತು ನಾನು ನನ್ನ 'ಒಳಕಥನ' ಅಂಕಣಗಳಲ್ಲಿ ಬರೆದೆ. ಸಹಜವಾಗಿಯೇ ಕರ್ನಾಟಕದ ಒಳಗಿನ ಓದುಗ ವರ್ಗ ಈ ಬರಹಗಳನ್ನು ಉದಾಸೀನ ಮಾಡಿತು. ಕೆಲವು ಅಮೆರಿಕಾದ ಕನ್ನಡಿಗರು ಪ್ರತಿಕ್ರಿಯಿಸಿದರು. ಹೀಗೆ ಪ್ರತಿಕ್ರಿಯಿಸಿದವರಲ್ಲಿ ರಾಜಗೋಪಾಲರ ಪ್ರತಿಕ್ರಿಯೆ ವಿಶಿಷ್ಟವಾಗಿತ್ತು, ಮನ ಕಲಕುವಂತಿತ್ತು. ಅಮೆರಿಕಾದಲ್ಲಿರುವ ಕನ್ನಡಿಗರ ಸಂವೇದನೆ, ಚಿಂತನೆ, ಬರಹಗಳನ್ನು ಒಳನಾಡಿನಲ್ಲಿರುವ ಓದುಗ–ವಿಮರ್ಶಕ ವರ್ಗ 'ಸಮಾನತೆ'ಯ ನೆಲೆಯಲ್ಲಿ ಓದುವುದಿಲ್ಲ. ಓ, ಏನೋ, ಅಷ್ಟೊಂದು

ದೂರದಲ್ಲಿದ್ದುಕೊಂಡೂ ಕನ್ನಡದಲ್ಲಿ ಬರೆಯುತ್ತಿದ್ದಾರಲ್ಲ ಎಂಬ ಅನುಕಂಪ ತುಂಬಿದ Patronizing ಧೋರಣೆಯಿಂದ ನೋಡುತ್ತಾರೆ. ಹೀಗಿರುವಾಗ ನಿಮ್ಮ ದೃಷ್ಟಿಕೋನ ಭಿನ್ನವಾಗಿದೆ, ಅಪರೂಪದ್ದಾಗಿದೆ ಎಂದು ನೊಂದುಕೊಂಡು ಬರೆದಿದ್ದರು. ಹೀಗೆ ನೊಂದುಕೊಂಡು ಒಳನೋಟದಿಂದ ಬರೆದಿದ್ದ ಅವರ ಮಿಂಚಂಚೆಯ ಪತ್ರವನ್ನು ನಾನು ಕಳೆದುಕೊಂಡೆ. ಇಲ್ಲದಿದ್ದರೆ ಅದು ಒಂದು ಮುಖ್ಯ ಸಾಂಸ್ಕೃತಿಕ ದಾಖಲೆ ಆಗಬಹುದಿತ್ತು. [ಅಮೆರಿಕಾದ ಕನಸು–ನನಸು, ಅಮೆರಿಕಾದಲ್ಲಿ ಕನ್ನಡ – ಎಂಬ ಎರಡು ಬರಹಗಳು ನನ್ನ 'ಒಳಕಥನ' ಅಂಕಣ ಸಂಗ್ರಹದಲ್ಲಿ ಪ್ರಕಟವಾಗಿವೆ – ಗೀತಾಂಜಲಿ ಪಬ್ಲಿಕೇಷನ್ಸ್, ಬೆಂಗಳೂರು – ೨೦೧೮].

ಈ ಯಾವ ಬರಹಗಳನ್ನೂ ರಾಜಗೋಪಾಲ್ ಕೇವಲ ನೆನಪುಗಳ, ಹಳಹಳಿಕೆಯ, ಭಾವನಾತ್ಮಕ ಸ್ತರದಲ್ಲಿ ಮಾಡಿಲ್ಲ ಎಂಬುದು ಮುಖ್ಯ – ಬಹುಪಾಲು ಬರಹಗಳು ವಿಶ್ಲೇಷಣಾತ್ಮಕ ಧಾಟಿಯಲ್ಲಿವೆ, ಗಂಭೀರ ಸಾಹಿತ್ಯ ಸ್ವರೂಪದ ಲೇಖನಗಳಾಗಿವೆ, ವಿಮರ್ಶಾತ್ಮಕ ಮಂಡನಾ ಕ್ರಮದಲ್ಲಿಯೇ ಇವೆ.

ಹೊರ ನಾಡಿನಲ್ಲಿರುವ ಕನ್ನಡಿಗ ತನ್ನ ಬರಹ, ಚಿಂತನೆಗಳನ್ನು ಮಾಡುವಾಗ ಸಾಂಸ್ಕೃತಿಕ ಚಟುವಟಿಕೆಗಳ ಯಾವ ಸ್ತರದಲ್ಲಿ ಕ್ರಿಯಾಶೀಲನಾಗಿರುತ್ತಾನೆ ಎಂಬುದು ಸಾಂಸ್ಕೃತಿಕ ಋಣದ ಪರಿಕಲ್ಪನೆಯ ಇನ್ನೊಂದು ಮುಖ್ಯ ಭಾಗ. ಸಾಂಸ್ಕೃತಿಕ ಚಟುವವಟಿಕೆಗಳಲ್ಲಿ ಒಳನಾಡಿನಲ್ಲಾಗಲೀ, ಹೊರನಾಡಿನಲ್ಲಾಗಲೀ ಜನಪ್ರಿಯ, ಜನರಂಜಕ ಸಂಸ್ಕೃತಿಯ ಸ್ತರಕ್ಕೇ ಹೆಚ್ಚು ಪ್ರಾಮುಖ್ಯತೆ, ಪ್ರಚಾರ. ಇಲ್ಲಿ ಸರ್ಕಾರಿ ಸಂಸ್ಥೆ, ಸಾಂಸ್ಕೃತಿಕ ಸಂಘಟನೆಗಳು ಪ್ರೋತ್ಸಾಹಿಸುವುದು ಕೂಡ ಆ ರೀತಿಯ ಸ್ತರಗಳನ್ನೇ. ಬರವಣಿಗೆಯನ್ನು ಒಂದು ಜೀವನ ಸಂಪಾದನೆಯ ಮಾರ್ಗವಾಗಿ ಕಂಡುಕೊಂಡಿರುವ ಇಲ್ಲಿನ ಕೆಲವು ಬರಹಗಾರರು, ಸಾಂಸ್ಕೃತಿಕ ಸಂಘಟಕರು ಕೂಡ ಪ್ರೋತ್ಸಾಹಿಸುವುದು ಇಂತಹ ಸ್ತರಗಳನ್ನೇ. ಹೀಗಿದ್ದೂ ರಾಜಗೋಪಾಲರಂತಹ ಕೆಲವು ಸೂಕ್ಷ್ಮಜ್ಞರು ಗಂಭೀರ ಸಾಹಿತ್ಯ ಚಟುವಟಿಕೆ, ಪ್ರಕಟಣೆ, ಅಧ್ಯಯನಗಳಿಗೆ ಮೀಸಲಾದಂತಹ 'ಕನ್ನಡ ಸಾಹಿತ್ಯ ರಂಗ' ಮತ್ತು 'ಪ್ರಸ್ತಾಪ'ದಂತಹ ಸಂಘಟನೆಗಳನ್ನು ಹುಟ್ಟು ಹಾಕಿದರು ಮತ್ತು ಕ್ರಿಯಾಶೀಲ ನಾಯಕತ್ವವನ್ನು ಕೂಡ ಒದಗಿಸಿದರು ಎಂಬುದು ತುಂಬಾ ಮುಖ್ಯವಾಗುತ್ತದೆ. ಇಲ್ಲಿ ಇನ್ನೂ ಒಂದು ಆಯಾಮವೂ ಇದೆ. ಭಾರತದಿಂದ ಹೊರಗೆ ನಡೆಯುವ ಹೆಚ್ಚಿನ ಸಾಹಿತ್ಯಿಕ ಚಟುವಟಿಕೆಗಳಲ್ಲಿ, ಇಂಗ್ಲಿಷ್ ಮತ್ತು ಹಿಂದಿಯಲ್ಲಿ ನಡೆಯುವ ಬರವಣಿಗೆ, ಚಟುವಟಿಕೆಗಳಿಗೇ ಹೆಚ್ಚಿನ ಪ್ರಾಶಸ್ತ್ಯ. ಅಮೆರಿಕಾದಲ್ಲಿರುವ ಬಹುಪಾಲು ಕನ್ನಡಿಗರು ಕೂಡ ಗುರುತಿಸಿಕೊಳ್ಳುವುದು ಜನಪ್ರಿಯ ಸಂಸ್ಕೃತಿಯ ಸ್ತರದ ಜೊತೆಗೇ. ಇಂತಹ ಕಡೆಯೆಲ್ಲ ಸಾಂಸ್ಕೃತಿಕ ಋಣವನ್ನು ನಿರ್ವಹಿಸುವುದಕ್ಕಿಂತ ಹೆಚ್ಚಾಗಿ ತಮ್ಮ ತಮ್ಮ ಮಾನಸಿಕ ಅಗತ್ಯಗಳನ್ನು ಪೂರೈಸಿಕೊಳ್ಳುವ ಸ್ತರವೇ ಮುಖ್ಯವಾಗಿರುತ್ತದೆ (Psychological Need).



ಕುಟುಂಬ ವತ್ಸಲರಾಗಿದ್ದ ರಾಜಗೋಪಾಲರು ವಿಶಿಷ್ಟ ಸಾಧಕರನ್ನು ಒಳಗೊಂಡ ತಮ್ಮ ಕುಟುಂಬವನ್ನು, ಕುಟುಂಬದ ಸದಸ್ಯರನ್ನು, ಸಾಂಸ್ಕೃತಿಕ ಲೋಕ ಯಾವ ರೀತಿ ಪರಿಗಣಿಸಬೇಕು ಎಂದು ಬಯಸುತ್ತಿದ್ದರು ಎಂಬುದು ಕೂಡ ಮುಖ್ಯ. ಶಾರದಾ ಪ್ರಸಾದರ ಸಂಕ್ಷಿಪ್ತ ಜೀವನ ಚರಿತ್ರೆಯನ್ನು ನಾನು ಬರೆಯುವಾಗ (೨೦೧೪ರ ಉದಯಭಾನು ಕಲಾ ಸಂಘದ ಪ್ರಕಟಣೆ) ರಾಜಗೋಪಾಲರೊಡನೆ ಸ್ವಲ್ಪ ಕಾಲ ಒಡನಾಟವಿತ್ತು. ನಂತರ ಅವರು ಮತ್ತು ಅವರ ಕುಟುಂಬದವರು ಸಂಪಾದಿಸಿದ 'ಹಲವು ಮಕ್ಕಳ ತಾಯಿ' ಎಂಬ ಸಂಪುಟವನ್ನು ಕೂಡ ಗಮನಿಸಿದೆ. ಒಂದು ವಿಶಿಷ್ಟ ಜೀವನ ಶೈಲಿಯ–ಸಾಧನೆಯ ಕುಟುಂಬವನ್ನಾಗಿ ತಮ್ಮ ಕುಟುಂಬದ ಸದಸ್ಯರ ಸಾಧನೆ ಮತ್ತು ಚಟುವಟಿಕೆಗಳನ್ನು ಗಮನಿಸಬೇಕೆಂಬ ಮನೋಧರ್ಮ ರಾಜಗೋಪಾಲರಲ್ಲಿ ಕಾಣುತ್ತಿತ್ತೇ ಹೊರತು ಅದಕ್ಕೊಂದು Cultural Space ನಿರ್ಮಾಣ ಮಾಡುವ ಧೋರಣೆ ಕಾಣಲಿಲ್ಲ.

ಬೇರೆ ಬೇರೆ ಸಾಮಾಜಿಕ, ಆರ್ಥಿಕ, ಚಾರಿತ್ರಿಕ ಕಾರಣಗಳಿಗಾಗಿ ಕನ್ನಡಿಗರ, ಭಾರತೀಯರ ವಲಸೆ ಹೆಚ್ಚುತ್ತಾ ಹೋಗುತ್ತದೆ. ಹೀಗೆ ವಲಸೆ ಹೋದವರು ತಮ್ಮ ತಮ್ಮ ಸಾಂಸ್ಕೃತಿಕ ಋಣವನ್ನು, ವೈಯಕ್ತಿಕ, ಸಾಮಾಜಿಕ, ಕೌಟುಂಬಿಕ, ಭಾಷಿಕ ಸ್ತರಗಳಲ್ಲಿ ಹೇಗೆ ನಿರ್ವಹಿಸುತ್ತಾರೆ, ಒಳನಾಡಿನ ಯಾವ ಸಂಸ್ಕೃತಿಯ ಸ್ತರದೊಡನೆ ಸಂಪರ್ಕ ಇಟ್ಟುಕೊಳ್ಳ ಬಯಸುತ್ತಾರೆ ಮತ್ತು ಇಲ್ಲಿಯ ಓದುಗವರ್ಗ ಹಾಗೂ ಸಾಂಸ್ಕೃತಿಕ ಯಜಮಾನರು ಇದನ್ನೆಲ್ಲ ಯಾವ ರೀತಿಯಲ್ಲಿ ನೋಡುತ್ತಾರೆ ಎಂಬುದು ಕೂಡ ಮುಂದಿನ ದಿನಗಳ ಸಾಂಸ್ಕೃತಿಕ ಅಧ್ಯಯನದ ಸೂಕ್ಷ್ಮ ಭಾಗವಾಗಿರುತ್ತದೆ. [ಈ ಲೇಖನದಲ್ಲಿರುವ ಒಳನೋಟಗಳಿಗಾಗಿ ನಾನು ಝುಂಪಾ ಲಹರಿಯವರ 'In Other Words' ಮತ್ತು ನಯಿಪಾಲರ 'A House for Mr. Biswas' ಕೃತಿಗಳಿಗೆ ಋಣಿಯಾಗಿದ್ದೇನೆ].



# ಎಚ್. ವೈ. ರಾಜಗೋಪಾಲ್ ಅವರ 'ಸೃಷ್ಟಿ: ನಾಲ್ಕು ಜಗತ್ತುಗಳು'

**–ಎಚ್. ಜಿ. ಸೋಮಶೇಖರ ರಾವ್**

ಅರ್ಧ ಶತಮಾನಕ್ಕೂ ಹೆಚ್ಚಿನ ಕಾಲ ಅಮೇರಿಕಾದಲ್ಲಿ ವಾಸಿಸುತ್ತ ಕನ್ನಡ ಸಮಾಜದ ನಿಕಟ ಸಂಪರ್ಕವಿದ್ದು ಅಲ್ಲಿಯ ಕನ್ನಡ ಸಾಹಿತ್ಯ ರಂಗದ ಸಂಸ್ಥಾಪಕರಲ್ಲೊಬ್ಬರಾದ ಡಾ. ಎಚ್. ವೈ. ರಾಜಗೋಪಾಲ್ ಹೊರನಾಡಿನ ಕನ್ನಡಿಗರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಅವರ ಇತ್ತೀಚಿನ ಕೃತಿ (೨೦೧೪: ಅಭಿನವ ಪ್ರಕಾಶನ) 'ಸೃಷ್ಟಿ–ನಾಲ್ಕು ಜಗತ್ತುಗಳು' ವಿಶಿಷ್ಟವಾಗಿದೆ. ಅನುವಾದ ಕೃತಿಯಾದರೂ ಇಲ್ಲಿರುವ ಕಥೆಗಳು ಅವರ ಸ್ವಂತ ಕೃತಿಯಂತೆ ಆಪ್ತವಾಗಿವೆ. ಈ ಕೃತಿಗೆ ಡಾ. ಯು. ಆರ್. ಅನಂತಮೂರ್ತಿಯವರ ಸೊಗಸಾದ ಮುನ್ನುಡಿಯ ಮುಕುಟವಿದೆ. ಇಲ್ಲಿರುವ 'ಕೊಳಲು' ಎಂಬೊಂದು ಕಥೆಯನ್ನು ಕುರಿತಾಗಿ ಪ್ರೊ. ಎ. ಎನ್. ಮೂರ್ತಿರಾಯರ ಮೆಚ್ಚುಗೆಯ ಮಾತುಗಳು ಪ್ರಕಟವಾಗಿವೆ. ಅವರ 'ಅಪರ ವಯಸ್ಕನ ಅಮೇರಿಕ ಯಾತ್ರೆ'ಯಲ್ಲಿ ಕೆಂಪು ಇಂಡಿಯನ್ನರ ಬಗ್ಗೆ ಓದಿ ರಾಜಗೋಪಾಲ್ ಆಸಕ್ತಿ ಕುದುರಿ, ಆ ವಿಷಯದ ಬಗ್ಗೆ ಹೆಚ್ಚಿನ ಮಾಹಿತಿಗಾಗಿ ಕೆಲವು ಆಧಾರ ಗ್ರಂಥಗಳನ್ನು ಅಧ್ಯಯನ ಮಾಡಿ ಈ ಕೃತಿಗೆ ಕೈ ಹಾಕಿದರು.

ಈ ಕೃತಿ ಅಮೇರಿಕಾದ ಮೂಲನಿವಾಸಿಗಳನ್ನು ಕುರಿತದ್ದಾಗಿದೆ. (ಅವರನ್ನು ರೆಡ್ ಇಂಡಿಯನ್ಸ್ ಎಂದು ಕರೆಯುತ್ತಿದ್ದರು). ಅದೇಕೋ ಏನೋ ಈ ಮೂಲನಿವಾಸಿಗಳ



ಬಗ್ಗೆ ಈಗಲೂ ಒಳ್ಳೆ ಅಭಿಪ್ರಾಯವಿಲ್ಲ ಎಂಬುದು ಅಚ್ಚರಿಯ ಸಂಗತಿ! ಹಾಲಿವುಡ್ ಚಿತ್ರಗಳಲ್ಲಿ ಈ ಮೂಲನಿವಾಸಿಗಳನ್ನು ಅನಾಗರಿಕರು, ಕ್ರೂರಿಗಳು ಎಂಬಂತೆ ಚಿತ್ರಿಸಿ ಅವರನ್ನು ಸದೆಬಡಿಯುವಂಥ ಚಿತ್ರಣ ಮೂಡಿ ಬರುತ್ತಿತ್ತು. ಆದರೆ ಮೂಲನಿವಾಸಿಗಳಿಗೆ ಬಿಳಿಯರಿಂದ ಆದ ದೌರ್ಜನ್ಯ, ಮೋಸ, ವಂಚನೆ, ಅನ್ಯಾಯ ನಮಗೆ ತಿಳಿಯದೆ ಹೋಯಿತು! ಅದೇನೇ ಇರಲಿ ಈ ಮೂಲನಿವಾಸಿಗಳ ಒಂದು ಬಣದ ನಾಯಕ ಸಿಯಾಥಲ್ ಆಗಿನ ಅಮೇರಿಕಾದ ಅಧ್ಯಕ್ಷ ಫ್ರಾಂಕ್ಲಿನ್ ಪಿಯರ್ಸ್ಗೆ ಬಗ್ಗೆ ಬರೆದ ಪದ್ಯವೊಂದು ಅದ್ಭುತವಾಗಿದೆ. ಅಮೇರಿಕಾದ ಅಧ್ಯಕ್ಷ, ಮೂಲನಿವಾಸಿ ಬಣದ ನಾಯಕನಿಗೆ 'ನಿಮ್ಮ ನೆಲ ನಮಗೆ ಮಾರಿ...' ಎಂದು ಬರೆದ ಪತ್ರಕ್ಕೆ ಮೂಲನಿವಾಸಿ ಬಣದ ನಾಯಕ ಬರೆದ ಮಾರುತ್ತರ ಪ್ರಖ್ಯಾತವಾಗಿದೆ. ಆ ಪತ್ರದ ಕಾವ್ಯಮಯತೆ, ಮೂಲವಾಸಿಗಳ ಪ್ರಕೃತಿಪ್ರೇಮ, ಲೋಕದೃಷ್ಟಿ – ಇವೆಲ್ಲಾ ನಮ್ಮನ್ನು ಬೆರಗುಗೊಳಿಸುತ್ತವೆ. ಬಣದ ನಾಯಕನಿಗೆ ಗೊತ್ತು, ಭೂಮಿ ಮಾರಲು ಒಪ್ಪದಿದ್ದರೆ ಅವರ ಮೇಲೆ ಬಂದೂಕದ ಸುರಿಮಳೆ ಆಗುತ್ತದೆಂದು. ಅದರ ಅರಿವಿದ್ದೂ ಬಣದ ನಾಯಕ ಹೀಗೆ ಬರೆದು ತಿಳಿಸುತ್ತಾನೆ:

'ಅಂತರಿಕ್ಷವನ್ನು ಭೂಮಿತಾಯಿಯ ಮಡಿಲ ಸುಖೋಷ್ಣವನ್ನೂ ಮಾರುವುದು ಹೇಗೆ? ಈ ಯೋಚನೆಯೇ ನಮಗೆ ವಿಚಿತ್ರವಾಗಿ ಕಾಣುತ್ತದೆ. ಗಾಳಿಯ ಆಪ್ಯಾಯದ ಮೇಲಾಗಲೀ, ನೀರಿನ ಚಂಚಲ ಕಾಂತಿಯ ಮೇಲಾಗಲೀ ನಾವಿನ್ನೂ ಒಡೆತನವನ್ನು ಸಂಪಾದಿಸಿಲ್ಲ! ಅದನ್ನು ನಮ್ಮಿಂದ ಹೇಗೆ ತಾನೇ ಕೊಂಡೀರಿ? ಈ ನೆಲದ ಪ್ರತಿ ಅಂಗುಲವೂ ನನ್ನ ಜನಕ್ಕೆ ಪವಿತ್ರ. ಹೊಳೆಯುವ ಪೈನ್ ಸೂಜಿ (ಪೈನ್ ಮರದ ಎಲೆ), ಮರಳು ತೀರ, ಕತ್ತಲ ಕಾಡಿನಲ್ಲಿ ಕವಿಯುವ ಮಂಜು, ತೆರವಾದ ವನಸ್ಥಳ, ಗುಂಗುಟ್ಟುವ ಕೀಟ – ಪ್ರತಿಯೊಂದಕ್ಕೂ ನಮ್ಮ ನೆನಪಿನಲ್ಲೂ, ನಮ್ಮ ಅನುಭವದಲ್ಲೂ ಪವಿತ್ರ ಸ್ಥಾನವಿದೆ...' ಇದೆಲ್ಲಾ ಈ ಪುಸ್ತಕದ ಹಿನ್ನೆಲೆ. ಈ ಬಗ್ಗೆ ಲೇಖಕರು ತಮ್ಮ 'ಬಿನ್ನಹ'ದಲ್ಲಿ ಸವಿಸ್ತಾರವಾಗಿ ಪ್ರಸ್ತಾಪಿಸಿದ್ದಾರೆ.

ಇನ್ನು ಇಲ್ಲಿಯ ಕಥೆಗಳ ಬಗ್ಗೆ ಸಂಕ್ಷಿಪ್ತವಾಗಿ ಹೇಳಬಹುದಾದದ್ದು – ಅಮೇರಿಕನ್ ಇಂಡಿಯನ್ ಸಮಾಜದಲ್ಲಿ ಕಥೆಗಳ ಕಣಜವೇ ಇದೆ. ಅವರ ಕಥೆಗಳು ಕಾಲಾತೀತವಾದವು. ಮೌಖಿಕ ಪರಂಪರೆಯಲ್ಲಿ ಬಂದ ಕಥೆಗಳು – ಹಾಡುಗಳು ಅವರ ಭಾಷೆಯಲ್ಲೇ ಇದ್ದು ಮೂಲನಿವಾಸಿಗಳಿಗೆ ಆದ ಆಕ್ರಮಣಕಾರಿ ಕಹಿ ಅನುಭವಗಳಿವೆ. ಮೂಲನಿವಾಸಿಗಳ ಬಣಗಳಲ್ಲಿ ಸೃಷ್ಟಿಯ ಕಥೆಗಳಿವೆ. ಅವರ ಕಲ್ಪನೆಯಲ್ಲಿ ಸೃಷ್ಟಿ ನಾಲ್ಕು ಜಗತ್ತುಗಳನ್ನೊಳಗೊಂಡಿದೆ. ಈ ಪ್ರಪಂಚ ಹುಟ್ಟಿತು ಹೇಗೆ? ಮನುಷ್ಯನಿಗೂ ಪ್ರಾಣಿ ಪ್ರಪಂಚಕ್ಕೂ ಏನು ಸಂಬಂಧವಿದೆ?

ಈ ಕೃತಿಯಲ್ಲಿರುವ 'ಸ್ಪರ್ಧೆ', 'ಮಹಿಷಿ' ಎಂಬ ಕಥೆಗಳಲ್ಲಿ ಪ್ರಾಣಿವರ್ಗದೊಡನೆ





ಇರುವ ಮಾನವ ಸಂಬಂಧಗಳಿವೆ. 'ಮಿಲನ' ಕಥೆ ಗಂಡು-ಹೆಣ್ಣುಗಳು ಒಟ್ಟಾಗಿ – ಬದುಕಿ ಸುಖಿಸುವುದರ ಬಗ್ಗೆ ಇದೆ. ಮಾನವನ ಕೈಲಿ ಹೇಗೆ 'ಕೊಳಲು' ಬಂದು ಒಂದು ಸಮ್ಮೋಹನದ ಸಂವಹನದಲ್ಲಿ ಪ್ರೇಮಿಗಳಿಬ್ಬರ ಸಮ್ಮಿಲನವಾದ ರಮ್ಯ ಕಥೆ ಇದೆ. (ಈ 'ಕೊಳಲು' ಕಥೆಯ ಬಗ್ಗೆ ಪ್ರೊ. ಎ. ಎನ್. ಮೂರ್ತಿರಾಯರು ಬಹುವಾಗಿ ಮೆಚ್ಚಿ ಬರೆದ ಪತ್ರದ ಅನುವಾದ ಕೊಡಲಾಗಿದೆ). ಮೂಲನಿವಾಸಿಗಳಲ್ಲಿ ಮುಖ್ಯನೂ ಗೌರವಾನ್ವಿತನೂ ಆದ 'ಹಯವಾತ'ನ ಬಗ್ಗೆ ಸೊಗಸಾದ ಕಥೆಯಿದೆ. 'ಹೆಂಡತಿ ಹಿಂತಿರುಗಿದಳು' ಕಥೆಯಲ್ಲಿ ಸತ್ತ ಹೆಂಡತಿ ತನ್ನ ಗಂಡನ ಪರಿತಾಪಗಳನ್ನು ತಿಳಿದು ಮರಳಿ ಭೂಲೋಕಕ್ಕೆ ಬರುವುದು, ತನ್ನ ಗಂಡ ಪರಸ್ತ್ರೀಯೊಬ್ಬಳಲ್ಲಿ ಅನುರಕ್ತನಾದದ್ದನ್ನು ಕಂಡು, ಗಂಡ ಮಕ್ಕಳನ್ನು ಪರಲೋಕಕ್ಕೆ ಕರೆದೊಯ್ಯುವ ಕಥೆಯಿದೆ. 'ಮಾನವಳನ್ನು ಮದುವೆಯಾದ ಕರಡಿ' ಕಥೆ ಮೂಲನಿವಾಸಿಗಳ ನಂಬಿಕೆ ಕುರಿತಾದ್ದು. ಮೂಲನಿವಾಸಿಗಳ ಚರಿತ್ರೆ ಅದೆಷ್ಟು ಸಾವಿರ ವರ್ಷಗಳ ಹಿಂದಿನದೋ! ಹಾಗಾಗಿ ಕಥೆಗಳಲ್ಲಿ ಸಂಕೇತಗಳಿವೆ, ರಹಸ್ಯಗಳಿವೆ. ಆ ನಿವಾಸಿಗಳಿಗೆ ಗೊತ್ತಿದ್ದ ಪುರಾಣ ಪ್ರಸಂಗಗಳಿವೆ. ಈ ಪುಸ್ತಕವನ್ನು ಬರೆಯುವ ಮುನ್ನ ಡಾ. ರಾಜಗೋಪಾಲ್ ಅನೇಕ ಆಕರ ಗ್ರಂಥಗಳನ್ನು ಆಸ್ಥೆಯಿಂದ ಅಭ್ಯಾಸ ಮಾಡಿದ್ದಾರೆ. ಅಷ್ಟೇ ಅಲ್ಲ, ಈ ಕಥೆಗಳನ್ನು ನಮ್ಮದೇ ಅನ್ನಿಸುವ ಹಾಗೆ ಸೊಗಸಾದ ಕನ್ನಡದಲ್ಲಿ ಅನುವಾದಿಸಿದ್ದಾರೆ. ಈ ಕೃತಿಗೆ ಸುದೀರ್ಘವಾಗಿ ಡಾ. ಯು. ಆರ್. ಅನಂತಮೂರ್ತಿಯವರು ಬರೆದಿರುವ ಮುನ್ನುಡಿಯಲ್ಲಿ 'ಕನ್ನಡ ಭಾಷೆಯ ಉತ್ತಮವಾದ ಗದ್ಯ ಕೃತಿಯನ್ನು ಓದಬೇಕೆನ್ನಿಸುವವರಿಗೆ ಈ ಪುಸ್ತಕವನ್ನು ಕೊಡಬಹುದು' ಎಂದಿದ್ದಾರೆ. ಮುನ್ನುಡಿಯಲ್ಲಿ ಅವರೇ ಹೇಳಿರುವಂತೆ ಅಮೇರಿಕಾದ ಈ ಮೂಲನಿವಾಸಿಗಳು 'ವೇದ ಕಾಲದ ಜನರಂತೆ ನಮ್ಮ ಪುರಾತನರು; ಮಾನವ ಕುಟುಂಬದ ಮೂಲಪುರುಷರು.' ಮೂಲನಿವಾಸಿಗಳು – ರೆಡ್ ಇಂಡಿಯನ್ಸ್ – ಅವರು ಬಿಳಿ ಜನರ ಆಕ್ರಮಣಕ್ಕೆ ಒಳಗಾಗಿ ಈಗ ತಮ್ಮ ನೆಲದಲ್ಲೇ ಮೂಲೆಗುಂಪಾಗಿ 'ರಿಸರ್ವೇಷನ್'ನಲ್ಲಿ ಬದುಕಿರುವುದು ವಿಪರ್ಯಾಸವೇ ಹೌದು. ಕೃತಿಕಾರ ಡಾ. ರಾಜಗೋಪಾಲ್‌ರ ಬಿನ್ನಹದಲ್ಲಿ ಮೂಲವಾಸಿಗಳು ಹಾಗೂ ಕೃತಿಯ ಬಗ್ಗೆ ಸವಿಸ್ತಾರವಾಗಿ ಪ್ರಸ್ತಾಪಿಸಿದ್ದಾರೆ.

ಅಮೆರಿಕದಲ್ಲಿದ್ದು ಕನ್ನಡದಲ್ಲಿ ಇಂತಹ ಸೊಗಸಾದ ಕೃತಿ ರಚಿಸಿದ ಡಾ. ರಾಜಗೋಪಾಲ್ ಹಾಗೂ ಪ್ರಕಟಿಸಿದ 'ಅಭಿನವ' ಪ್ರಕಾಶಕರೂ ಅಭಿನಂದನೀಯರು.

[ಈ ಲೇಖನವನ್ನು ಇದೇ ಲೇಖಕರ ಮಿಂಚು-ಗುಡುಗು (ಅಕ್ಷಯ ಪ್ರಕಾಶನ) ಎಂಬ ಪುಸ್ತಕದಿಂದ ಆಯ್ದುಕೊಳ್ಳಲಾಗಿದೆ; ಅನುಮತಿಗಾಗಿ ನಮ್ಮ ವಿಶೇಷ ಕೃತಜ್ಞತೆಗಳು; ಸಂ.]

■

# ವಿದ್ಯಾವಿನಯ ಸಂಪನ್ನರು

–ಡಾ. ತೀ. ನಂ. ಶಂಕರನಾರಾಯಣ

ಡಾ. ಎಚ್. ವೈ. ರಾಜಗೋಪಾಲ್ ಮತ್ತು ವಿಮಲಾ ರಾಜಗೋಪಾಲ್ ಅವರನ್ನು ನಾನು ಮತ್ತು ನನ್ನ ಪತ್ನಿ ನಾಗಲಕ್ಷ್ಮಿ ಮೊದಲ ಬಾರಿಗೆ ಭೇಟಿ ಮಾಡಿದ್ದೂ ೨೦೧೫ರ ಏಪ್ರಿಲ್ ತಿಂಗಳಿನಲ್ಲಿ. ನಾವಿಬ್ಬರು ನ್ಯೂ ಜೆರ್ಸಿ ರಾಜ್ಯದ Plainsboro ಎಂಬ ಊರಿನಲ್ಲಿ ವಾಸವಾಗಿದ್ದ ನಮ್ಮ ಮಗಳು ಅಪರ್ಣಾ, ಅಳಿಯ ಅಶ್ವತ್ಥ, ಮೊಮ್ಮಕ್ಕಳು ಅವನೀ, ಅನಿಕಾ ಅವರನ್ನು ನೋಡಲು ಹೋಗಿದ್ದ ಸಂದರ್ಭದಲ್ಲಿ. ಅಮೆರಿಕ ಪ್ರವಾಸದಲ್ಲಿ ಪ್ರೇಕ್ಷಣೀಯ ಸ್ಥಳಗಳನ್ನು ನೋಡುವುದರ ಜೊತೆಗೆ ಅಲ್ಲಿದ್ದ ನಮ್ಮ ಬಂಧುಮಿತ್ರರನ್ನು ನೋಡುವುದು ಪ್ರಮುಖ ಕಾರ್ಯಕ್ರಮವಾಗಿತ್ತು. ನಾಗಲಕ್ಷ್ಮಿ ಖ್ಯಾತ ಜಾನಪದ ಸಂಗ್ರಾಹಕರು ಮತ್ತು ಸಂಪಾದಕರು ಆಗಿದ್ದ ಶ್ರೀ ಮತಿಘಟ್ಟ ಕೃಷ್ಣಮೂರ್ತಿ ಅವರ ಮಗಳು. ಮತಿಘಟ್ಟ ಕೃಷ್ಣಮೂರ್ತಿ ಅವರ ಅಣ್ಣ ಶ್ರೀ ಎಲ್ ಗುಂಡಪ್ಪನವರು ಖ್ಯಾತ ವಿದ್ವಾಂಸರು. ಅವರ ಮಕ್ಕಳಲ್ಲಿ ಡಾ. ಎಲ್. ಜಿ. ಸುಮಿತ್ರಾ, ಶ್ರೀಮತಿ ವಿಮಲಾ ರಾಜಗೋಪಾಲ್, ಶ್ರೀಮತಿ ಕಮಲಾ ಬಾಲು ಅವರು ಸೊಗಸಾಗಿ ಜಾನಪದ ಗೀತೆಗಳನ್ನು ಹಾಡುತ್ತಿದ್ದರು. ಮೂವರೂ ಆಕಾಶವಾಣಿಯಲ್ಲಿ ಕೆಲಸ ಮಾಡುತ್ತಿದ್ದರು. ತೀ.ನಂ.ಶ್ರೀ. ಅವರ ಮನೆಯಲ್ಲಿ ಓದುತ್ತಿದ್ದಾಗ ಈ ಮೂವರು ತೀ.ನಂ.ಶ್ರೀ. ಅವರ ಆಪ್ತ ಮಿತ್ರರಾದ ಡಾ. ಪು.ತಿ.ನ. ಅವರ ಪ್ರಸಿದ್ಧ ಗೀತರೂಪಕ ಗೋಕುಲ ನಿರ್ಗಮನದ ಹಾಡುಗಳನ್ನು





ಹಾಡುತ್ತಾರೆ ಎಂಬುದನ್ನು ಕೇಳಿದ್ದೆ. ಅನಂತರ ಎಲ್. ಜಿ. ಸುಮಿತ್ರಾ, ವೀಣಾ ರಘು, ಮತ್ತು ಕಮಲಾ ಬಾಲು ಅವರನ್ನು ನೋಡಿದ್ದೆ. ಆದರೆ ವಿಮಲಾ ಮತ್ತು ವಾಸಂತಿ ಅವರನ್ನು ನೋಡಿರಲಿಲ್ಲ. ಅವರು ಅಮೇರಿಕಾದಲ್ಲಿ ನೆಲೆಸಿದ್ದರೆಂಬುದನ್ನು ಕೇಳಿದ್ದೆ. ವಿಮಲಾ ಅವರ ಪತಿ ಡಾ. ರಾಜಗೋಪಾಲ್ ಅವರು ಖ್ಯಾತ ಎಂಜಿನಿಯರ್ ಆಗಿ ಸೇವೆ ಸಲ್ಲಿಸುತ್ತಾ ವಿಲನೋವಾ ವಿಶ್ವವಿದ್ಯಾನಿಲಯದಲ್ಲಿ ಪ್ರಾಧ್ಯಾಪಕರಾಗಿ ಕೆಲಸ ಮಾಡುತ್ತ ಕನ್ನಡಿಗರ ಸಂಘಟನೆಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡು ಪ್ರಮುಖ ವ್ಯಕ್ತಿ ಆಗಿದ್ದರು. ರಾಜಗೋಪಾಲ್ ಮತ್ತು ವಿಮಲಾ ಅವರು ಮೊದಲ ತಲೆಮಾರಿನ ಕನ್ನಡಿಗ ಸ್ನೇಹಿತರ ಜೊತೆ ಸೇರಿ ಕನ್ನಡ ಭಾಷೆ, ಸಾಹಿತ್ಯ, ಮತ್ತು ಸಂಸ್ಕೃತಿಗಳನ್ನು ಉಳಿಸಿ ಬೆಳೆಸುವುದರ ಸಲುವಾಗಿ ಕನ್ನಡ ಸಂಘಗಳನ್ನು ಕಟ್ಟಿ, ಸಮ್ಮೇಳನಗಳನ್ನು ಏರ್ಪಡಿಸುವುದರಲ್ಲಿ ಪ್ರಮುಖ ಪಾತ್ರ ವಹಿಸಿದ್ದಾರೆ. ಇಂತಹ ಹಿರಿಯರು ಅಮೇರಿಕಾದಲ್ಲಿ ಕಷ್ಟಪಟ್ಟಿದ್ದರಿಂದ ಎರಡನೆಯ ಮತ್ತು ಮೂರನೆಯ ತಲೆಮಾರಿನ ಕನ್ನಡಿಗರು ನೆಮ್ಮದಿಯಾಗಿ ಜೀವನ ಮಾಡಲು ಸಾಧ್ಯವಾಗಿದೆ.

ಡಾ. ರಾಜಗೋಪಾಲ್ ಮತ್ತು ವಿಮಲಾ ರಾಜಗೋಪಾಲ್ ಹಾಗು ಡಾ. ವಾಸಂತಿ ಮತ್ತು ಡಾ. ಬಾಬ್ ಕಲೆಟನ್ ಅವರುಗಳು ಕ್ರಮವಾಗಿ ಪೆನ್ಸಿಲ್ವೇನಿಯಾ ರಾಜ್ಯದ ಮೀಡಿಯಾ ಮತ್ತು ಸ್ವಾರ್ಥಮೋರ್ ಪಟ್ಟಣಗಳಲ್ಲಿ ವಾಸವಾಗಿದ್ದರು. ಅವರನ್ನು ನೋಡಲು ಅಶ್ವತ್ಥ ಮತ್ತು ಅಪರ್ಣಾ ನಮ್ಮನ್ನು ನ್ಯೂ ಜೆರ್ಸಿ ರಾಜಧಾನಿಯಾದ ಟ್ರೆಂಟನ್ ನ ಸರ್ಕಾರೀ ಇಲಾಖೆಯಲ್ಲಿ ಉನ್ನತ ಅಧಿಕಾರಿಯಾಗಿದ್ದ ಡಾ. ಬಾಬ್ ಕಲೆಟನ್ ಅವರ ಆಫೀಸಿನ ಬಳಿ ಕಾರಿನಲ್ಲಿ ನಮ್ಮನ್ನು ಬಿಟ್ಟರು. ಡಾ. ಕಲೆಟನ್ ಅವರು ನಮ್ಮನ್ನು ತಮ್ಮ ಮನೆಗೆ ಕರೆದುಕೊಂಡು ಹೋದರು. ಡಾ. ವಾಸಂತಿ ಮತ್ತು ಕಲೆಟನ್ ನಮ್ಮನ್ನು ಪ್ರೀತಿ ವಿಶ್ವಾಸಗಳಿಂದ ಆದರಿಸಿದರು. ಎರಡು ದಿನ ನಾವು ಅವರ ಅತಿಥಿಗಳಾಗಿದ್ದೆವು. ವಾಸಂತಿ ಅವರು ನಮಗೆ ಫಿಲಡೆಲ್ಫಿಯಾ ನಗರದ ಪ್ರೇಕ್ಷಣೀಯ ಸ್ಥಳಗಳನ್ನು ತೋರಿಸಿದರು.

ಡಾ. ರಾಜಗೋಪಾಲ್ ಮತ್ತು ವಿಮಲಾ ಅವರ ಮನೆಗೆ ವಾಸಂತಿ ಅವರೇ ನಮ್ಮನ್ನು ಕರೆದುಕೊಂಡು ಹೋದರು. ಆ ಮನೆ ತುಂಬಾ ಸುಂದರವಾದ ಪರಿಸರದಲ್ಲಿದೆ. ರಾಜಗೋಪಾಲ್ ಮತ್ತು ವಿಮಲಾ ಅವರು ನಮ್ಮನ್ನು ತುಂಬಾ ಪ್ರೀತಿ ವಿಶ್ವಾಸದಿಂದ ಆದರಿಸಿದರು. ವಿಮಲಾ ಅವರು ತಮ್ಮ ಚಿಕ್ಕಪ್ಪ ಮತಿಘಟ್ಟ ಕೃಷ್ಣಮೂರ್ತಿಯವರು ತಮಗೆ ಎಷ್ಟು ಪ್ರೀತಿಯಿಂದ ಹಲವಾರು ಜಾನಪದ ಗೀತೆಗಳನ್ನು ಹೇಳಿಕೊಟ್ಟರು ಎಂಬುದನ್ನು ಹೇಳಿಕೊಂಡರು. ಅವರು ಮತ್ತು ನಾಗಲಕ್ಷ್ಮಿ ಚಿಕ್ಕಂದಿನ ಅನುಭವಗಳನ್ನು ನೆನಪು ಮಾಡಿಕೊಂಡರು. ನಾನು ರಾಜಗೋಪಾಲ್ ಅವರೊಡನೆ ಸಾಕಷ್ಟು ಮಾತನಾಡಿದೆ. ಅವರೊಡನೆ ಮಾತನಾಡುತ್ತ ಇದ್ದ ನನಗೆ ಅಮೇರಿಕಾದ ಕನ್ನಡಿಗರ ಸ್ಥಿತಿಗತಿಗಳ ಪರಿಚಯವಾಯಿತು. ಮಾತ್ರವಲ್ಲ, ಡಾ. ರಾಜಗೋಪಾಲ್ ಅವರು ಎಷ್ಟು



ಉನ್ನತ ವ್ಯಕ್ತಿತ್ವದವರು ಎಂದು ಮನವರಿಕೆಯಾಯಿತು. ಅವರು ಮಿತಭಾಷಿ, ಮೃದುಭಾಷಿ. ಸರಳರು, ಸೌಜನ್ಯಶೀಲರು. ತುಂಬಾ ತಾಳ್ಮೆಯುಳ್ಳವರು. ಹಮ್ಮು ಬಿಮ್ಮುಗಳಿಲ್ಲದೆ ಎಲ್ಲರನ್ನು ಪ್ರೀತಿಯಿಂದ ನಡೆಸಿಕೊಳ್ಳುವ ವ್ಯಕ್ತಿತ್ವ. ನಾವೆಲ್ಲ ಒಳಗೆ ಮಾತನಾಡುತ್ತ ಇದ್ದಾಗ ರಾಜಗೋಪಾಲ್ ಅವರು ನನ್ನ ಎರಡನೇ ಮೊಮ್ಮಗಳು ಅನಿಕಾಳ ಜೊತೆಗೆ ಆಟವಾಡುತ್ತ ಮುದ್ದು ಮಾಡುತ್ತಿದ್ದರು ಎಂದು ಅಪರ್ಣಾ ಜ್ಞಾಪಿಸಿಕೊಳ್ಳುತ್ತಾಳೆ. ಅವರದು ಅಷ್ಟು ಸರಳವಾದ ವ್ಯಕ್ತಿತ್ವ. ಅವರು ವಿದ್ಯಾವಿನಯ ಸಂಪನ್ನರು.

ರಾಜಗೋಪಾಲ್ ಅವರ ತಂದೆ ಯೋಗಾನರಸಿಂಹ ಅವರು ಸಂಸ್ಕೃತ ಪ್ರಾಧ್ಯಾಪಕರು. ಸಂಗೀತದಲ್ಲಿ ವಿಶೇಷ ಸಾಧನೆ ಮಾಡಿದವರು. ತಾಯಿ ಶ್ರೀಮತಿ ಸರಸ್ವತಮ್ಮನವರು ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಮೈಸೂರು ಮಕ್ಕಳ ಕೂಟವನ್ನು ಕಟ್ಟಿ ಬೆಳೆಸಿದವರು. ರಾಜಗೋಪಾಲ್ ಅವರ ಅಣ್ಣ ಶ್ರೀ ಎಚ್. ವೈ. ಶಾರದಾ ಪ್ರಸಾದ್ ಅವರು ಶ್ರೀಮತಿ ಇಂದಿರಾ ಗಾಂಧಿ ಅವರ ಪ್ರೆಸ್ ಸೆಕ್ರೆಟರಿ ಆಗಿದ್ದವರು. ನಾನು ೧೯೯೭ ರಲ್ಲಿ ದೆಹಲಿಯಲ್ಲಿ ಇಂದಿರಾ ಗಾಂಧಿ ಸಾಂಸ್ಕೃತಿಕ ಕೇಂದ್ರದಲ್ಲಿ ನಡೆಸಿದ ಒಂದು ಅಂತಾರಾಷ್ಟ್ರೀಯ ಕಮ್ಮಟದಲ್ಲಿ ಅವರನ್ನು ಭೇಟಿಯಾಗಿದ್ದೆ. ಅವರ ಇತರ ಸಹೋದರರು ಕೂಡ ಉನ್ನತ ಹುದ್ದೆಗಳಲ್ಲಿದ್ದವರು.

ರಾಜಗೋಪಾಲ್ ಅವರು ತಮ್ಮ ತಾಯಿಯವರನ್ನು ಕುರಿತು ಬರೆದಿರುವ ಕೃತಿ ಹಲವು ಮಕ್ಕಳ ತಾಯಿ ಒಂದು ಅಪೂರ್ವ ಗ್ರಂಥ. ಕರ್ನಾಟಕ ಪುಸ್ತಕ ಪ್ರಾಧಿಕಾರದ ಪ್ರಶಸ್ತಿಯನ್ನು ಪಡೆದ ಕೃತಿ. ರಾಜಗೋಪಾಲ್ ಅವರು ಸ್ವತಃ ಲೇಖಕರು ಹೌದು. ಹಲವಾರು ಲೇಖನಗಳನ್ನು ಬರೆದಿದ್ದಾರೆ. ಎಚ್. ಕೆ. ನಂಜುಂಡಸ್ವಾಮಿ ಅವರೊಡನೆ "ನಗೆಗನ್ನಡಂ ಗೆಲ್ಗೆ" ಎಂಬ ಮೌಲಿಕವಾದ ಗ್ರಂಥವನ್ನು ಸಂಪಾದಿಸಿದ್ದಾರೆ. ರಾಜಗೋಪಾಲ್ ಅವರ ಸಾಧನೆಗಳು ಹಲವಾರು. ಅವರು ವಿಮಲಾ ಅವರ ಜೊತೆ ಸೇರಿ ಇಂಡೋ – ಯು ಎಸ್ ಚಿಲ್ಡ್ರನ್ಸ್ ಅಸೋಸಿಯೇಷನ್ (ಇಂಡಸ್) ಎಂಬ ಸಂಸ್ಥೆಯನ್ನು ಸ್ಥಾಪಿಸಿ ಅದರ ಮೂಲಕ ಅಮೆರಿಕದಲ್ಲಿರುವ ಕನ್ನಡಿಗರ ಮಕ್ಕಳಿಗೆ ಭಾಷೆ, ಸಾಹಿತ್ಯ ಮತ್ತು ಸಂಸ್ಕೃತಿಯನ್ನು ತಿಳಿಸುವ ಒಳ್ಳೆಯ ಸಂಸ್ಕಾರ ಕೊಡುವ ಮಹತ್ವದ ಕೆಲಸವನ್ನು ಮಾಡಿದ್ದಾರೆ. ರಾಜಗೋಪಾಲ್ ಅವರು ಬೇರು ಸೂರು ಎಂಬ ಗ್ರಂಥದಲ್ಲಿ 'ಹೊಸ ನೆಲದಲ್ಲಿ ಹೊಸ ಸಸಿಗಳು' ಎಂಬ ಲೇಖನವನ್ನು, ವಿಮಲಾ ಅವರು 'ಸಂಗೀತ ಮತ್ತು ಸಾಂತ್ವನ' ಎಂಬ ಲೇಖನವನ್ನು ಬರೆದಿದ್ದಾರೆ. ಈ ಲೇಖನಗಳನ್ನು ಓದಿದರೆ ಅವರಿಬ್ಬರೂ ಅಮೆರಿಕದಲ್ಲಿರುವ ಕನ್ನಡಿಗರ ಮಕ್ಕಳಿಗಾಗಿ ಎಷ್ಟೆಲ್ಲಾ ಕಷ್ಟಪಟ್ಟಿದ್ದಾರೆ ಎಂಬುದು ತಿಳಿಯುತ್ತದೆ. ರಾಜಗೋಪಾಲ್ ಅವರು ಅಮೆರಿಕದ ರೆಡ್ ಇಂಡಿಯನ್ ಬುಡಕಟ್ಟುಗಳ ಸಂಸ್ಕೃತಿಯನ್ನು ಪರಿಚಯ ಮಾಡಿಕೊಡುವ ಒಂದು ಗ್ರಂಥವನ್ನು ಬರೆದಿದ್ದಾರೆ. ನಮ್ಮ ಕರ್ನಾಟಕದ ವಿಶ್ವವಿದ್ಯಾನಿಲಯಗಳಲ್ಲಿಯೇ

ಈ ಬಗೆಯ ಒಂದು ಕೃತಿ ಪ್ರಕಟವಾಗಿಲ್ಲ. ಈ ಪುಸ್ತಕದಿಂದ ರಾಜಗೋಪಾಲ್ ಅವರಿಗೆ ರೆಡ್ ಇಂಡಿಯನ್ ಬುಡಕಟ್ಟುಗಳ ಸಂಸ್ಕೃತಿಯ ಬಗ್ಗೆ ಗೌರವವಿದೆ ಎಂದು ತಿಳಿದುಬರುತ್ತದೆ.

ಅಮೇರಿಕಾದಲ್ಲಿ ವಿವಿಧ ರಾಜ್ಯಗಳಲ್ಲಿ ಅನೇಕ ಕನ್ನಡ ಸಂಘಗಳಿವೆ. ಈ ಕನ್ನಡ ಸಂಘಗಳನ್ನೆಲ್ಲ ಒಟ್ಟಿಗೆ ಸೇರಿಸುವ ಅಮೇರಿಕ ದೇಶ ವ್ಯಾಪ್ತಿಯ "ಅಕ್ಕ" ಮತ್ತು "ನಾವಿಕ" ಎಂಬ ಸಂಘಟನೆಗಳಿವೆ. ಇವುಗಳು ಕನ್ನಡಿಗರನ್ನು ಒಟ್ಟಿಗೆ ಸೇರಿಸುವ ಸಂಗೀತ, ನೃತ್ಯ, ನಾಟಕ, ಹಬ್ಬಗಳು ಮೊದಲದವನ್ನೆಲ್ಲ ಒಳಗೊಂಡಿರುವ ಸಾಂಸ್ಕೃತಿಕ ಸಂಸ್ಥೆಗಳು. ಇಲ್ಲಿ ಗಂಭೀರವಾದ ಸಾಹಿತ್ಯ ರಚನೆಗೆ ಪ್ರೋತ್ಸಾಹ ಕೊಡಲು ಸಾಧ್ಯವಾಗುತ್ತಿರಲಿಲ್ಲ. ಈ ಕೊರತೆಯನ್ನು ಗಮನಿಸಿ ರಾಜಗೋಪಾಲ್ ಅವರು ನೇತೃತ್ವ ವಹಿಸಿ ಡಾ. ನಾಗ ಐತಾಳರು, ಡಾ. ಎಚ್. ಕೆ. ಚಂದ್ರಶೇಖರ, ಡಾ. ಮೈ. ಶ್ರೀ. ನಟರಾಜ್, ಶ್ರೀ ಶ್ರೀಕಾಂತ ಬಾಬು, ಶ್ರೀ ಗುಂಡು ಶಂಕರ, ಡಾ. ರಂಗಾಚಾರ್ ಮೊದಲಾದವರ ನೆರವಿನಿಂದ ೨೦೦೩ರಲ್ಲಿ ಕನ್ನಡ ಸಾಹಿತ್ಯ ರಂಗ ಎಂಬ ನೋಂದಾಯಿತ ಸಂಸ್ಥೆಯನ್ನು ಸ್ಥಾಪಿಸಿದರು. ಇದು ಅಮೆರಿಕದಲ್ಲೇ ಕನ್ನಡ ಸಾಹಿತ್ಯಕ್ಕೆ ಮೀಸಲಾದ ಒಂದು ಸಂಘಟನೆ. ಈ ಸಂಸ್ಥೆ ಎರಡು ವರ್ಷಕ್ಕೊಂದು ಸಲ ಒಂದು ಸಮ್ಮೇಳನವನ್ನು ಏರ್ಪಡಿಸುತ್ತದೆ. ಅದರಲ್ಲಿ ಒಂದು ನಿರ್ದಿಷ್ಟವಾದ ವಿಷಯದ ಬಗ್ಗೆ ಪ್ರಬಂಧಗಳನ್ನು ಮಂಡಿಸಲಾಗುತ್ತದೆ. ಮುಂದಿನ ಸಮ್ಮೇಳನದಲ್ಲಿ ಈ ಪ್ರಬಂಧಗಳನ್ನು ಗ್ರಂಥ ರೂಪದಲ್ಲಿ ಪ್ರಕಟ ಮಾಡುತ್ತಾರೆ. ಈವರೆಗೆ ಈ ಬಗೆಯ ಹತ್ತು ವಿದ್ವತ್ ಪೂರ್ಣವಾದ ವಿಮರ್ಶಾತ್ಮಕವಾದ ಮೌಲಿಕ ಗ್ರಂಥಗಳು ಪ್ರಕಟವಾಗಿವೆ. ಇವುಗಳು ವಿಶ್ವವಿದ್ಯಾನಿಲಯಗಳಲ್ಲಿ ಸ್ನಾತಕ್ಕೋತ್ತರ ವಿದ್ಯಾರ್ಥಿಗಳಿಗೆ ಒಳ್ಳೆಯ ಆಕರ ಗ್ರಂಥಗಳಾಗಿವೆ. ವಿಶ್ವವಿದ್ಯಾನಿಲಯಗಳ ಕನ್ನಡ ವಿಭಾಗಗಳು ಮಾಡಬೇಕಾದ ಕೆಲಸಗಳನ್ನು ಇಷ್ಟು ದೂರದ ಅಮೇರಿಕಾದಲ್ಲಿ ಕನ್ನಡ ಸಾಹಿತ್ಯ ರಂಗ ಮಾಡುತ್ತಿರುವುದು ಶ್ಲಾಘನೀಯವಾದ ವಿಷಯವಾಗಿದೆ.

ಈ ಸಂಸ್ಥೆ ಅಮೇರಿಕಾದಲ್ಲಿ ವಾಸವಾಗಿದ್ದ ಇಂಗ್ಲಿಷ್ ಪ್ರಾಧ್ಯಾಪಕರು ಮತ್ತು ಕನ್ನಡ ಸಾಹಿತಿಗಳಾದ ಪಿ. ಶ್ರೀನಿವಾಸರಾವ್ ಅವರ ಹೆಸರಿನಲ್ಲಿ ಉಪನ್ಯಾಸ ಕಾರ್ಯಕ್ರಮಗಳನ್ನೂ ಏರ್ಪಡಿಸುವುದು. ಅಮೆರಿಕಕ್ಕೆ ಬಂದ ಪ್ರಮುಖ ಸಾಹಿತಿಗಳು ಮತ್ತು ವಿದ್ವಾಂಸರು ಇಲ್ಲಿ ಉಪನ್ಯಾಸಗಳನ್ನು ಮಾಡಿದ್ದಾರೆ. ನನ್ನನ್ನೂ ಕೂಡ ಉಪನ್ಯಾಸ ಮಾಡಲು ಆಹ್ವಾನಿಸಿದ್ದರು. ಇದಕ್ಕೆ ಕಾರಣರಾದವರು ಶ್ರೀಕಾಂತ ಬಾಬು ಮತ್ತು ಭಾನು, ಶ್ರೀಮತಿ ಶೈಲಜಾ ಮತ್ತು ಗುಂಡು ಶಂಕರ್ ಅವರು. ಶ್ರೀಕಾಂತ ಬಾಬು ಮತ್ತು ಭಾನು ನಮ್ಮ ಬೀಗರ ಬಂಧುಗಳು. ಶ್ರೀಮತಿ ಶೈಲಜಾ ನನ್ನ ಪತ್ನಿಯ ಆತ್ಮೀಯ ಸ್ನೇಹಿತೆ. ಗುಂಡು ಶಂಕರ್ ನನಗೆ ಆಪ್ತರಾದರು. ಇವರುಗಳು ರಾಜಗೋಪಾಲ್ ಮತ್ತು ವಿಮಲಾ ಅವರಿಗೂ ಆಪ್ತರು. ಗುಂಡು ಶಂಕರ್ ಅವರ ಮನೆಯಲ್ಲಿ ಉಪನ್ಯಾಸ



ಕಾರ್ಯಕ್ರಮ ನಡೆಯಿತು. ನಾನು ಈ ಸಂಸ್ಥೆ ಪ್ರಕಟಿಸಿರುವ ಅಮೇರಿಕಾದ ಅನಿವಾಸಿ ಕನ್ನಡಿಗರ ಅನುಭವಗಳನ್ನು ಒಳಗೊಂಡ ೩೮ ಲೇಖನಗಳ ಬೇರು ಸೂರು ಎಂಬ ಕೃತಿಯನ್ನು ಕುರಿತು ಮಾತನಾಡಿದೆ. ಅಮೇರಿಕಾದ ಕನ್ನಡಿಗರ ಜೀವನವನ್ನು, ಅವರು ಅವರ ಬೇರುಗಳು ಕರ್ನಾಟಕದಲ್ಲಿದ್ದರೂ ಅಮೇರಿಕಾದಲ್ಲಿ ತಮ್ಮ ಸೂರುಗಳನ್ನು ಅಂದರೆ ಜೀವನವನ್ನು ಕಟ್ಟಿಕೊಳ್ಳಲು ಹೇಗೆ ಪ್ರಯತ್ನ ಮಾಡಿದರು, ಅವರು ಅನುಭವಿಸಿದ ಕಷ್ಟ ನಷ್ಟಗಳೇನು, ಎದುರಿಸಬೇಕಾಗಿ ಬಂದ ಸವಾಲುಗಳೇನು, ಅವರು ಅದನ್ನು ಪರಿಹರಿಸಿಕೊಂಡು ಹೇಗೆ ಯಶಸ್ವಿಯಾದರು ಎಂಬುದನ್ನು ತಿಳಿದುಕೊಳ್ಳಲು ನನಗೆ ಸಾಧ್ಯವಾಯಿತು. ಅಮೇರಿಕಾದ ಬಗ್ಗೆ ಅನೇಕರು ಪ್ರವಾಸ ಕಥನವನ್ನು ಬರೆದಿದ್ದಾರೆ. ಅದರಲ್ಲಿ ಅಮೇರಿಕಾದ ಕನ್ನಡಿಗರ ಜೀವನದ ಮೇಲ್ಪದರ ಮಾತ್ರ ಕಾಣುತ್ತದೆ. ಆದರೆ ಆ ಜನಜೀವನದ ಒಳನೋಟ ಸಿಗುವುದು ಈ ಕೃತಿಯಲ್ಲಿ ಮಾತ್ರ. ಈ ದೃಷ್ಟಿಯಿಂದ ಇದು ಅತ್ಯಂತ ಮೌಲಿಕವಾದ ಕೃತಿಯಾಗಿದೆ ಎಂದು ನಾನು ಹೇಳಿದೆ. ಈ ಸಮಾರಂಭದಲ್ಲಿ ನಾಗಲಕ್ಷ್ಮಿ, ವಿಮಲಾ, ವಾಸಂತಿ, ಶೈಲಜಾ, ಅಪರ್ಣಾ ಮೊದಲಾದವರು ಸುಶ್ರಾವ್ಯವಾಗಿ ಜಾನಪದ ಗೀತೆಗಳನ್ನು ಹಾಡಿದರು.

ನಾವು ಮೂರನೆಯ ಬಾರಿ ರಾಜಗೋಪಾಲ್ ದಂಪತಿಗಳನ್ನು ಭೇಟಿ ಮಾಡಿದ್ದು ರಾಜಗೋಪಾಲ್ ಅವರ ಎಂಬತ್ತನೆಯ ಹುಟ್ಟು ಹಬ್ಬದ ಸಂದರ್ಭದಲ್ಲಿ. ಈ ಕಾರ್ಯಕ್ರಮ ಸ್ವಾರ್ಥಮೋರ್ ಕಾಲೇಜಿನ ಸುಂದರವಾದ ಮತ್ತು ಪ್ರಶಾಂತವಾದ ಕ್ಯಾಮ್ಪಸಿನ ಸಮುದಾಯ ಭವನದಲ್ಲಿ ನಡೆಯಿತು. ಸುಮಾರು ೭೦ ಜನ ಬಂಧುಮಿತ್ರರು ಸೇರಿದ್ದರು. ಈ ಸಮಾರಂಭದಲ್ಲಿ ಡಾ. ರಂಗಾಚಾರ್ ಮತ್ತು ಶ್ರೀಮತಿ ಪದ್ಮಾ, ಡಾ. ಚಂದ್ರಶೇಖರ್ ಮತ್ತು ಶ್ರೀದೇವಿ, ಡಾ. ಗೋಪಾಲ್ ಕುಕ್ಕೆ ಮತ್ತು ನಳಿನಿ ಕುಕ್ಕೆ ಮೊದಲಾದ ಹಿರಿಯ ಕನ್ನಡಿಗರು ಭಾಗವಹಿಸಿದ್ದರು. ರಾಜಗೋಪಾಲ್ ಅವರ ಮಗ ಶ್ರೀರಾಮ್ ಮತ್ತು ಅವರ ಪತ್ನಿ ನಿಧಿ ಗುಪ್ತ, ಮೊದಲ ಮಗಳು ಮಾಧವಿ ಮತ್ತು ಅವರ ಪತಿ ರಿಜಿಯೋ, ಇನ್ನೊಬ್ಬ ಮಗಳು ಚೇತನಾ ಎನ್. ಜೋಯಿಸ್, ಮೊಮ್ಮಕ್ಕಳು ಅರ್ಜುನ್ ಮತ್ತು ನಿಕೊಲಸ್ ರಿಜಿಯೋ, ಡಾ. ವಾಸಂತಿ, ಡಾ. ಬಾಬ್ ಕಲೆಟನ್ ಹಾಗೂ ಕಲೆಟನ್ ಅವರ ಅಣ್ಣ ತಮ್ಮಂದಿರ ಕುಟುಂಬ ವರ್ಗದವರು ಭಾಗವಹಿಸಿದ್ದರು. ನಮ್ಮ ಅಳಿಯ, ಮಗಳು, ಮತ್ತು ಮೊಮ್ಮಕಳು ಸಹ ಭಾಗವಹಿಸಿದ್ದರು. ಈ ಸಮಾರಂಭದಲ್ಲಿ ನನಗೂ ಮಾತನಾಡಲು ಅವಕಾಶವಿತ್ತು. ನಾನು ಮತ್ತು ನಾಗಲಕ್ಷ್ಮಿ ರಾಜಗೋಪಾಲ್ ಅವರಿಗೆ ಶಾಲು ಹೊದಿಸಿ ಸನ್ಮಾನ ಮಾಡಿ ಅವರ ಆಶೀರ್ವಾದ ಪಡೆದೆವು. ಆ ಸಂದರ್ಭದಲ್ಲಿ ಅವರಿಗೆ ಆರತಿ ಎತ್ತಿ ಹಾಡುಗಳನ್ನು ನಾಗಲಕ್ಷ್ಮಿ ಹಾಡಿದ್ದಳು ಎಂದು ವಿಮಲಾ ಅವರು ನೆನಪಿಸಿಕೊಳ್ಳುತ್ತಾರೆ. ನಮ್ಮ ಪಾಲಿಗೆ ಇದೊಂದು ಅವಿಸ್ಮರಣೀಯ ಸಮಾರಂಭ.

ರಾಜಗೋಪಾಲ್ ಮತ್ತು ವಿಮಲಾ ಅವರು ಅಮೇರಿಕಾದ ಕನ್ನಡಿಗರಾಗಿ ಅಲ್ಲಿನ

ಸಾಹಿತ್ಯಕ ಸಾಂಸ್ಕೃತಿಕ ಕ್ಷೇತ್ರದಲ್ಲಿ ಮೌಲಿಕವಾದ ಕೆಲಸ ಮಾಡಿದ್ದಾರೆ. ಅನಿವಾಸಿ ಕನ್ನಡಿಗರಾಗಿ ಅವರ ಸಾಧನೆಗಳನ್ನು ಗುರುತಿಸಿ ಕರ್ನಾಟಕ ಸರ್ಕಾರ ಅವರಿಗೆ ರಾಜ್ಯೋತ್ಸವ ಪ್ರಶಸ್ತಿ ನೀಡಿದೆ. ಅಲ್ಲದೆ ಆಳ್ವಾಸ್ ನುಡಿಸಿರಿ ಪ್ರಶಸ್ತಿಯನ್ನೂ ಅವರು ಗಳಿಸಿರುವುದು ಸಂತೋಷದ ಸಂಗತಿ. ಧೀಮಂತರಾದ ರಾಜಗೋಪಾಲ್ ಅವರು ಇನ್ನಷ್ಟು ವರ್ಷಗಳು ಬದುಕಿದ್ದರೆ ಅವರಿಂದ ಇನ್ನೂ ಬಹಳ ಕೆಲಸಗಳಾಗುತ್ತಿದ್ದವು ಎಂದು ನನಗೆ ಅನಿಸುತ್ತದೆ. ಅವರು ನಿಧನರಾದದ್ದು ದುಃಖದ ಸಂಗತಿ.

ರಾಜಗೋಪಾಲ್ ಅವರು ನಿಧನರಾದ ಒಂದು ವರ್ಷಕ್ಕೆ ಪ್ರಕಟವಾಗುತ್ತಿರುವ ಈ ನೆನಪಿನ ಗ್ರಂಥದ ಸಂಪಾದಕರಾದ ಡಾ. ಮೈ. ಶ್ರೀ. ನಟರಾಜ್, ಶ್ರೀಮತಿ ವಿಮಲಾ, ಈ ಪುಸ್ತಕವನ್ನು ಪ್ರಕಟಿಸುತ್ತಿರುವ ಅಭಿನವ ಪ್ರಕಾಶನದ ಶ್ರೀ ರವಿಕುಮಾರ್ ಅವರಿಗೆ, ಈ ಲೇಖನ ಬರೆಯಲು ನೆರವು ನೀಡಿದ ಅಶ್ವತ್ಥ ಮತ್ತು ಅಪರ್ಣಾ ಅವರಿಗೆ, ನನ್ನ ಧನ್ಯವಾದಗಳು.



# ನಿನ್ನೊಲುಮೆಯಿಂದಲೇ ಬಾಳು ಬೆಳಕಾಗಿಹುದು!

–ವಿಮಲ ರಾಜಗೋಪಾಲ್

ಕನ್ನಡ ಸಾಹಿತ್ಯ ಬಲ್ಲವರೆಲ್ಲರಿಗೂ ಸುಪರಿಚಿತರು ಶ್ರೀ ನವರತ್ನ ರಾಮರಾಯರು. ಮಾಸ್ತಿಯವರ ಪರಮಾಪ್ತ ಗೆಳೆಯರು. ಮಾಸ್ತಿಯವರ ಸುಪ್ರಸಿದ್ಧ 'ಸುಬ್ಬಣ್ಣ' ಕಾದಂಬರಿಗೆ ಕಥಾವಸ್ತು ಒದಗಿಸಿದವರೇ ಶ್ರೀ ನವರತ್ನ ರಾಮರಾಯರು. ಅವರ ಮಗಳು ಎನ್. ಆರ್. ರಮಾದೇವಿ ನನ್ನ ಬಾಲ್ಯದಿನಗಳ ಅಚ್ಚುಮೆಚ್ಚಿನ ಗೆಳತಿ. ನಾನು ಆಗತಾನೇ ಹೈಸ್ಕೂಲು ಮುಗಿಸಿ, ೧೪ನೆಯ ವಯಸ್ಸಿನಲ್ಲಿ ಕಾಲೇಜು ಮೆಟ್ಟಿಲು ಹತ್ತಿದ್ದೆ. ಆಗ ರಾಜಾಜಿಯವರು ರಮಾದೇವಿ ಮನೇಲಿ ಅತಿಥಿಯಾಗಿ ಬಂದು ಇಳಿದುಕೊಂಡಿದ್ದ ಸಮಾಚಾರ ನನ್ನ ಕಿವಿಗೆ ಬಿತ್ತು. ಆ ಸುದ್ದಿ ತಿಳಿದೊಡನೆ ಹದಿಹರೆಯದ ನನ್ನ ಬಾಲಿಶ ಮನಸ್ಸಿನಲ್ಲಿ ಮಹದಭಿಲಾಷೆಯೊಂದು ಮೂಡಿತು. ನಾನಾಗ ತಾನೆ ಹುಟ್ಟು ಹಾಕಿ ಪ್ರಾರಂಭಿಸಬೇಕೆಂದಿದ್ದ (ಆಚಾರ್ಯ ಪಾಠಶಾಲೆಯ) Old Girls Associationನ ಪ್ರಾರಂಭೋತ್ಸವದ ಅಧ್ಯಕ್ಷತೆ ವಹಿಸಲು ರಾಜಾಜಿಯವರನ್ನು ಕರೆಯಬೇಕೆಂಬ ಮಹದಾಸೆಯಿಂದ ರಾತ್ರಿಯೆಲ್ಲ ನಿದ್ದೆಯೇ ಬಂದಿರಲಿಲ್ಲ.

ಬೆಳಗ್ಗೆ ಎದ್ದೊಡನೆ ನಮ್ಮ ಸ್ಕೂಲ್ ಪ್ರಿನ್ಸಿಪಾಲರ ಮನೆಗೋಡಿದೆ. ಆತ ಮನೆಯಲ್ಲಿರಲಿಲ್ಲ. ಅವರ ಪಕ್ಕದ ಮನೆಯಲ್ಲಿದ್ದ School Board Member ಶ್ರೀ ಕೃಷ್ಣಮೂರ್ತಿರಾಯರ ಅನುಮತಿ ಪಡೆದು ಅವರ ಮಗಳೊಡನೆ ರಾಜಾಜಿಯವರನ್ನು

ನೋಡಲು ಓಡಿಹೋದೆ. ಬಾಗಿಲಲ್ಲಿ ರಮಾದೇವಿಯ ಅಕ್ಕ, ಮಹಾದೇವಿ ಕೈ ಮಗುವನ್ನೆತ್ತಿಕೊಂಡು ನಿಂತಿದ್ದಳು. 'ರಮಾದೇವಿ ಒಳಗಿದ್ದಾಳೆ, ಹೋಗು' ಎಂದಳು. ಒಳಗೆ ಹೋದ ನನ್ನನ್ನು ರಮಾದೇವಿಯ ತಾಯಿ ಪ್ರೀತಿಯಿಂದ ಆದರಿಸಿ ಕೂರಿಸಿ ಟೀ ಕೈಗಿತ್ತರು. ಟೀ ಕುಡಿದು ಅಭ್ಯಾಸವಿಲ್ಲದ ನಾನು ಇನ್ನೇನು ಬೇಡ ಅನ್ನಬೇಕು ಅಷ್ಟರಲ್ಲಿ ನನ್ನ ಸುತ್ತಲಿದ್ದ ಗಂಭೀರ ವಾತಾವರಣದಲ್ಲಿ, ರಾಜಾಜಿ ಮತ್ತು ನವರತ್ನ ರಾಮರಾಯರು stylish ಮತ್ತು fashionable ಆಗಿ ಟೀ ಕುಡಿಯುತ್ತ ಕುಳಿತಿರುವುದನ್ನು ಕಂಡು, ಟೀ ಕಪ್ ಕೈಲಿಟ್ಟುಕೊಂಡು ಗಂಭೀರವದನಳಾಗಿ ಕುಳಿತೆ. ರಮಾದೇವಿ, ಅವಳ ಅಣ್ಣ, ಮತ್ತಿತರ ಬಂಧುಗಳು ಭಯ-ಭಕ್ತಿಗಳಿಂದ ಚದುರಿ ನಿಂತಿದ್ದರು. ರಾಜಾಜಿ ಮತ್ತು ರಾಮರಾಯರು ಮದ್ರಾಸಿನಲ್ಲಿ ಅವರ ಕಾಲೇಜು ದಿನಗಳಿಂದ ಪರಮಾಪ್ತ ಸ್ನೇಹಿತರು. ಸಣ್ಣ ಕುಶಲೋಪರಿಯಾದ ನಂತರ ನವರತ್ನರಾಮರಾಯರು (ಸ್ವಲ್ಪ ನಾಟಕೀಯವಾಗಿ) ನನ್ನನ್ನು ರಾಜಾಜಿಯವರಿಗೆ ಪರಿಚಯಿಸಿದರು. 'ನೋಡಿ ರಾಜಾಜಿ, ಈ ಹುಡುಗಿ ನಮ್ಮ ಮಾನ್ಯ ಗೆಳೆಯರು ಶ್ರೀ ಎಲ್. ಗುಂಡಪ್ಪನವರ ಮಗಳು.' (ಆ ವೇಳೆಗೆ ಅಣ್ಣ ರಾಜಾಜಿಯವರ ಪ್ರಸಿದ್ಧ ತಮಿಳು ಕೃತಿ 'ವ್ಯಾಸರ್ ವಿರುಂದು'ವನ್ನು – ಅಂದರೆ, ವ್ಯಾಸರ ಮಹಾಭಾರತವನ್ನು – ಕನ್ನಡಕ್ಕೆ ಅನುವಾದಿಸಿದ್ದು ರಾಜಾಜಿಯವರ ಮೆಚ್ಚುಗೆಗೆ ಪಾತ್ರವಾಗಿತ್ತು. ಅಣ್ಣನ ತಮಿಳು ಭಾಷಾ ವಿದ್ವತ್ತಿನ ಬಗ್ಗೆ ರಾಜಾಜಿಯವರಿಗೆ ಅಪಾರ ಮರ್ಯಾದೆ. ಇವೆಲ್ಲ ನನಗಾಗ ಪೂರ್ತಿ ತಿಳಿದಿರಲಿಲ್ಲ).

ರಾಮರಾಯರು ರಾಜಾಜಿಯವರಿಗೆ ನನ್ನನ್ನು ಪರಿಚಯಿಸುತ್ತ, 'ನೋಡಿ, ಈ ಹುಡುಗಿ ನಿಮ್ಮನ್ನು ಅವಳ ಸ್ಕೂಲಿಗೆ ಆಹ್ವಾನಿಸಲು ಬಂದಿದ್ದಾಳೆ' ಎಂದರು. ರಾಜಾಜಿಯವರು ಮುಗುಳ್ನಕ್ಕು, ಸಹಜವಾಗಿ ಚಿಕ್ಕವರನ್ನು ಮಾತಾಡಿಸುವ ಅಕ್ಕರೆಯ ಶೈಲಿಯಲ್ಲಿ ನನ್ನೊಡನೆ ಸಂಭಾಷಣೆ ಪ್ರಾರಂಭಿಸಿದರು. 'ನೀನು ಈಗ ಏನು ಓದುತ್ತಿದ್ದೀಯ? ಮುಂದೆ ಏನು ಮಾಡಬೇಕೆಂದಿದ್ದೀಯ?' ಇತ್ಯಾದಿ ಮಾಮೂಲು ಪ್ರಶ್ನೆಗಳಿಂದ ಶುರುವಾದ ಮಾತುಗಳು ಅನಿರೀಕ್ಷಿತವಾಗಿ, ಇನ್ನಾವುದೋ ಸೀರಿಯಸ್ ವಿಚಾರಕ್ಕೆ ತಿರುಗಿಬಿಟ್ಟಿತು. ಅದೊಂದು ದೊಡ್ಡ ವಾಗ್ವಾದಕ್ಕೇ ಇಟ್ಟುಕೊಂಡಿತು. ಸ್ವತಂತ್ರ ಭಾರತದ ಮೊದಲ Governor General ಆಗಿದ್ದಂತಹ ಮಹಿಮಾನ್ವಿತ ವಾಗ್ಮಿ ರಾಜಾಜಿಯೊಡನೆ ನಡೆದ ನನ್ನ ವಾಗ್ವಾದದ ವಿಷಯ, ಆಗಿನ ಕಾಲದ ಹಿರಿಯರು ಮನೆಯಲ್ಲಿ ಸರ್ವೇ ಸಾಧಾರಣವಾಗಿ ಮಾತನಾಡಿಕೊಳ್ಳುತ್ತಿದ್ದುದೇ ಆಗಿತ್ತು. ಸಕಾಲದಲ್ಲಿ (ಅಂದರೆ ಚಿಕ್ಕ ವಯಸ್ಸಿನಲ್ಲಿ) ಮದುವೆಯಾಗದೆ ಹೋದರೆ ಹೆಣ್ಣು ಮಕ್ಕಳಿಗೆ ತಲೆ ಕೆಟ್ಟುಹೋಗುತ್ತದೆ ಎನ್ನುವುದೇ ಅವರ ವಾದದ ತಾತ್ಪರ್ಯವಾಗಿತ್ತು. 'ನೀನು ಏನು ಮಾಡಬೇಕೆಂದಿದ್ದೀಯ? ಅಂದರೆ, ಭವಿಷ್ಯದಲ್ಲಿ, ನಿನ್ನ ಜೀವನೋದ್ದೇಶ ಏನು?' ಎಂದೆಲ್ಲ, ಅವರ ಪ್ರಶ್ನೆ.

ನಾನಾವೇಳೆಗಾಗಲೇ ಆಕಾಶವಾಣಿಯಲ್ಲಿ ಭಾವಗೀತೆ ಮತ್ತು ಜಾನಪದ ಗೀತೆಗಳನ್ನು



ಹಾಡಿ ಒಳ್ಳೆಯ ಹೆಸರು ಗಳಿಸಿದ್ದೆ. ಜೊತೆಗೆ Central Collegeನಲ್ಲಿ ಇಂಗ್ಲಿಷ್ ಸಾಹಿತ್ಯಾಭ್ಯಾಸ ಮಾಡಬೇಕೆಂಬ ಆಸೆಯೂ ಇತ್ತು. ಆಗ Central Collegeನಲ್ಲಿ ಕನ್ನಡ ಅಧ್ಯಾಪಕರಾಗಿದ್ದ ಜಿ. ಪಿ. ರಾಜರತ್ನಂ, ವೀಸೀಯವರ ಮಾರ್ಗದರ್ಶನದಲ್ಲಿ ಕನ್ನಡ ಅಧ್ಯಯನ ಮುಂದುವರಿಸಬೇಕೆಂಬ ಆಸೆಯೂ ಸೇರಿತ್ತು. ಶಾಸ್ತ್ರೀಯ ಸಂಗೀತದಲ್ಲಿ ಪ್ರಾದೇಶಿಕ ಪರೀಕ್ಷೆಗಳನ್ನು ಪಾಸ್ ಮಾಡಿದ್ದ ನನ್ನ ಹಲವು ಸಂಗೀತಾತ್ಮಕ ಹವ್ಯಾಸಗಳ ಅರಿವಿದ್ದ ಶ್ರೀ ರಾಮರಾಯರು, ಸಂಕ್ಷೇಪವಾಗಿ ರಾಜಾಜಿಯವರಿಗೆ ಅವನ್ನೆಲ್ಲಾ ವಿವರಿಸಿ, ನಾನೇ ಅವನ್ನು ಹೇಳಿಕೊಳ್ಳಬೇಕಾದ ಸಂದಿಗ್ಧದಿಂದ ಪಾರುಮಾಡಿದರು. ಸಮಾಧಾನದ ನಿಟ್ಟುಸಿರು ಬಿಟ್ಟು ಸಂಗೀತ ಸಾಹಿತ್ಯದಲ್ಲಿ ನನಗಿರುವ goals ಅನ್ನು confident ಆಗಿ ರಾಜಾಜಿಯವರಿಗೆ ವಿವರಿಸಿದೆ. ನಮ್ಮಿಬ್ಬರ ಮಾತು ಇಂಗ್ಲೀಷಿನಲ್ಲೇ ನಡೆದಿತ್ತು. 'I think you have a very unusual goal for a young lady. What about marriage?' ಅಂತ ಅವರು ಕೇಳಿದರು. ಅದು ನನಗೆ ವಿಚಿತ್ರವಾಗಿ ಕೇಳಿಸಿತು. 'that is not in the horizon' ಅಂತ ಅಂದು, ಹೆಚ್ಚಿನ ವಿದ್ಯಾಭ್ಯಾಸ ಹೆಣ್ಣು ಮಕ್ಕಳ ಮದುವೆಗೆ ಅಡ್ಡಿ ಬರುತ್ತೆ ಇತ್ಯಾದಿ ರಾಜಾಜಿ ಅಂದದ್ದನ್ನೂ, ಅದಕ್ಕೆ ಸಂಬಂಧಿಸಿದ ಅವರ ಇತರ ವಾದಗಳನ್ನೂ ನಾನು ವಿರೋಧಿಸಿ ತಳ್ಳಿ ಹಾಕಿಬಿಟ್ಟೆ. I explained to him the values of equal opportunities for education and career for women that my parents had ingrained in me.

ಈ ಮಧ್ಯೆ ಸುತ್ತಲ ವಾತಾವರಣ ಸ್ತಬ್ಧವಾಗಿತ್ತು. ಆದರೆ, ಮರುಕ್ಷಣದಲ್ಲಿ ಮಹದಾಶ್ಚರ್ಯ! ರಾಜಾಜಿಯವರು ಮುಗುಳ್ನಗುತ್ತಾ, 'ಈ ವಾರಾಂತ್ಯ ನಿಮ್ಮ ಸ್ಕೂಲ್ functionಗೆ ಬಂದು ಅಧ್ಯಕ್ಷತೆ ವಹಿಸಲು ಸಂತೋಷದಿಂದ ಒಪ್ಪಿದ್ದೇನೆ' ಅಂದರು. ಖುಷಿಯಿಂದ ಹೊರಡುವ ಮುನ್ನ ನನ್ನ ಪುಟ್ಟ ಆಟೋಗ್ರಾಫ್ ಬುಕ್ಕನ್ನು ಅವರ ಮುಂದೆ ಹಿಡಿದೆ. ಅವರು 'You have a rare father. I want you to realize and benefit by it' ಎಂದು ಬರೆದರು. ಆ ವಾರಾಂತ್ಯ ವಿಜೃಂಭಣೆಯಿಂದ colorful ಚಪ್ಪರದಡಿ ಆಚಾರ್ಯ ಪಾಠಶಾಲೆಯ ಅಂಗಳದಲ್ಲಿ ನಡೆದ old girls association ಪ್ರಾರಂಭೋತ್ಸವಕ್ಕೆ ರಾಜಾಜಿಯವರೂ, ನವರತ್ನ ರಾಮರಾಯರೂ ಬಂದಿದ್ದರು.

ಈಚೆಗೆ ಅಕ್ಕ ಸುಮಿತ್ರ ಈ ವಿಚಾರವನ್ನು ನೆನಪಿಸಿಕೊಂಡು, ಹೇಳಿದ್ದು ನನ್ನನ್ನು ಆಶ್ಚರ್ಯಗೊಳಿಸಿತು: 'ಅಧ್ಯಕ್ಷತೆ ವಹಿಸಲು ರಾಜಾಜಿಯವರು ಒಪ್ಪಿಗೆ ಪಡೆದ ವಿಜಯೋತ್ಸಾಹದಲ್ಲಿ ಪ್ರಿನ್ಸಿಪಾಲ್ ಮನೆಗೆ ನೀ ಹೋಗಿ ಸುದ್ದಿ ತಿಳಿಸಿದಾಗ, ಅವರು, 'ವಾರಾಂತ್ಯದಲ್ಲಿ ಅಂದರೆ ಇನ್ನೆರಡೇ ದಿನಗಳಲ್ಲಿ ಅಷ್ಟು ಹಿರಿಯ ರಾಜಕಾರಣಿಯನ್ನು ಎದುರ್ಗೊಂಡು ಸಭೆ ಏರ್ಪಾಡು ಮಾಡುವುದು ಏನು ಹುಡುಗಾಟವೇ? ಸಾಧ್ಯವಿಲ್ಲ'

ಎಂದು ಆರ್ಭಟಿಸಿದಾಗ, ನೀನು ಅಳುತ್ತಾ ಮನೆಗೆ ಬಂದಿದ್ದೆ. ನಾ ಹೋಗಿ ಅವರನ್ನು ಸಮಾಧಾನಗೊಳಿಸಿ ವಾರಾಂತ್ಯದ ಶೀಘ್ರ ಸಿದ್ಧತೆಗೆ ಪ್ರಯಾಸಪಟ್ಟು ಒಪ್ಪಿಸಿದ್ದೆ. ಒಳ್ಳೆ ಹುಡುಗಿ. ನೀನದನ್ನು ಮರೆತೇಬಿಟ್ಟಿದ್ದೆಯಾ?' ಎಂದು ನಕ್ಕಳು.

## ಅಣ್ಣನೊಡನೆ ವಿಜಯವಾಡಕ್ಕೆ ಪ್ರಯಾಣ

ಸಮುದ್ರ ತೀರಕ್ಕೆ ಹತ್ತಿರವಿದ್ದ ಮದ್ರಾಸು ಆಕಾಶವಾಣಿ ನಿಲಯದ ಸುಂದರ ಭವನದಲ್ಲಿ 'All India Radio' ಡೆಲ್ಲಿಯ Director General ಮಾಥುರ್ ಮತ್ತು ಮದ್ರಾಸಿನ ಹೆಸರಾಂತ ಸಂಗೀತ ಶಾಸ್ತ್ರಜ್ಞರ ಮುಂದೆ ನಡೆದ ಸಂದರ್ಶನದಲ್ಲಿ ನಾನು ಗೆದ್ದು AIR ವಿಜಯವಾಡ ಕೇಂದ್ರಕ್ಕೆ Transmission Executive ಆಗಿ ನನ್ನನ್ನು ನೇಮಕ ಮಾಡಿದ್ದಾರೆ ಎಂಬ ಸುದ್ದಿ ತುಣುಕು ಪ್ರಜಾವಾಣಿ ಪತ್ರಿಕೆಯಲ್ಲಿ ಪ್ರಕಟವಾಗಿತ್ತು. Grand Trunk Expressನಲ್ಲಿ ನನಗೆ ಅತ್ಯಂತ ಪ್ರಿಯವಾಗಿದ್ದ ನನ್ನ ಬೆಂಗಳೂರನ್ನು ಬಿಡಲಾರದೆ ಬಿಟ್ಟು ವಿಜಯವಾಡಕ್ಕೆ ಅಣ್ಣನೊಡನೆ ಪ್ರಯಾಣ ಮಾಡುತ್ತಿದ್ದೆ. ರಾತ್ರಿಯಿಡೀ ನಿದ್ದೆಯಿರಲಿಲ್ಲ. ಕೃಷ್ಣಾ ನದಿಯ ಮೇಲೆ ಭಾರಿ ಸೇತುವೆ (ಕೃಷ್ಣಾ ಬರಾಜ್ ಎಂಬ ಹೆಸರು ಆಮೇಲೆ ಗೊತ್ತಾಯ್ತು) Train ಸದ್ದಿಲ್ಲದೆ ನಡುರಾತ್ರಿಯಲ್ಲಿ ನಡುಸೇತುವೆಯ ಮೇಲೆ ನಿಂತಿತ್ತು. ಕೆಳಗೆ ಎಲ್ಲೋ ಅಂತರಾಳದಲ್ಲೆಂಬಂತೆ – ಕೃಷ್ಣೆ ಹರಿಯುತ್ತಿದ್ದಳು. ಸಾಯಿಬಾಬ ಭಕ್ತವೃಂದ ನಮ್ಮೊಡನೆ ಅದೇ compartmentನಲ್ಲಿ ಕುಳಿತಿತ್ತು. ಅಣ್ಣ, ಆ ಸಾಯಿಬಾಬ ಸ್ವಾಮಿಗಳು ಮತ್ತು ಭಕ್ತರೊಡನೆ ಮೆಲುದನಿಯಲ್ಲಿ ಮಾತಾಡುತ್ತ ಕುಳಿತಿದ್ದರು. ಅಮ್ಮನನ್ನು ಬಹಳ ಕಾಲ ಎಂದೂ ಬಿಟ್ಟಿರದವಳು ಅಮ್ಮನನ್ನೂ, ಸುಮಿತ್ರ, ಕಮಲ, ಪುಟ್ಟ ಜ್ಯೋತಿ, ವಾಸಂತಿ, ವೀಣ, ಅಮೃತರನ್ನು ಬಿಟ್ಟು ದೂರದ ವಿಜಯವಾಡಕ್ಕೆ ಹೊರಟ ನಾನು ಎಳೆ ಮಗುವಿನಂತೆ ಕಂಗಾಲಾಗಿ ಕಣ್ಣೀರು ಸುರಿಸಿದ್ದೆ. ನೀರವವಾಗಿ ರೋದಿಸುತ್ತ ಕುಳಿತಿದ್ದ ನನ್ನನ್ನು ಅಣ್ಣ ತಲೆದಡವಿ ಸಮಾಧಾನ ಮಾಡಿದ್ದರು.

ಕೆಳಗೆ ಶಾಂತವಾಗಿ ಹರಿಯುತ್ತಿದ್ದ ಕೃಷ್ಣೆಯ ಅಸಂಖ್ಯಾತ ಬಂಡೆಗಳು ಬೆಳುದಿಂಗಳಲ್ಲಿ ಥಳಥಳಿಸುತ್ತಿದ್ದವು. ದೂರದಲ್ಲೆಲ್ಲೋ ಕಾಡುಗೊಲ್ಲನೊಬ್ಬ ಮಧುರ ರಾಗವೊಂದನ್ನು ಪಿಳ್ಳಂಗೋವಿಯೊಂದರಲ್ಲಿ ಆರೋಹಣ ಅವರೋಹಣದಲ್ಲಿ ಮೂರೋ ನಾಲ್ಕೋ ಸ್ವರಗಳಿಗೆ ಹೆಚ್ಚಿಲ್ಲದ ಸರಳ ಸುಂದರ ಜಾನಪದ ಮಟ್ಟೊಂದನ್ನು ತನ್ನ ಪಾಡಿಗೆ ತಾನು ಬೆಳದಿಂಗಳಲ್ಲಿ ನುಡಿಸಿಕೊಳ್ಳುತ್ತಿದ್ದ. ಆ ನಾದ ಕೃಷ್ಣಾ ನದಿಯ ವಿಶಾಲ ಹರವನ್ನು, ಅಲೆಗಳನ್ನು ದಾಟಿಕೊಂಡು ನನ್ನ ಕಿವಿಗೆ ಬಿತ್ತು. ನನ್ನ ಹೃದಯವನ್ನು ತಾಕಿದ ಈ ಮಾಧುರ್ಯ, ನನ್ನೆದೆಯ ದುಗುಡವನ್ನು ಎಷ್ಟೋ ಕಮ್ಮಿ ಮಾಡಿತು.

**'ಬಹೆನೋ ಬಾರನೋ ಬಲ್ಲೆನೇ – ವಿಧಿ**
**ಯಿತ್ತುದೊಲ್ಲೆನೆಂದೆಂಬೆನೇ**



**ಹಳುವೊ ಹೊಳಲೊ ಹರಿ ಕರೆವೆಡೆಗೋಗೊಡು –**
**ತಡಿ ಮುಂದಿಡದೆಯೆ ಹಿಂದೆಗೆವೆನೆ ನಾ**
**ಕೊಳಲು ಬನದೊಳಿರಲಿ – ನಾ**
**ಹೋಗಿ ಬರುವೆ ಮುರಳಿ'**

– ಎಂದು ತಾನು ಸದಾ ನುಡಿಸುತ್ತಿದ್ದ ತನ್ನ ಪ್ರೀತಿಯ ಕೊಳಲಿಗೂ, ತನ್ನ ಪ್ರೀತಿಯ ಸರ್ವಸ್ವವಾಗಿದ್ದ ಗೋಕುಲಕ್ಕೂ ವಿದಾಯ ಹೇಳಿ ಮಧುರೆಗೆ ತೆರಳುತ್ತಿದ್ದ ಕೃಷ್ಣ ನುಡಿಸಿದ ಪು.ತಿ.ನ.ರ 'ಗೋಕುಲ ನಿರ್ಗಮನ'ದ ಹಾಡು ಮತ್ತೆ ಕೇಳಿದಂತಾಯ್ತು. ಅದುವರೆಗೆ ಮುದುಡಿದ್ದ ನನ್ನ ಮನ ಚೇತರಿಸಿಕೊಂಡಿತು. ಕೃಷ್ಣೆಗೆ ಕೈ ಮುಗಿದೆ. ಕಣ್ಬಿಟ್ಟು ನೋಡಿದಾಗ ಅಲ್ಲೇ ಹೊರಗೆ ಕನಕ ದುರ್ಗಮ್ಮನ ಗುಡಿ ಬೆಟ್ಟದ ಮೇಲೆ ದೀಪಗಳೊಡನೆ ಕಂಗೊಳಿಸುತ್ತಿತ್ತು. ಚಾಮುಂಡಿ ಬೆಟ್ಟವನ್ನು ಆವರಿಸಿದ್ದ ದೀಪ ಮಾಲೆಯಂತೆಯೇ ಕನಕದುರ್ಗ ಗುಡಿ ನಿಂತಿದ್ದ ಬೆಟ್ಟದ ಮೇಲೂ ದೀಪಾವಳಿ ಮೆರೆದಿತ್ತು. ಹೊಸ ಬೆಳಕು ಮೂಡಿ ಆಗತಾನೇ ಬೆಳಕು ಹರಿಯುತ್ತಿತ್ತು. ನನ್ನ ಉದ್ಯೋಗ ಜೀವನದ ಮೊದಲು ಅದಾಗಿತ್ತು. ವಿದ್ಯಾರ್ಥಿ ದೆಶೆ ಆಗತಾನೆ ಮುಗಿದಿತ್ತು.

೧೯೫೪ರ ಡಿಸೆಂಬರ್ ೧೭ರಂದು ವಿಜಯವಾಡ ರೇಡಿಯೋ ಕೇಂದ್ರಕ್ಕೆ ರಿಪೋರ್ಟ್ ಮಾಡಿಕೊಂಡು Trasmission Executive ಆಗಿ ಅಲ್ಲಿ ಕೆಲಸಕ್ಕೆ ಸೇರಿದೆ.

## ವಿಜಯವಾಡ ರೇಡಿಯೋ ಕೇಂದ್ರ

ವಿಜಯವಾಡ ರೇಡಿಯೋ ಕೇಂದ್ರ, ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದೆನ್ನುವಂತೆ ಇಡೀ ಭಾರತದಾದ್ಯಂತ ಸಂಗೀತ ಪ್ರಪಂಚದಲ್ಲಿ ಹೆಸರುವಾಸಿಯಾಗಿತ್ತು. ಲಲಿತ ಸಂಗೀತ ಮತ್ತು ಭಕ್ತಿ ರಂಜನಿ ಕಾರ್ಯಕ್ರಮಗಳನ್ನು ನಿರ್ವಹಿಸುತ್ತಿದ್ದ ಶ್ರೀ ಮಂಗಳಂಪಲ್ಲಿ ಬಾಲಮುರಳೀ ಕೃಷ್ಣ ಅವರ ಹೆಸರನ್ನು ಕೇಳದವರಿರಲಿಲ್ಲ. ನಾನು ವಾಸವಾಗಿದ್ದ ಪೊನ್ನಮ್ಮ ತೋಟ, ಕಲಾವಿದರ ಕಾಲೋನಿ ಎಂದು ಹೆಸರಾಗಿತ್ತು. ರೇಡಿಯೋದಲ್ಲಿ ಕೆಲಸಮಾಡುತ್ತಿದ್ದ ಓಲೇಟಿ ವೆಂಕಟೇಶ್ವರುಲು, ವಿಂಜಮೂರಿ ಲಕ್ಷ್ಮಿ, ಶ್ರೀರಂಗಂ ಗೋಪಾಲರತ್ನಂ, ಇವರುಗಳೂ ಮತ್ತವರ ಕುಟುಂಬದವರೂ ನನಗಾಗಲೇ ಸ್ನೇಹಿತರಾಗಿ ಬಳಕೆಯಾಗಿಬಿಟ್ಟಿದ್ದರು. ಪೊನ್ನಮ್ಮ ತೋಟದಿಂದ ಓಡುನಡಿಗೆಯಲ್ಲಿ ಹೋದರೆ, ಐದೇ ನಿಮಿಷದಲ್ಲಿ ಸಿಗುತ್ತಿತ್ತು, ಈ ರೇಡಿಯೋ ವಿಜಯವಾಡದ ಪುಟ್ಟ ಸುಂದರ ಬ್ರಿಟಿಷ್ ಕಾಲದ ಬಂಗಲೆ. ಈ ರೇಡಿಯೋ ಕೇಂದ್ರದಲ್ಲಿ ಕೆಲಸ ಮಾಡುವುದು ನನ್ನ ಪಾಲಿಗೆ ಸ್ವರ್ಣಾವಕಾಶವಾಗಿತ್ತು, ಸ್ವರ್ಗಸದೃಶವಾಗಿತ್ತು. ದಿನಬೆಳಗಾದರೆ ಮದ್ರಾಸು, ಕೇರಳ, ಹೈದರಾಬಾದು, ಮತ್ತು ಉತ್ತರ ಭಾರತದಿಂದ ಮಹಿಮಾನ್ವಿತ ಕಲಾವಿದರು

ಬಾಲಮುರಳಿಯವರ ನೇತೃತ್ವದಲ್ಲಿ AIRನ ವಿಶೇಷ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಆಸೆಪಟ್ಟು ಬರುತ್ತಿದ್ದರು. ಕಾರಣ, ಇಲ್ಲಿ ನೆಲೆಗೊಂಡಿದ್ದ ಇತರ ಅಸಾಮಾನ್ಯ ಕಲಾವಿದರೂ ಸಹ. ಅನತಿಕಾಲದಲ್ಲೇ ಇವರುಗಳೆಲ್ಲಾ ನನ್ನ ಆಪ್ಯಾಯ ಬಂಧು–ಬಾಂಧವರಂತೆ ಸನ್ನಿಹಿತರಾಗಿದ್ದು ನನ್ನ ಅದೃಷ್ಟವೆಂದೇ ಹೇಳಬೇಕು. ಇಲ್ಲಿ ಕೆಲಸ ಮಾಡಲು ನನಗೆ ಸಂಬಳ ಕೂಡ ಯಾಕೆ ಅನ್ನಿಸುತ್ತಿತ್ತು.

ವಿಜಯವಾಡದಲ್ಲಿ ಕೆಲಸಕ್ಕೆ ಸೇರಿದ ಮಾರನೆಯ ದಿನವೇ ಬಾಲಮುರಳಿಯರು ಅವರ ಮನೆಗೆ ಊಟಕ್ಕೆ ನನ್ನನ್ನು ಆಹ್ವಾನಿಸಿದ್ದರು. ಅಂದಿನಿಂದ ಅವರ ಪತ್ನಿ ಅನ್ನಪೂರ್ಣ, ಮಕ್ಕಳು, ಅವರ ತಂದೆ, ಮತ್ತು ಕುಟುಂಬದ ಸಮಸ್ತರೂ, ನನ್ನನ್ನು ಮನೆಯವಳಂತೆಯೇ ಆದರಿಸುತ್ತಿದ್ದರು. ಈ ಮಧ್ಯೆ ಬೆಂಗಳೂರಿನಲ್ಲಿ ರಾಮನವಮಿ ಸಂಭ್ರಮ ಶುರುವಾಗಿತ್ತು. ಈ ಸಂದರ್ಭದಲ್ಲಿ ಶ್ರೀ ಬಾಲಮುರಳಿ ಕೃಷ್ಣ ಮತ್ತು ಅನ್ನವರಪು ರಾಮಸ್ವಾಮಿ ಇಬ್ಬರೂ ಬೆಂಗಳೂರು ಆಕಾಶವಾಣಿಗೆ ಹೋಗಲಿದ್ದರು. ಆಗ ನಮ್ಮ ಮನೆಗೂ ಹೋಗಿ, ಅಣ್ಣ–ಅಮ್ಮನನ್ನು ನೋಡಿ ಬನ್ನಿ ಎಂದು ಅವರನ್ನು ಕೇಳಿಕೊಂಡಿದ್ದೆ. 'ಶ್ರೀರಾಮನಿಗೆ ಮಂಗಳಾರತಿ ಮಾಡಿ ಹಿಂತಿರುಗಿ ಬಾಗಿಲ ಕಡೆ ನೋಡಿದೆ. ಶ್ರೀರಾಮ–ಲಕ್ಷ್ಮಣರಂತೆ ಬಾಲಮುರುಳಿ, ಅನ್ನವರಪು ರಾಮಸ್ವಾಮಿ ಇಬ್ಬರೂ, ಬಾಗಿಲಲ್ಲಿ ನಿಂತಿದ್ದರು. ಮಂಗಳಾರತಿ ಕೊಟ್ಟೆ, ನಿಮ್ಮಮ್ಮ ಅವರನ್ನು ಊಟಕ್ಕೆ ಎಬ್ಬಿಸಿದಳು' ಎಂದು ಅಣ್ಣ ಖುಷಿಯಿಂದ ವರ್ಣಿಸಿ ಕಾಗದ ಬರೆದಿದ್ದರು. ಅಮ್ಮ ಅಣ್ಣರ ಆತಿಥ್ಯದಿಂದ ಸಂತುಷ್ಟರಾಗಿ ವಿಜಯವಾಡಕ್ಕೆ ಹಿಂತಿರುಗಿದ ನಂತರ, ಬಾಲಮುರಳಿ ಇದನ್ನೆಲ್ಲಾ ನನಗೆ ವಿವರಿಸಿದ್ದರು. ಅಮ್ಮ ಅಣ್ಣನನ್ನು ನೋಡಿ, ನಮ್ಮ ಮನೆಯಲ್ಲಿ ರಾಮನವಮಿಯ ಹಬ್ಬದೂಟವನ್ನು ಮಾಡಿದ ಅವರ ಆನಂದಕ್ಕೆ ಪಾರವಿರಲಿಲ್ಲ. ಅಂತೂ ವಿಜಯವಾಡ ರೇಡಿಯೋ ಸ್ಟೇಷನ್‌ನಲ್ಲಿ ಕೆಲಸ ಮಾಡುತ್ತಾ ಒಂದು ವರ್ಷ ಕಳೆಯುವ ವೇಳೆಗೆ, ಆ ವಾತಾವರಣಕ್ಕೆ ನಾನು ಪೂರ್ತಿ ಹೊಂದಿಕೊಂಡು ಕೃಷ್ಣಜಿಲ್ಲಾ ಸುಸಂಸ್ಕೃತಿಗೆ ಮಾರುಹೋಗಿ, ಬೆಂಗಳೂರಿನವರ ಕಣ್ಣಿನಲ್ಲಿ ಪೂರ್ತಿ 'ತೆಲುಗು ಅಮ್ಮಾಯಿ' ಆಗಿಬಿಟ್ಟಿದ್ದೆ.

## ಮನೆಯಿಂದ ಕಾಗದ ಬಂದಿತ್ತು

ಸುಮಿತ್ರಳಿಂದ ಕಾಗದ ಬಂದಿತ್ತು – 'ನಿನ್ನ ಧೋರಣೆ ಪಕ್ಕಕ್ಕಿಡು. ಈತ (this young man) ನಿನಗೆ ಬರೆದರೆ polite ಆಗಿ ಉತ್ತರ ಬರಿ. Fuss ಮಾಡಬೇಡ, ಇತ್ಯಾದಿ. ಕೆಲವು ದಿನಗಳ ನಂತರ ಕಾಗದ ಬಂತು. 'ನನ್ನ ಹೆಸರು ರಾಜಗೋಪಾಲ್. I just want to get to know you, just want to say hello' ಇತ್ಯಾದಿ. ವಿಜಯವಾಡದಂಥ ಸಣ್ಣ ಊರಲ್ಲಿ ನಾನೀ ಅಪರಿಚಿತ ಯುವಕನನ್ನು ಭೇಟಿ ಮಾಡುವುದಾದರೂ ಎಲ್ಲಿ? ಹೇಗೆ? ಸಹೋದ್ಯೋಗಿಗಳಿಗೆ ಈತನ ವಿಚಾರ ಏನೆಂದು



ಹೇಳುವುದು? ಅಮ್ಮ ಅಣ್ಣನನ್ನೂ, ಬೆಂಗಳೂರನ್ನೂ ನೋಡಿ ಬಹಳ ಕಾಲವೇ ಆಗಿತ್ತು. ಡೆಲ್ಲಿ AIRನಿಂದ staff training ಮುಗಿಸಿಕೊಂಡು ಹಿಂದಿರುಗಿದ ನಂತರ, ಅಮ್ಮನಿಗಿನ್ನೂ ಕಾಗದವನ್ನೇ ಬರೆಯದೆ ಅವಳನ್ನು ಚಿಂತೆಗೀಡು ಮಾಡಿದ್ದೇನೆಂಬ ಅಳುಕು, ಅಪರಾಧಪ್ರಜ್ಞೆ ಕೂಡ ಕಾಡುತ್ತಿತ್ತು. ಬೆಂಗಳೂರಿಗೆ ಪರಾರಿಯಾಗುವುದೇ ಸೂಕ್ತವೆಂದು ನಿರ್ಧರಿಸಿ, ಬೆಂಗಳೂರಿಗೆ ಹೋಗಲು ರಜಕ್ಕೆ ಹಾಕಿ, ಸೂಟ್‌ಕೇಸ್ ತರಲು ಗವರ್ನರ್ ಪೆಟ್‌ಮಾರ್ಕೆಟ್ಟಿಗೆ ಹೋಗಿ ಹೊಸ ಸೂಟ್‌ಕೇಸ್ ಕೊಂಡು ಬಂದರ್ ರೋಡಿನಲ್ಲಿ ಬರುತ್ತಿದ್ದೆ.

ವಿಜಯವಾಡ ರೇಡಿಯೋ ನಿಲಯದ ಸಮೀಪಕ್ಕೆ ಬಂದಾಗ ಸೈಕಲ್ ರಿಕ್ಷಾ ತುಳಿಯುತ್ತಿದ್ದ ನನ್ನ ಸಾರಥಿ, ರಿಕ್ಷಾವನ್ನು ನಿಧಾನ ಮಾಡಿ, 'ಅಮ್ಮ, ನೀಕೋಸಂ ಎವರೋ?! ಚೂಡು' ಎನ್ನುತ್ತಾ ರಿಕ್ಷಾ ನಿಲ್ಲಿಸಲು ತೊಡಗಿದ. ಅಪರಿಚಿತ ಯುವಕ ಚಪ್ಪಾಳೆ ತಟ್ಟಿ ರಿಕ್ಷಾದವನಿಗೆ ನಿಲ್ಲಲು ಆದೇಶಿಸುತ್ತಿದ್ದರು. ನಾನು ರಿಕ್ಷಾದವನಿಗೆ, 'ಈತನಾರೋ ತಿಳಿಯದು. ಬೇಗ ಬೇಗ ರಿಕ್ಷಾ ಓಡಿಸಪ್ಪಾ. ನಾನು ಇಳಿಯಬೇಕಾದ ಪೊನ್ನಮ್ಮ ತೋಟ ಇಲ್ಲೇ ಎದುರಿಗೆ ಕಾಣುತ್ತಿದೆಯಲ್ಲ, ಅಲ್ಲಿ ಬಲಕ್ಕೆ ತಿರುಗು' ಅಂದೆ. 'ಎವುರೋ ಮಂಚಿವಾರುಲಾ ಉನ್ನಾರು (ಯಾರೋ ಒಳ್ಳೆಯರಂತೆ ಕಾಣುತ್ತಿದ್ದಾರೆ) ಅಂದದ್ದೇ ರಿಕ್ಷಾದವನು ಅಲ್ಲೇ ನಿಲ್ಲಿಸಿಬಿಟ್ಟ. ಅಪರಿಚಿತ ವ್ಯಕ್ತಿ, 'I am sorry to surprise you. ನಾನು ರಾಜಗೋಪಾಲ್' ಎಂದರು. ವಿಧಿಯಿಲ್ಲದೆ, ಪಕ್ಕದಲ್ಲೇ ರಾರಾಜಿಸುತ್ತಿದ್ದ ರೇಡಿಯೋ ಸ್ಟೇಷನ್‌ನ ದೊಡ್ಡ ಗೇಟ್ ಮೂಲಕ AIR ವಿಜಯವಾಡದ ಪುಟ್ಟ ಬಂಗಲೆಯ ಮುಂದೆ ರಿಕ್ಷಾ ನಿಲ್ಲಿಸಿ, 'ಒಂದೆರಡು ಕ್ಷಣ ನೀವಿಲ್ಲಿದ್ದರೆ, ನಾನೀಗಲೇ ಬರುತ್ತೇನೆ' ಎಂದು ಹೇಳುವಷ್ಟರಲ್ಲಿ ಮೆಟ್ಟಲಿಳಿದು ಬಂದ ನಿಲಯದ ಕಲಾವಿದ ರಮಣಮೂರ್ತಿಗೆ ರಾಜುವನ್ನು ಪರಿಚಯಿಸಿದೆ. ರಮಣಮೂರ್ತಿ, ಓಲೇಟಿ ವೆಂಕಟೇಶ್ವರುಲು (ಪ್ರಸಿದ್ಧ ಸಂಗೀತ ನಿರ್ದೇಶಕರು, ಗಾಯಕರು), ತೆನ್ನೇಟಿ ಹೇಮಲತ (ಖ್ಯಾತ ಕಾದಂಬರಿಕಾರಳು ಮತ್ತು ನಿಲಯದ ಅನೌನ್ಸರ್), ಮತ್ತಿತರ ಸಹೋದ್ಯೋಗಿ-ಗಳು ಮುಗುಳ್ನಕ್ಕು ರಾಜುವನ್ನು loungeಗೆ ಆಹ್ವಾನಿಸಿ ಕೂರಿಸಿದರು.

ನಾನು ಮನೆಗೆ ಹೋದೊಡನೆ ನಾನು ಬಾಡಿಗೆಗಿದ್ದ ಮನೆಯೊಡತಿ, ಡಾಕ್ಟರರ ಹೆಂಡತಿ, ನನ್ನನ್ನು ಕಂಡೊಡನೆ ಸುದ್ದಿ ತಿಳಿಸಿದರು, 'ಇನ್ಶೂರೆನ್ಸ್ ಅಬ್ಬಾಯಿ ನೀಕೋಸಂ ಮೂಡು ಸಾರಿ ವಚ್ಚಿ ಪೋಯಿನಾಡಮ್ಮ' ('ನಿನಗೋಸ್ಕರ, ಇನ್ಶೂರೆನ್ಸ್ ಆತ ಮೂರು ಸಾರಿ ಬಂದು ಹೋದನಮ್ಮ') ಎಂದು. ಅವರ ಮಗಳು ಜಯಶ್ರೀ ಹದಿ ಹರೆಯದ ನನ್ನ ಗೆಳತಿ, ನನ್ನ ಸಂದಿಗ್ಧವನ್ನು ಸೂಕ್ಷ್ಮವಾಗಿ ಅರಿತು, ಮೆಲುದನಿಯಲ್ಲಿ 'ಬೇಗ ರೆಡಿಯಾಗಿ ಹೋಗು' ಎಂದು ನನ್ನನ್ನು ಅವಸರಿಸಿ ಓಡಿಸಿದಳು. ನಾನು ರೇಡಿಯೋ ನಿಲಯಕ್ಕೆ ಹಿಂದಿರುಗಿದಾಗ ನನಗೊಂದು ಅಚ್ಚರಿಯೇ ಕಾದಿತ್ತು. ರಾಜು ಸ್ನೇಹಪೂರ್ಣ

ಸಂಭಾಷಣೆಯಲ್ಲಿ ತೊಡಗಿ ಅವರೆಲ್ಲರೊಡನೆ ಸಹಜವಾಗಿ ಮಾತನಾಡುತ್ತಾ ಕುಳಿತಿದ್ದರು. ಇದು ನನ್ನ ರಾಜುವಿನ ಮೊದಲ ಭೇಟಿ!

ಮೊದಲ ಕ್ಷಣದಿಂದಲೇ ಅವರ ನವಿರು ಹಾಸ್ಯ ಪ್ರಕೃತಿ ವ್ಯಕ್ತವಾಯಿತು. ಆ ತೆಲುಗು ದೇಶಕ್ಕೆ ಬಂದ ಮೇಲೆ, ಅಷ್ಟು ಒಳ್ಳೆಯ ಕನ್ನಡ, ಅಷ್ಟು ಒಳ್ಳೆಯ ಜೋಕುಗಳನ್ನು ಕೇಳಿ ಮರುಭೂಮಿಯಲ್ಲಿ ಓಯಸಿಸ್ ಕಂಡಂತಾಗಿತ್ತು. ಕೃಷ್ಣ ಬರಾಜ್ ಕಡೆ ಸಾಯಂಕಾಲ ವಾಕ್ ಹೋಗಿದ್ದೆವು. ನಾವಿಬ್ಬರೂ ಎಷ್ಟೋ ದಿನಗಳಿಂದ ಪರಿಚಯವಿದ್ದವರಂತೆ ಸನ್ನಿಹಿತರಾಗಿದ್ದೆವು. ಅವರ ತಾಯಿ ಸರಸ್ವತಮ್ಮ, ತಂದೆ ಯೋಗಾನರಸಿಂಹಂ, ಅಕ್ಕಂದಿರು ಪಾಪು (ಮಹಾಲಕ್ಷ್ಮಿ), ಕಸ್ತೂರಿ, ಅಣ್ಣಂದಿರು ಶೌರಿ, ನಾಣಿ, ಮೋಹನ್, ತಂಗಿ ನೀರಜ, ತಮ್ಮ ಮುಕುಂದ, ಅಜ್ಜಿ ವಾಜಪೇಯಮ್ ಕಮಲಾಕ್ಷಮ್ಮ, ರಾಜುವಿನ ಅಚ್ಚು ಮೆಚ್ಚಿನ ಸೋದರಮಾವ ಗೋಪಾಲ್, ಚಿನ್ನಮ್ಮ, ಮತ್ತೆಲ್ಲರೂ ನಮ್ಮ ಮಾತಿನಲ್ಲಿ ಬಂದು ಹೋದರು. ರಾಜುಗೆ ಅಕ್ಕ ಸುಮಿತ್ರಳ ಪರಿಚಯವಿತ್ತು. ಅಣ್ಣನ Tolstoy ಕತೆಗಳನ್ನು ಹತ್ತು ವರ್ಷದ ಚಿಕ್ಕ ಹುಡುಗನಾಗಿದ್ದಾಗಲೇ ಓದಿ ಮೆಚ್ಚಿ, ಬುಕ್ ರಿಪೋರ್ಟ್ ಬರೆದಿದ್ದರು. ನನ್ನ, ಮತ್ತು ಸುಮಿತ್ರ, ಕಮಲರ ಹೆಸರನ್ನು ಮೈಸೂರು, ಬೆಂಗಳೂರು, ಧಾರವಾಡ, ಡೆಲ್ಲಿಯ AIR ಕೇಂದ್ರಗಳಿಂದ ನಮ್ಮ ಜಾನಪದ ಗೀತೆಗಳು ಬಿತ್ತರಿಸಲ್ಪಟ್ಟಿದ್ದಾಗ ಕೇಳಿದ್ದರು. 'ನೀವು, ಸಂಗೀತದ ಸೀನಿಯರ್ ಪರೀಕ್ಷೆಯಲ್ಲಿ ಉತ್ತಮ ಶ್ರೇಣಿಯಲ್ಲಿ ಪಾಸ್ ಮಾಡಿದ್ದೀರೆಂದು ನಿಮ್ಮ ತಂದೆ ಹೇಳಿದರು' ಎಂದು ಚುಡಾಯಿಸುವಂತೆ ಹೇಳಿದಾಗ ನನಗೆ ತುಂಬಾ ಮುಜುಗರ ಆಗಿತ್ತು, ಅಣ್ಣನ ಮೇಲೆ ಕೋಪ ಬಂದಿತ್ತು.

ಇದಾದ ಕೆಲ ದಿನಗಳ ನಂತರ, ನನಗಾಗಲೇ ಆತ್ಮೀಯ ಬಂಧುವಿನಂತಾಗಿದ್ದ ಸಹೋದ್ಯೋಗಿ ಬಾಲಮುರಳಿಯವರ ಜೊತೆ ಸ್ಟುಡಿಯೋದಲ್ಲಿ ಕೆಲಸ ಮಾಡುತ್ತಿದ್ದಾಗ, ಅವರೇ ರಚಿಸಿ ಹಾಡಿ ಜನಪ್ರಿಯವಾಗಿದ್ದ, 'ಆಗಸಮುನ ತೊಲಿಮಬ್ಬುಲ ಚಾವಿಡಿ' ಹಾಡು, ರಾಜುವಿಗೂ ತುಂಬಾ ಇಷ್ಟವೆಂದು ತಿಳಿಸಿದೆ. ಆಗ ಬಾಲಮುರಳಿ, 'ನೀಕೇಂದುಕು ತಲ್ಲೀ ಈ ಉದ್ಯೋಗಮ್, ಹಾಯಿಗಾ ವೆಳ್ಳಿ ಪೆಳ್ಳಿ ಚೇಸುಕೋ (ನಿನಗೇಕಮ್ಮ ತಾಯಿ ಈ ಉದ್ಯೋಗ, ಹಾಯಾಗಿ ಹೋಗಿ ಮದುವೆ ಮಾಡಿಕೊ)' ಅಂದರು. 'ನೇನು ವೆಳ್ಳಿ ಪೆಳ್ಳಿ ಚೇಸುಕೊಂಟೆ ಮೀರೊಚ್ಚಿ ಪಾಡುತಾರಾಂಡೀ? (ನಾನು ಹೋಗಿ ಮದುವೆಯಾದರೆ ನೀವು ಅಲ್ಲಿ ಬಂದು ಹಾಡುವಿರಾ)' ಎಂದು ನಾನು ಪ್ರಶ್ನಿಸಿದೆ. ಆತ 'ತಪ್ಪಕೊಂಡ, ಪೆಳ್ಳಿ ತೇದಿ ಎಪ್ಪುಡನಿ ಚಪ್ಪು, ವಚ್ಚಿ ಪಾಡುತಾನು (ಖಂಡಿತ, ಮದುವೆ ಯಾವತ್ತೆಂದು ಹೇಳು, ಬಂದು ಹಾಡುತ್ತೇನೆ)' ಅಂದರು.

**ಬಾಲಮುರಳಿ ಬಂದು ಹಾಡಿದರು!**

ಹಾಗಂದಹಾಗೇ, ಶ್ರೀಯುತರಾದ ಮಂಗಳಂಪಲ್ಲಿ ಬಾಲಮುರಳಿ ಕೃಷ್ಣ ಅವರು,



ಪಿ. ಸೂರ್ಯರಾವ್ ಮತ್ತು ರಮಣಮೂರ್ತಿಗಳ ಜೋಡಿ ತಂಬೂರಿ ಮತ್ತು ಸಹಗಾಯನ, ಅನ್ನವರಪು ರಾಮಸ್ವಾಮಿ ವಯೊಲಿನ್, ಯಲ್ಲಾ ಸೋಮಣ್ಣ ಮೃದಂಗ, ಇಷ್ಟು ಜನ ಹೆಸರಾಂತ ಕಲಾವಿದರ ದೊಡ್ಡ ತಂಡ, ಒಂದು ಬಿಡಿಕಾಸು ತೆಗೆದುಕೊಳ್ಳದೆ, ಸ್ನೇಹಪೂರ್ಣ ವಾತ್ಸಲ್ಯದಿಂದ ನನ್ನ ಮದುವೆಗೆ ಬಂದು ಹಾಡಿದ್ದು ಒಂದು ಅಪೂರ್ವ ಸಂಗತಿ. ವಿಜಯವಾಡದ ಇತರ ಪ್ರಿಯ ಸಹೋದ್ಯೋಗಿ ಬಂಧುಗಳು, ವಿಂಜಮೂರಿ ಲಕ್ಷ್ಮಿ, ಅಂದಿನ ಪ್ರಖ್ಯಾತ ಕಾದಂಬರಿಕಾರಳು ತೆನ್ನೇಟಿ ಹೇಮಲತ, ನನ್ನ ಬಾಡಿಗೆ ಮನೆ ಮಾಲೀಕರಾದ ಡಾಕ್ಟರು, ಅವರ ಹೆಂಡತಿ ಮತ್ತಿತರರೂ ನನ್ನ – ರಾಜು ಮದುವೆಗೆ ಬಂದು, ನಮ್ಮನ್ನು ಆಶೀರ್ವದಿಸಿದರು. ಮದುವೆ ರಿಸೆಪ್ಷನ್‌ಗೆ ಆಗಮಿಸಿದ್ದ ಭಾರತದ ಹೆಸರಾಂತ ಕಲಾವಿಮರ್ಶಕ ಮತ್ತು ಲೇಖಕ ಜಿ. ವೆಂಕಟಾಚಲಂ, ನಿಟ್ಟೂರು ಶ್ರೀನಿವಾಸರಾಯರು, ಮತ್ತಿತರ ಸಂಗೀತಾಭಿಮಾನಿಗಳು, ಹಾಡುತ್ತಿದ್ದ ಬಾಲಮುರಳಿ ವೃಂದದ ಎದುರು ಮುಂದಿನ ಸಾಲಲ್ಲಿ ಕುಳಿತು ಆನಂದಿಸಿದರು. ಅ.ನ.ಕೃ. ಮಾರನೇ ದಿನ ನಾಗೋಲಿಗೆ ಬಂದಿದ್ದರು. ಅಣ್ಣನ ಪ್ರಿಯ ಮಿತ್ರರು ಜಿ. ಪಿ. ರಾಜರತ್ನಂ, ಪು. ತಿ. ನರಸಿಂಹಚಾರ್ಯರು, ಜಿ. ವೆಂಕಟಸುಬ್ಬಯ್ಯ ಮತ್ತನೇಕರು ಬಂದು ಆಶೀರ್ವದಿಸಿ, ಆ ದಿನವನ್ನು ಚಿರಸ್ಮರಣೀಯ ಮಾಡಿದರು. ವೆಂಕಟಸುಬ್ಬಯ್ಯನವರು ನನ್ನ ರಾಜುವಿನ ಬಳಿ ಬಂದು, 'ಈ ಎರಡು ಕುಟುಂಬಗಳೂ ಸೇರಿದ್ದು, ಹಾಲು ಜೇನು ಬೆರೆತಂತಾಯಿತು' ಎಂದು ಹೇಳಿ ಸಂತೋಷಿಸಿದರು. ಸಂಗೀತ ಲೋಕದಲ್ಲಿ ಭಾರತಾದ್ಯಂತ ಮನೆಮಾತಾಗಿ ಹೋಗಿದ್ದ ಬಾಲಮುರಳಿಯವರು ಬಂದು ಹಾಡುತ್ತಿರುವ ಅಪೂರ್ವ ಸುದ್ದಿಯನ್ನು ಕೇಳಿ – ಬೆಂಗಳೂರಿನ ಸಂಗೀತಾಸಕ್ತರ ಸಣ್ಣ ತಂಡವೇ ರಾಮ ಮಂದಿರದ ಅಂಗಳದ ಹೊರಗೆ ಸಂದಣಿಸಿದ್ದರು.

ಮದುವೆಯಾದ ಎಷ್ಟೋ ವರ್ಷಗಳ ಮೇಲೆ ನನ್ನ ಅಚ್ಚುಮೆಚ್ಚಿನ ಬಾಲ್ಯ ಗೆಳತಿ ರಮಾದೇವಿಯೊಡನೆ ಪುನರ್ಮಿಲನವಾಯಿತು. 'ಏನೇ ನೀನು ನನ್ನನ್ನು ಮದುವೆಗೆ ಕರೆದೇ ಇರಲಿಲ್ಲ' ಎಂದು ಆಕ್ಷೇಪಿಸಿದಳು. ನಾ ಗಾಬರಿಯಾಗಿ ಹೇಳಿದೆ– 'ನಿನಗೆ ಖಂಡಿತವಾಗಿ ಆಗ ಆಮಂತ್ರಣ ಕಳಿಸಿದ್ದೆ' ಎಂದು. 'ನಿನ್ನ ಬಂಧುಗಳು ಬಂದು, ಅಣ್ಣ ಅತ್ತಿಗೆಯರನ್ನು ಕರೆದು ಲಗ್ನ ಪತ್ರಿಕೆ ಕೊಟ್ಟು ಹೋದರು. ಅದರಲ್ಲಿ ನನ್ನ ಹೆಸರಿಗೆ ಏನೂ ಆಮಂತ್ರಣ ಇರಲಿಲ್ಲ' ಅಂದಳು. ಆ ವೇಳೆಗೆ ರಮಾದೇವಿ ಮೆಡಿಕಲ್ ಡಾಕ್ಟರ್ ಆಗಿ, Army Officer ಒಬ್ಬಾತನನ್ನು ಮದುವೆಯಾಗಿ, ಉತ್ತರ ಭಾರತದಲ್ಲಿ ನೆಲೆಸಿದ್ದಳು. 'Hey Vimala, you are so lucky, I saw your hubby though, he is so handsome' ಎಂದು ಕಣ್ಣು ಮಿಟುಕಿಸಿ ನಕ್ಕಳು. 'ಮದುವೆಗೇ ಬರದ ನಿನಗೆ ಹೇಗೆ ಗೊತ್ತೇ ಅವರು handsome ಅಂತ' ಅಂದೆ. 'ಅಲ್ಲೇ ಪ್ರೊಫೆಸರ್ ಕೆ. ಅನಂತರಾಮಯ್ಯನವರ ಮನೇಲಿ ತಾನೇ ಬೀಗರನ್ನು ಇಳಿಸಿದ್ದು. ಅಲ್ಲಿ ಗೋಡೆ ಪಕ್ಕದ ಒಗೆಯೋ ಕಟ್ಟೆ ಮೇಲೆ ನಿಂತು, ಪಿ. ಎಸ್. ನಾಗರತ್ನ ಮನೆ ಅಂಗಳದಿಂದ

ವರ ಪೂಜೆಯ ಮೆರವಣಿಗೆ ಇತ್ಯಾದಿಗಳನ್ನು ನೋಡಿದೆವು' ಅಂದಳು. 'ಹಳೇ ಬಾಲ್ಯದ ಸ್ನೇಹದ ಅಚ್ಚಳಿಯದ ಪ್ರೀತಿ ಎಂದರೆ ಇದೇ ಅಲ್ಲವೇ' ಅನ್ನಿಸಿಬಿಟ್ಟಿತು. ಅವಳನ್ನು ತಬ್ಬಿಕೊಂಡಾಗ ನಮ್ಮಿಬ್ಬರ ಕಣ್ಣಲ್ಲಿ ನೀರಾಡಿತ್ತು.

## ಮೃದುಭಾಷಿ, ಹಸನ್ಮುಖಿ ವಾಗ್ಗೇಯಕಾರರು ನನ್ನ ಮಾವನವರು

ರಾಜುವನ್ನು ನೋಡುವುದಕ್ಕೆ ತುಂಬಾ ಮುಂಚೆ ಅಮ್ಮನ ಕಡೆಯ ಅತ್ಯಂತ ನಿಕಟ ಬಂಧುವಾದ ಇತ್ತೀಚೆಗೆ ಕಣ್ಮರೆಯಾದ ಶ್ರೀ ರಾಮಮೂರ್ತಿಗಳನ್ನು ತೀರ ಚಿಕ್ಕವಳಿದ್ದಾಗಲೇ ನೋಡಿದ್ದ ಸೌಭಾಗ್ಯ ನನ್ನದಾಗಿತ್ತು. ಹಾಸನದಲ್ಲಿ ಅವರ ತಾಯಿ ಮೋಕ್ಷಗುಂಡಂ ಗುಂಡಮ್ಮ (ಮನೆಯವರಿಗೆ ಅವರು 'ಗುನ್ನ'), ಅವರ ಮಗಳು ಕಮಲು, ಶ್ರೀ ರಾಮಮೂರ್ತಿಗಳ ಮನೆಯಲ್ಲಿದ್ದರು. ನಾನೂ ನನ್ನಕ್ಕ ಸುಮಿತ್ರ ಆಗ ಶಾಸ್ತ್ರೀಯ ಸಂಗೀತ ಹಾಡುತ್ತಿದ್ದೆವು. ಶ್ರೀ ರಾಮಮೂರ್ತಿಗಳು ಪುಟ್ಟ ಬಾಲಿಕೆಯರಾದ ನಮ್ಮ ಸಂಗೀತ ಕಛೇರಿಯನ್ನು ಅಲ್ಲಿ ಏರ್ಪಾಡು ಮಾಡಿ, ನಾವು ಹಾಡಿದ್ದೆವು. ನಾನು ರಾಜುವನ್ನು ಮದುವೆ ಆದಾಗ, ಗುನ್ನ, ರಾಮಮೂರ್ತಿ, ಎಲ್ಲ, 'ನಮಗೆ ಗೊತ್ತಿದ್ದ ಹುಡುಗಿಯೇ ನಮ್ಮ ಮನೆಗೆ ಸೊಸೆಯಾಗಿ ಬಂದಳು ಎಂದು ತುಂಬಾ ಹರ್ಷಿಸಿದ್ದರು. ನಾನು ಮೊಟ್ಟ ಮೊದಲು ಅಪ್ಪನನ್ನು (ಶ್ರೀ. ಯೋಗಾನರಸಿಂಹಂ, ರಾಜುವಿನ ತಂದೆಯವರನ್ನು) ನೋಡಿದ್ದು ಆಕಾಶವಾಣಿ ಬೆಂಗಳೂರಿನಲ್ಲಿ. ಆಗ ನಾನು ಸೆಂಟ್ರಲ್ ಕಾಲೇಜಿನಲ್ಲಿ ಇಂಗ್ಲಿಷ್ ಆನರ್ಸ್ ಓದುತ್ತಿದ್ದೆ. ಆಗಾಗ ಬೆಂಗಳೂರು ಆಕಾಶವಾಣಿಯಿಂದ ಬಿತ್ತರಿಸುತ್ತಿದ್ದ ಸಂಸ್ಕೃತ ನಾಟಕಗಳಲ್ಲಿ ಭಾಗವಹಿಸುತ್ತಿದ್ದೆ. ಆಗ ನನಗೆ ಭಾಸನ 'ಸ್ವಪ್ನವಾಸವದತ್ತ' ಸಂಸ್ಕೃತ ನಾಟಕದಲ್ಲಿ ಪಾತ್ರ ವಹಿಸಲು ಆಕಾಶವಾಣಿಯಿಂದ ಕರೆ ಬಂತು. ಆಗ ಅಪ್ಪ ಸಂಸ್ಕೃತ ನಾಟಕ ವಿಭಾಗಕ್ಕೆ ನಿರ್ಮಾಪಕರು, ನಿರ್ದೇಶಕರು. ಅಪ್ಪ ಮೃದುಭಾಷಿ, ಹಸನ್ಮುಖಿ. ಅಪ್ಪ ನಾಟಕವನ್ನು ನಿರ್ದೇಶಿಸಿದ್ದಲ್ಲದೆ, ಯೌಗಂಧರಾಯಣನ ಪಾತ್ರ ಮಾಡಿದ್ದರು. ಅವರು ಹಾಡಿದ ಸಂಸ್ಕೃತ ಪದ್ಯಗಳ ಗಂಭೀರ ಮಾಧುರ್ಯ ನನ್ನ ಕಿವಿಯಲ್ಲಿ ಇನ್ನೂ ಇದೆ. ಅಪ್ಪನ ಹೆಚ್ಚು ಗಡಿಬಿಡಿಯಿಲ್ಲದ ಅಚ್ಚುಕಟ್ಟಾದ ಕೆಲಸದ ರೀತಿ ಆ ಸಂದರ್ಭದಲ್ಲಿ ನನಗೆ ಪರಿಚಯವಾಯಿತು.

ನನ್ನ ಮದುವೆಗೆ ಸ್ವಲ್ಪ ಮುಂಚೆ, ವಿಜಯವಾಡದ ರೈಲ್ವೆ ಸ್ಟೇಷನ್ನಲ್ಲಿ, ಅಪ್ಪ ಪಾಪುವಿನೊಡನೆ ಸಂಗೀತ ಸಮ್ಮೇಳನಕ್ಕೆ ಡೆಲ್ಲಿಗೆ ಪ್ರಯಾಣ ಮಾಡುತ್ತಿದ್ದ ದಾರಿಯಲ್ಲಿ, ನಾನು ಹೋಗಿ ನೋಡಿದ್ದೆ. ಮಧ್ಯ ರಾತ್ರಿಯಾದ್ದರಿಂದ, ನನ್ನ ಜೊತೆ ನನ್ನ ಗೆಳತಿ ಶ್ರೀರಂಗಂ ಗೋಪಾಲರತ್ನಂ ಬಂದಿದ್ದಳು. ಅವಳ ಸಂಗೀತವೆಂದರೆ ಅಪ್ಪನಿಗೆ ತುಂಬಾ ಮೆಚ್ಚಿಗೆ. ಅಪ್ಪ ಅವಳನ್ನು ತುಂಬಾ ಮರ್ಯಾದೆಯಿಂದ ವಿಶ್ವಾಸದಿಂದ ಮಾತಾಡಿಸಿದರು. ಪಾಪು ರತ್ನಂ ಮಾತಾಡಿಕೊಳ್ಳುತ್ತಿದ್ದರು. ನಾನು ಅಪ್ಪ ಸ್ವಲ್ಪ ಹೊತ್ತು ಮಾತಾಡಿಕೊಂಡೆವು.



'ಪೆದ್ದ ಮನಿಷಿಲಾ ಉನ್ನಾರು' ಎಂದು ಪಾಪುವನ್ನು ಮೆಚ್ಚಿಕೊಂಡ ರತ್ನಂ ಅಪ್ಪನ ಗಾಂಭೀರ್ಯದ ಶ್ರೀಮಂತ ನಡವಳಿಕೆಯನ್ನು ಗಮನಿಸಿದಳು. ದೊಡ್ಡವರು ಚಿಕ್ಕವರನ್ನು ಇಷ್ಟು ಮರ್ಯಾದೆ ತೋರಿಸಿ ಮಾತಾಡಿಸಿದ್ದು ಅವಳನ್ನು ಸೋಜಿಗಗೊಳಿಸಿದ್ದಲ್ಲದೆ ಅವಳ ಮನಸ್ಸಿನ ಮೇಲೆ ತುಂಬಾ ಪ್ರಭಾವ ಬೀರಿತು. ಮುಂದೆ ನನ್ನ ನಾದಿನಿ ನೀರಜಳ ಮದುವೆ ಗೊತ್ತಾದಾಗ ಅವಳನ್ನು ಮದುವೆ ಸಂದರ್ಭದಲ್ಲಿ ಹಾಡುವಂತೆ ಆಹ್ವಾನಿಸಿದಾಗ ರತ್ನಂ ತಕ್ಷಣ ಒಪ್ಪಿದ್ದಲ್ಲದೆ, ಆ ಸಮಯಕ್ಕೆ ಅವಳಿಗೆ ಬಂದಿದ್ದ ಕೆಲವು ಕಛೇರಿಗಳನ್ನು ಬಿಟ್ಟುಕೊಟ್ಟು, ನಮ್ಮ ಮನೆಗೆ ಬಂದು ಹಾಡಲು ಸಂಭಾವನೆಯನ್ನು ಅಪೇಕ್ಷಿಸದೆ, ಮನೆಯವಳಂತೆಯೇ ಅವಳ ತಮ್ಮ ಶ್ರೀ ಗೋವಿಂದಾಚಾರಿಯವರೊಡನೆ ಬಂದು, ಹಾಡಿ ಹೋದಳು. ಆ ಕಛೇರಿಗಾಗಿ ಅಪ್ಪ ತಮ್ಮ ತಂಬೂರಿಯನ್ನು ಗಂಟೆಗಟ್ಟಳೆ ಕುಳಿತು ಶ್ರುತಿ ಮಾಡಿದ್ದರು. ಆ ಕಛೇರಿ ಭರ್ಜರಿಯಾಗಿತ್ತು, ಅವಿಸ್ಮರಣೀಯವಾಗಿತ್ತು. ಆ ಮನಮೋಹನ ಗಾಯನವನ್ನು ಕೇಳಿ ಮೈಸೂರು ಬಂಧುಗಳು ಮಾರುಹೋಗಿದ್ದರು.

ನೆನಸಿಕೊಂಡರೆ ಅನಿಸುತ್ತೆ, ಶ್ರೀ ಮಂಗಳಂಪಲ್ಲಿ ಬಾಲಮುರಳಿಯವರು ನನ್ನ ಮದುವೆಯಲ್ಲಿ ಹಾಡಿದ್ದೇ, ಬೆಂಗಳೂರಲ್ಲಿ ಅವರು ಕೊಟ್ಟ ಮೊದಲ ಸಾರ್ವಜನಿಕ (ರೇಡಿಯೋ ಹೊರಗಿನ) ಕಛೇರಿ. ಇದಕ್ಕೂ ಮುಂಚೆ, ಈ ಅಪ್ರತಿಮ ಕಲಾವಿದ, ಪುಟ್ಟ ಬಾಲಕನಾಗಿದ್ದಾಗ ಹಾಸನಕ್ಕೊಮ್ಮೆ ಬಂದು ಹಾಡಿದ್ದರು ಎಂದು ರಾಜುವಿನ ಅಣ್ಣ ಡಾಕ್ಟರ್ ಎಚ್. ವೈ. ಮೋಹನ್‌ರಾಮ್ ಅವರು ಜ್ಞಾಪಿಸಿಕೊಂಡರು. ಶ್ರೀರಂಗಂ ಗೋಪಾಲರತ್ನಂ ಮೈಸೂರು ನಾಡಿನಲ್ಲಿ ರೇಡಿಯೋ ಹೊರಗೆ ಹಾಡಿದ್ದು ಅದೇ ಮೊದಲ ಬಾರಿ. ನಾನು ವಿಜಯವಾಡಕ್ಕೆ ಹೋದ ಮೇಲೆ, ಅವರಿಬ್ಬರೂ ಬೆಂಗಳೂರು ಮೈಸೂರಿನ ಅನೇಕ ಮುಖ್ಯ ಕನ್ನಡ ಕಾರ್ಯಕ್ರಮಗಳಲ್ಲಿ ಪಾಲ್ಗೊಂಡರು. ನನ್ನ ಮತ್ತು ಆ ವಿಜಯವಾಡ ಆಕಾಶವಾಣಿ ಕಲಾವಿದರ ಮಧ್ಯ ಸ್ನೇಹ ಮೊಳೆತು, ಅದೇ ಸ್ನೇಹದಿಂದ ಮುಂದೆ ಸುಂದರವಾಗಿ ಬೇರೆ ಬೇರೆ ಕಾರ್ಯಕ್ರಮಗಳು ಚಿಗುರಿಕೊಂಡ-ವೆಂದು ಹೆಮ್ಮೆಯಾಗುತ್ತೆ.

## ಎತ್ತಣ ಅಹಲ್ಯೆ? ಎತ್ತಣ ಅಕ್ಕಿ ಹೆಬ್ಬಾಳು?

ನನ್ನ ಹೆತ್ತವ್ವ ಶಾರದೆ ಅಕ್ಕಿ ಹೆಬ್ಬಾಳಿನವಳು. ಪೌರಾಣಿಕ ಪ್ರಸಿದ್ಧ ಋಷಿ ದಂಪತಿಗಳಾದ ಅಹಲ್ಯಾ, ಗೌತಮರು, ಅಹಲ್ಯಾ ಶಾಪವಿಮೋಚನೆಯ ನಂತರ ಉತ್ತರ ದೇಶವನ್ನು ತ್ಯಜಿಸಿ, ವಿಂಧ್ಯ ಪರ್ವತವನ್ನು ದಾಟಿ ದಕ್ಷಿಣಕ್ಕೆ ಬಂದು, ಅಕ್ಕಿ ಹೆಬ್ಬಾಳಿನಲ್ಲಿ ತಮ್ಮ ಆಶ್ರಮವನ್ನು ಕಟ್ಟಿ, ಆ ಮನೋಹರವಾದ ಸ್ಥಳದಲ್ಲಿ, ನದಿ ದಡದಲ್ಲಿ ನೆಲಸಿದರೆಂದು ಸ್ಥಳ ಪುರಾಣವನ್ನು ಅದೇ ಊರಿನವರಾದ ಎ. ಎನ್. ಮೂರ್ತಿರಾವ್ ಅವರು ತಮ್ಮ ಆತ್ಮಕಥೆಯಲ್ಲಿ ಬರೆದಿದ್ದಾರೆ. ಸೆಂಟ್ರಲ್ ಕಾಲೇಜ್‌ನಲ್ಲಿ ನನ್ನ ಇಂಗ್ಲಿಷ್ ವಿದ್ಯಾಗುರುಗಳಾಗಿದ್ದ

ಪ್ರೊಫೆಸರ್ ಎ. ಎನ್. ಮೂರ್ತಿರಾವ್ ಅವರಿಗೆ ನನ್ನ ಜಾನಪದ ಗೀತೆಗಳ ಹಾಡಿಕೆ ಅಮತ್ತು ಗೋಕುಲ ನಿರ್ಗಮನದ ಹಾಡಿಕೆ ಅಂದರೆ ತುಂಬಾ ಮೆಚ್ಚುಗೆ. 'ನಿಮ್ಮಮ್ಮ ನಮ್ಮ ಅಕ್ಕಿ ಹೆಬ್ಬಾಳಿನವಳು. ಸಂಗೀತಪ್ರಿಯರಿಗೆ ಹೆಸರಾದ ಊರು ಎಂದು ಪ್ರತೀತಿ. ಅವಳ ಮಗಳಾಗಿ, ನಿಮ್ಮ ಜಾನಪದ ಹಾಡಿಕೆಯ ಧ್ವನಿ ಸುರುಳಿ ಮಾಡಲು ಇಷ್ಟು ನಿಧಾನ ಮಾಡುವುದೇ' ಎಂದು ಛೇಡಿಸಿ, ಅದನ್ನು ಹೊರತರಲು ಹುರಿದುಂಬಿಸಿದ್ದರು. ಯು. ಆರ್. ಅನಂತಮೂರ್ತಿಗಳು ಆ ಧ್ವನಿ ಸುರುಳಿಯನ್ನು ಗಾಯನ ಸಮಾಜದಲ್ಲಿ ಬಿಡುಗಡೆ ಮಾಡಿದಾಗ, ೧೦೨ ವರ್ಷದ ಆ ನನ್ನ ಗುರುಗಳು, ಮುಖ್ಯ ಅತಿಥಿಗಳಾಗಿ ಬಂದು ಶುಭ ಹಾರೈಸಿದ್ದರು.

## ತೌರುಮನೆ ಮಧುರ... ತೌರಿನಷ್ಟೇ ಅತ್ತೆಮನೆಯೂ...

ನನ್ನ ಮದುವೆಯಲ್ಲಿ, ನನ್ನ ಅಕ್ಕ ಸುಮಿತ್ರ ಮತ್ತು ರಾಜು ಅಕ್ಕ ಕಸ್ತೂರಿ ಇವರುಗಳು ತಮಾಷಿ ಮಾಡಿಕೊಂಡು ಮಾತಾಡಿಕೊಳ್ಳುತ್ತಿದ್ದರು – 'ಹೆಣ್ಣು ಗಂಡಿನ, ರಾಜು ವಿಮಲಳ ಜಾತಕವಿರಲಿ – ಬೀಗ ಬೀಗರ ಜಾತಕ ತುಂಬಾ ಹೊಂದತ್ತೆ!' ಅಂತ. ಹಾಗಂದ ಹಾಗೆ, ರಾಜುವಿನ ತಂದೆ ಯೋಗಾನರಸಿಂಹಂ ಅವರು ಸ್ವಭಾವ, ವೇಷಭೂಷಣ, ಸಜ್ಜನಿಕೆ, ಸಾತ್ವಿಕ ಗುಣಗಳಲ್ಲಿ ಅಣ್ಣನನ್ನೇ (ನನ್ನ ತಂದೆಯವರನ್ನೇ) ಹೋಲುತ್ತಿದ್ದರು. ರಾಜು ಅಮ್ಮ ಹೆಚ್. ವೈ. ಸರಸ್ವತಮ್ಮನವರು ನನ್ನ ಅಮ್ಮ ಶಾರದೆಯಂತೆಯೇ ಪ್ರೇಮಮಯ ವ್ಯಕ್ತಿ. ರಾಜು ಅಣ್ಣ ಶೌರಿ, ನನ್ನ ಅಮ್ಮ ಶಾರದೆ ಕಣ್ಮರೆಯಾದಾಗ ಅವರನ್ನು ಕುರಿತು 'ಆಕೆ ಕೊಡುಗೈನ ಮಮತಾಮೂರ್ತಿ' ಎಂದು ಬಣ್ಣಿಸಿ ಕಾಗದ ಬರೆದಿದ್ದರು.

ಸರಸ್ವತಮ್ಮ 'ಮದುವೆ ಮನೆಯಲ್ಲಿ ಸಣ್ಣ ಪುಟ್ಟ ಲೋಪದೋಷಗಳಾದಲ್ಲಿ ಯಾರೂ ತಪ್ಪು ತಿಳಿಯಬಾರದು. ಅದನ್ನೇ ಹೆಚ್ಚು ಮಾಡಿಕೊಂಡು ಹಗರಣ ಮಾಡಿಕೊಳ್ಳಬಾರದು. ಇದು ನನ್ನ ವಿನಂತಿ' ಎಂದು ಉದ್ಘೋಷಿಸಿ, ದೂರ ದೂರದ ಊರುಗಳು ಮತ್ತು ಸುತ್ತುಮುತ್ತಲ ಹಳ್ಳಿಗಳಿಂದ ಬಂದಿದ್ದ ಬಂಧು ವರ್ಗದವರನ್ನು ಚಕಿತಗೊಳಿಸಿದ್ದರು. ತೌರುಮನೆಯ ವಾತಾವರಣ, ಅತ್ತೆಯ ಮನೆಯ ವಾತಾವರಣ ಒಂದೇ ಮಾಧುರ್ಯದಿಂದ ಕೂಡಿತ್ತು. ನನ್ನ ತಂದೆ ವಿದ್ವಾಂಸರೂ, ವಿನಯಸಂಪನ್ನರೂ, ಗಾಂಧಿಯ ನಿಜಭಕ್ತರು, ಟಾಲ್‌ಸ್ಟಾಯ್ ಕಥೆಗಳನ್ನು ಕನ್ನಡಿಸಿದ್ದವರು, ಸಾಹಿತ್ಯದಲ್ಲಿ ಹೆಸರಾದವರು, ಸತ್ಯ ನಿಷ್ಠೆಯ ಬಾಳು ಬಾಳಿದವರು. ಹಾಗೆಯೇ, ರಾಜುವಿನ ಅಪ್ಪ ಸಂಸ್ಕೃತದ ಮಹಾ ವಿದ್ವಾಂಸರು, ವಾಗ್ಗೇಯಕಾರರು. ನಮ್ಮ ತಾಯ ಮನೆಯಲ್ಲಿ ಅಣ್ಣನ ಹಳ್ಳಿಯ ಬಳಗದವರು, ಅಮ್ಮನ ತೌರಿನ ಕಡೆಯವರೂ ಬಂದು ಹೋಗುತ್ತಿದ್ದರು. ಅಪ್ಪನ ಮತ್ತು ಅಮ್ಮನ ಕಡೆ ಬಂಧುಗಳು ಎಲ್ಲರಿಗೂ H. Y. ಮನೆಯಲ್ಲಿ ತೆರೆದ



ಬಾಗಿಲು – ಬೆಳಗಿಂದ ಸಾಯಂಕಾಲದವರೆಗೂ ಹೋಗಿ ಬರುವ ಬೇಕಾದಷ್ಟು ವಿಶ್ವಾಸಿ ಜನಗಳು. ಎಲ್ಲರಿಗೂ ಯಥೋಚಿತ ಆದರಾತಿಥ್ಯ ನಡೆಯುತ್ತಲೇ ಇದ್ದವು. ಅಮ್ಮ ಎಂದೂ ಮುಜುಗರಪಟ್ಟುಕೊಳ್ಳದೆ ಮನೆಯನ್ನು ನಿರ್ವಹಿಸುತ್ತಿದ್ದರು. ಅಪ್ಪ, ಯಾವಾಗಲೂ ಶಾಂತವಾಗಿ, ತಮ್ಮ ವಿದ್ವತ್ ಮತ್ತು ಸಂಗೀತ ಚಟುವಟಿಕೆಗಳಲ್ಲಿ ತೊಡಗಿರುತ್ತಿದ್ದರು.

ಅಮ್ಮ ಸರಸ್ವತಮ್ಮನವರದು ತೀಕ್ಷ್ಣ ಆದರೆ ನವುರಾದ ಹಾಸ್ಯ ಪ್ರಕೃತಿ. ಅವರನ್ನು ತುಂಬಾ ಸೀರಿಯಸ್ ಆಗಿ ತೆಗೆದುಕೊಂಡ ಯುವಕರನ್ನು ತಾವೇ ಲೇವಡಿ ಮಾಡಿ ನಕ್ಕುಬಿಡುತ್ತಿದ್ದರು. ಚಿಕ್ಕವರಿದ್ದಾಗ ರಾಜು, ಮೋಹನ್ ಒಂದಾಗಿ ಪಿತೂರಿ ಮಾಡಿ ಅಮ್ಮನನ್ನು ಗೋಳುಗುಟ್ಟಿಸುವ ಪ್ರಯತ್ನ ತುಂಬ ನಡೆಸುತ್ತಿದ್ದರು, ಮಲಗುವ ಮುನ್ನ ಅಮ್ಮನ ಹತ್ತಿರ ಬೈಸಿಕೊಂಡು ತೆಪ್ಪಗಾಗುತ್ತಿದ್ದರು. ರಾತ್ರಿ ವೇಳೆ ಸೀರಿಯಸ್ಸಾಗಿ ಪರೀಕ್ಷೆಗೆ ಓದಿಕೊಳ್ಳುತ್ತಿದ್ದ ಕಸ್ತೂರಿ ನೀರು ಕುಡಿಯಲು ಅಡಿಗೆ ಮನೆಗೆ ಕೆಲವು ಬಾರಿ ಹೋದಾಗ, ರಾಜು, ಮೋಹನ್ ಅವಳ ಹೊದಿಕೆ, ದಿಂಬುಗಳನ್ನು ಕ್ರಮೇಣವಾಗಿ ಮಾಯ ಮಾಡಿ, ಕಟ್ಟ ಕಡೆಯಲ್ಲಿ ಹಾಸಿಗೆಯನ್ನೇ ಜಮಖಾನದ ಸಮೇತ ಮಾಯ ಮಾಡುತ್ತಿದ್ದುದು, ಅವರು ಮಾಡುತ್ತಿದ್ದ ತುಂಟಾಟಕ್ಕೆ ಒಂದು ಪುಟ್ಟ ಉದಾಹರಣೆ.

## ಮರೆಯಲಾಗದ ವಾರಂಗಲ್ಲಿನ ಆ ದಿನಗಳು

ನನ್ನ ರಾಜುವಿನ ಮದುವೆಯಾದಾಗ ರಾಜು ಹೈದರಾಬಾದ್ ಬಳಿ ಕಾಝಿಪೇಟ್ ಎಂಬಲ್ಲಿ (ಪುರಾತನ ಚರಿತ್ರಾರ್ಹ ಓರಗಲ್ಲು ಪ್ರಾಂತದ ವಾರಂಗಲ್ ಎಂದು ಹೆಸರಾದ ಊರ ಬಳಿ ಇರುವ ಸ್ಥಳ) Regional Engineering College ನಲ್ಲಿ ಹೈಡ್ರಾಲಿಕ್ಸ್ ಅಧ್ಯಾಪಕರಾಗಿದ್ದರು. ತರಕಾರಿ ಮಾರಲು ದಿನನಿತ್ಯ ಬರುತ್ತಿದ್ದ ಕೇತಮ್ಮ, ಕಾಂತಮ್ಮ, ಇವರುಗಳು ಕಾಕತೀಯ ದೇವಾಲಯಗಳ ಕಡೆದ ದೇವತಾ ಮೂರ್ತಿಗಳಂತೆ ಕಡು ಚೆಲುವೆಯರಾಗಿದ್ದರು. ಹಾಲು ವರ್ತನೆ ತಂದು ಕೊಡುತ್ತಿದ್ದ ಗಿರಿಜಾ ಮೀಸೆಯ ರಾಜಯ್ಯ, ಅವನ ಹೆಂಡತಿ ಮಕ್ಕಳು, ಕಿರಿಗೆ ಉಟ್ಟಿಕೊಂಡು ಚಿಗುರೆ ಮರಿಯಂತೆ ಅವನ ಹಿಂದೆ ಬರುತ್ತಿದ್ದ ಪುಟ್ಟ ರಾಜಕುಮಾರಿಯಂತಿದ್ದ ಮಗಳು, ಇವರೆಲ್ಲರೊಡನೆಯೂ ರಾಜು ಹಿತವಾಗಿ ಮಾತಾಡುತ್ತಿದ್ದರು. ಅವರ ಕಷ್ಟ ಸುಖಗಳನ್ನು ವಿಚಾರಿಸುತ್ತಿದ್ದರು, ನೆರವಾಗುತ್ತಿದ್ದರು. ನಮ್ಮ ಮನೆಯ ಹಿಂದೆ ಕುರಿ ಮೇಯಿಸುತ್ತಿದ್ದ ಮುತ್ತಿ, ಧವಳಿ, ಈ ಲಂಬಾಣಿ ಯುವತಿಯರು ಅವರು ಕೈಯಲ್ಲೇ ಪೋಣಿಸಿ ತಯಾರಿಸುತ್ತಿದ್ದ ಸುಂದರ ಮಣಿಹಾರಗಳನ್ನು ನನಗೆ ಉಡುಗೊರೆಯಾಗಿ ಆಗಾಗ ಕೊಡುತ್ತಿದ್ದರು. ಈ ಅಕೃತ್ರಿಮ ಜನಗಳ ಸ್ನೇಹ ನನ್ನ ಮನಸ್ಸಲ್ಲಿ ಅಚ್ಚಳಿಯದೆ ಉಳಿದಿದೆ.





## ಉನ್ನತ ವ್ಯಾಸಂಗಕ್ಕೆ ಅಮೆರಿಕಕ್ಕೆ

ರಾಜುವನ್ನು ಅಪ್ಪ ತುಂಬಾ ಹಚ್ಚಿಕೊಂಡಿದ್ದರು. ೧೯೬೦ರಲ್ಲಿ ರಾಜು ಅಮೆರಿಕಕ್ಕೆ ಉನ್ನತ ವ್ಯಾಸಂಗಕ್ಕೆ ಹೊರಟಾಗ, ರಾಜು ಅಪ್ಪನನ್ನೂ ಅಮ್ಮನನ್ನೂ ತಬ್ಬಿಕೊಂಡು ಗಟ್ಟಿಯಾಗಿ ಅತ್ತುಬಿಟ್ಟರು. ಅಪ್ಪ, ಮೆಲ್ಲಗೆ ಕಣ್ಣೀರು ಒರೆಸಿಕೊಂಡರು. ತುಂಬು ಮನಸ್ಸಿನಿಂದ ಆಶೀರ್ವದಿಸಿದರು. 'ಅನ್ನದ ಋಣ ನೀರಿನ ಋಣ ಎಲ್ಲಿದೆಯೋ ಅಲ್ಲಿ ಹೋಗುತ್ತೀರಿ' ಅಂದರು ಮೆಲುದನಿಯಲ್ಲಿ.

## ಇವತ್ತು ಹಂಡೆಗೆ ನೀರು ತುಂಬಿಸಲಿಲ್ಲ!

ಬಹಳ ವರ್ಷಗಳ ಮೇಲೆ ಅಮೆರಿಕದಿಂದ ನಮ್ಮ ಪುಟ್ಟ ಸಂಸಾರದೊಡನೆ ಭಾರತಕ್ಕೆ ಹೋಗಿ ಮತ್ತೆ ಅಲ್ಲಿಂದ ಹಿಂತಿರುಗಿ ಹೊರಟು ನಿಂತಿದ್ದಾಗ, ಅಮ್ಮ ಒಂದು ಅತ್ಯಮೂಲ್ಯ ಪುಟ್ಟ ಪುಸ್ತಕವೊಂದನ್ನು ನನ್ನ ಕೈಲಿಟ್ಟರು. ರಾಜು ಪುಟ್ಟ ಹುಡುಗ – ಎಳೆಯ ಹತ್ತು ಹನ್ನೆರಡು ವರ್ಷದ ಪುಟ್ಟ ಬಾಲಕ, innocent ಆಗಿ ದಿನಾ ಬರೆಯುತ್ತಿದ್ದ ಪುಟ್ಟ press button ನಿಂದ ಶೋಭಿಸುತ್ತಿದ್ದ ಡೈರಿ ಅದಾಗಿತ್ತು. ಅದರಲ್ಲಿ ನಮೂದಿತವಾಗಿರುವ ವಿವರಗಳನ್ನು ಇಷ್ಟು ವರ್ಷಗಳ ಮೇಲೆ ಓದಿ ನಕ್ಕೂ ನಕ್ಕೂ ಸಾಕಾಯಿತು. ಉದಾ: 'ಇವತ್ತು ಹಂಡೆಗೆ ನೀರು ತುಂಬಿಸಲಿಲ್ಲ' – 'ಎರಡು ಚಪ್ಪಾತಿ ಹೆಚ್ಚು ತಿಂದೆ' – ಈ ತಪ್ಪೊಪ್ಪಿಗೆಗಳು ದಿನ–ಬಿಟ್ಟು–ದಿನ ಕಾಣುತ್ತಿದ್ದವು ಈ ಡೈರಿಯಲ್ಲಿ (ರಾಜು ಅದು ತಮ್ಮ sin book ಎಂದು ನನಗೆ ವಿವರಿಸಿದರು). 'ಇವತ್ತು so and so ಮೇಷ್ಟ್ರನ್ನ ಚುಡಾಯಿಸಿದೆ'. 'ಅವರನ್ನು ಕೇಳಬಾರದ ಪ್ರಶ್ನೆ ಕೇಳಿದೆ, ಅವರ ಮನಸ್ಸಿಗೆ ಎಷ್ಟು ನೋವಾಯಿತೋ' ಅಂತ ಬರಕೊಂಡಿತ್ತು ಈ ಮಗು. ಚಿಕ್ಕ ಬಾಲಕನ ನಿರ್ಮಲ ತಿಳಿ ಮನಸ್ಸನ್ನು ಪ್ರತಿಬಿಂಬಿಸುವ ಈ ಬರವಣಿಗೆಯನ್ನು ಅಮ್ಮ ಇಷ್ಟು ದಿವಸ ಜೋಪಾನವಾಗಿ ಇಟ್ಟಿದ್ದೂ ಅಲ್ಲದೆ, ಅದನ್ನು ನನಗೆ ಕೊಟ್ಟಿದ್ದು, ನನ್ನ ಹೃದಯವನ್ನು ಕರಗಿಸಿತ್ತು, ಮುದಗೊಳಿಸಿತ್ತು.

## ಮದುವೆಗೆ ಮಣಭಾರದ ಸೀರೆಗಳ 'ದಂಡ'ಯಾತ್ರೆ

೨೦೧೩ನಲ್ಲಿ ರಾಜು ಜೊತೆ ಬೆಂಗಳೂರಿಗೆ ಹೋಗಿದ್ದಾಗ, ಜಿ. ವೆಂಕಟಸುಬ್ಬಯ್ಯ ನವರ ಮನೆಗೆ ಹೋಗಿದ್ದೆ. ನೆಟ್ಟಕಲ್ಲಪ್ಪ ಸರ್ಕಲ್ ಬಳಿ ಬಂದಾಗ, ಟ್ಯಾಕ್ಸಿ ಚಾಲಕ ರಾಮಕುಮಾರ್ ಅಂದರು, 'ನಿಮ್ಮ ಸ್ನೇಹಿತೆ ಮನೆ ಅಂತಿದ್ರಲ್ಲ, ಇಲ್ಲೇ, ಡಾ. ರಮಾದೇವಿ ಅಂತ ಬೋರ್ಡ್ ಇದೆ, ಒಳಗೆ ಹೋಗಿ ನೋಡುತ್ತೀರಾ?' ಎಂದು ಹುರಿದುಂಬಿಸಿದರು. ಖುಷಿಯಿಂದ ಕೆಳಗಿಳಿದು ರಾಜು ಜೊತೆ ಹೋಗಿ ಬಾಗಿಲು ತಟ್ಟಿದೆ. 'ಮಮ್ಮೀ, ಯಾರೋ ನಿನಗಾಗಿ' ಎಂದು ನಮ್ಮನ್ನು ಸ್ವಾಗತಿಸಿದ ಯುವತಿ ಅವರಮ್ಮನನ್ನು



ಕರೆದಳು. ನನ್ನ ಮುಂದೆ ಬಂದು ನಿಂತ ನನ್ನ ಬಾಲ್ಯದ ಗೆಳತಿ ರಮಾದೇವಿ ನನ್ನ ಗುರುತು ಹಿಡಿಯದೆ ಅರೆ ಕ್ಷಣ ದಿಟ್ಟಿಸಿದಳು. ಆ ವೇಳೆಗೆ ನಾವಿಬ್ಬರೂ ಅಜ್ಜಿಯರಾಗಿದ್ದೆವು. ಮಗಳಿಗೆ 'ಇವಳು ನನ್ನ ಬಾಲ್ಯ ಸ್ನೇಹಿತೆ' ಎಂದು ಪರಿಚಯಿಸಿದಳು. ಬಿಸ್ಕತ್ತು ಕಾಫಿಗಳ ಉಪಚಾರವಾದ ಮೇಲೆ, ರಾಜುಗೆ ರಮಾದೇವಿ ದೂರು ಹೇಳಿದಳು, 'ಅಣ್ಣ, ಈ ವಿಮಲಾ – ಏನು ಸಾಮಾನ್ಯಳಲ್ಲ. ಅವತ್ತು ಎಂ. ಎಸ್. ಸುಬ್ಬುಲಕ್ಷ್ಮಿಯವರು ವಾಡಿಕೆಯಂತೆ ನಮ್ಮ ಮನೇಲಿ ಇಳಿದುಕೊಂಡಿದ್ದರು. ಇಲ್ಲೇ ಪಕ್ಕದಲ್ಲಿ ನೆಟ್ಟಕಲ್ಲಪ್ಪ ಅವರ ಮನೇಲಿ ಮದುವೆಗಾಗಿ ಕರೆದಿದ್ದರು. ವಿಮಲಾಗೆ ಮಾತಿನ ಮಧ್ಯೆ ನಾನೇ ವಿಚಾರ ಹೇಳಿದ್ದೆ. ತಕ್ಷಣವೇ ಇವಳು, ಎಲ್ಲಿ? ಎಂ. ಎಸ್. ಸುಬ್ಬುಲಕ್ಷ್ಮಿ ಕಛೇರಿ ಎಲ್ಲಿ? ಯಾವಾಗ, ಎಷ್ಟು ಹೊತ್ತಿಗೆ? ಎಂದು ಒಂದೇ ಉಸಿರಿನಲ್ಲಿ ಕೇಳಿದವಳೇ – ಮಿಂಚಿನಂತೆ ಮಾಯವಾಗಿ ನಾಗಾಲೋಟದಲ್ಲಿ ನೆಟ್ಟಕಲ್ಲಪ್ಪ ಅವರ ಮನೆ ಮದುವೆ ಚಪ್ಪರಕ್ಕೆ ಓಡಿ ಹೋದಳು. ನಾನು, ಪಿ. ಎಸ್. ನಾಗರತ್ನ ಇವಳ ಗಡಿಬಿಡಿ ಅಡಾವುಡಿ ನೋಡಿ, ಬೆಪ್ಪಾಗಿ ಒಬ್ಬರ ಮುಖ ಒಬ್ಬರು ನೋಡಿಕೊಂಡೆವು. ಮದುವೆಗೆ ಹೋಗುವಾಗ ಒಂದು ಜರತಾರಿ ಸೀರೆ ಕೂಡ ಉಡದೆ, ಅಂಥಾ ವೈಭವಪೂರಿತ ಶ್ರೀಮಂತರ ಮದುವೆಗೆ ಆರ್ಡಿನರಿ ಲಂಗ ಜಂಪರ್ ತೊಟ್ಟು ಹೋದರೆ ಏನು ಚಂದ ಎಂದೆಣಿಸಿ, ಕಷ್ಟಪಟ್ಟು ನಮ್ಮ ತಾಯಿಯ ಮಣಭಾರದ ಜರತಾರಿ ಸೀರೆಗಳನ್ನು ಲಂಗ ಜಂಪರಿನ ಚಿಕ್ಕ ಹುಡುಗಿಯರು ನಾವು ಕಷ್ಟಪಟ್ಟು ಉಟ್ಟುಕೊಂಡು ನಿಧಾನವಾಗಿ ಗಂಭೀರವಾಗಿ ಹೋದೆವು. ಆ ವೇಳೆಗಾಗಲೇ ವಿಮಲ ಓಡಿ ಮುಂದೆ ಸ್ಟೇಜಿಗೇ ಮುಖ ಆನಿಸಿಕೊಂಡು ಎಂ. ಎಸ್. ಸುಬ್ಬುಲಕ್ಷ್ಮಿಯವರು ಕೈಗೇ ಸಿಗುವಷ್ಟು ಹತ್ತಿರದಲ್ಲಿ ಕುಳಿತುಬಿಟ್ಟಿದ್ದಳು. ನಮ್ಮ ಭಾರೀ ಸೀರೆ ಯಾವ ಪ್ರಯೋಜನಕ್ಕೂ ಬರಲಿಲ್ಲ. ನೆಟ್ಟಕಲ್ಲಪ್ಪನವರ ಬಂಗಲೆಯ ಭಾರಿ ಗೇಟುಗಳನ್ನು ಮುಚ್ಚಿ, ದೊಡ್ಡ ದೊಡ್ಡ ಪೇಟದ ಡವಾಲಿ ಜವಾನರು ಹೊರಗಡೆ ಘೇರಾಯಿಸಿದ್ದ ದೊಡ್ಡ ಜನಸಂದಣಿಯನ್ನು ತಡೆಗಟ್ಟುತ್ತಾ ನಿಂತಿದ್ದರು. ನಾನೂ, ನಾಗರತ್ನ ಇಬ್ಬರೂ ಪೆಚ್ಚುಮೋರೆ ಹಾಕಿಕೊಂಡು ವಾಪಸು ಹೋದೆವು' ಅಂದಳು.

## ನಮಗೊದಗಿದ ಕವಿಹೃದಯಗಳು

'ಮಾಸ್ತಿ ಎಂಬ ಋಷಿ' ಎಂಬ ಲೇಖನವನ್ನು ರಾಜು ಬೆಂಗಳೂರಲ್ಲಿ ಮುಕುಂದನ ಮನೆಯಲ್ಲಿ ಕೂತು ಬರೆಯುತ್ತಿದ್ದಾಗ, ಮಾಸ್ತಿಯವರ ಮೊಮ್ಮಗಳು, ನನ್ನ ಕಾಲೇಜು ಸಹಪಾಠಿ ವಸಂತಶ್ರೀ, ಲಂಡನ್ನಲ್ಲಿ ಬಹಳ ವರ್ಷಗಳು ಕೆಲಸ ಮಾಡಿ ಮುಗಿಸಿ, ಬೆಂಗಳೂರಿಗೆ ಬಂದು ನೆಲೆಸಿದ್ದಳು. ಮೊದಲ ವಿಶ್ವ ಕನ್ನಡ ಸಮ್ಮೇಳನಕ್ಕೆ ಮ್ಯಾಂಚೆಸ್ಟರ್‌ನಲ್ಲಿ ಜಾನಪದ ಗೀತೆಗಳನ್ನು ಹಾಡಲು ನನ್ನನ್ನು ಆಹ್ವಾನಿಸಿದ್ದಾಗ, ನಾನು ರಾಜು ಇಬ್ಬರೂ ಒಟ್ಟಿಗೆ ಹೋಗಿದ್ದೆವು. ಮಾಸ್ತಿಯವರ 'ಓ ಎನ್ನ ತಾಯೇ – ಭಾರತ

ವರ್ಷವೇ' ಹಾಡನ್ನು, ಲಂಡನ್‌ನ ಭಾರತೀಯ ವಿದ್ಯಾ ಭವನದ ಮುಖ್ಯಸ್ಥರಾಗಿದ್ದ ಮತ್ತೂರು ಕೃಷ್ಣಮೂರ್ತಿಯವರ ಮನೆಯಲ್ಲಿ ರಾಜು ಹಾಡಿದ್ದನ್ನು ವಸಂತಶ್ರೀ ತುಂಬಾ ನೆನಪಿಸಿಕೊಂಡಳು. 'ನಮ್ಮ ತಾತ ರಾಜು ಹಾಡಿದ್ದನ್ನು ಕೇಳಿದ್ದರೆ ಅದೆಷ್ಟು ಖುಷಿ ಪಡುತ್ತಿದ್ದರೋ' ಎಂದು ಪದೇ ಪದೇ ಹೇಳಿ ಆ ಹಳೆಯ ದಿನಗಳನ್ನು ನೆನೆದು ಕಣ್ಣೀರು ಮಿಡಿದಳು. 'ಮನೆಗೆ ಬಾರೇ, ರಾಜು ಜೊತೆ, ಇನ್ನೊಮ್ಮೆ ಕೇಳಬೇಕು ಅದನ್ನ' ಅಂದಳು. ಶತಮಾನಗಳ ಹಿಂದಿನಿಂದ ಕವಿಹೃದಯಗಳಲ್ಲಿ ಮೂಡಿ ಬಂದ ಸುಂದರ ಕನಸುಗಳ ಸಿಹಿಯನ್ನು ಪಾಕ ಮಾಡಿ ಹಾಡಿನಚ್ಚುಗಿಳಿಸಿ, ಜನಕ್ಕೆ ಹಿಗ್ಗಿನ ಹಾಡನ್ನು ನೀಡಿದ ಗಂಧರ್ವರು, ನಮ್ಮ ಕವಿಗಳು. ಬೇಂದ್ರೆ, ಪುತಿನ, ಕೆ. ಎಸ್. ನರಸಿಂಹ ಸ್ವಾಮಿ, ಅಡಿಗರು, ಈ ಕವಿಗಳ ಪದ್ಯಗಳು ರಾಜುವಿಗೆ ತುಂಬಾ ಪ್ರಿಯವಾದದ್ದಾಗಿದ್ದವು. ಬೇಂದ್ರೆ, ಕೆ. ಎಸ್. ನರಸಿಂಹಸ್ವಾಮಿ ಪದ್ಯಗಳನ್ನ ತಮ್ಮದೇ ಅನುಪಮ ರಾಗಗಳಲ್ಲಿ ಹಾಡಿಕೊಂಡು ಆನಂದಿಸುತ್ತಿದ್ದರು. ಆ ಹಾಡುಗಳಲ್ಲೊಂದು, 'ನಿನ್ನೊಲುಮೆ' (ಕೆ. ಎಸ್. ನರಸಿಂಹಸ್ವಾಮಿಗಳ 'ಮಲ್ಲಿಗೆಯ ಮಾಲೆ – ಸಮಗ್ರ ಕವನ ಸಂಕಲನ' ೧೯೪೨ to ೨೦೦೩. ಲಿಪಿ ಪ್ರಕಾಶನ, ಬ್ಯುಗಲ್ ರಾಕ್ ರಸ್ತೆ, ಬಸವನ ಗುಡಿ, ಬೆಂಗಳೂರು–೫೬೦೦೦೪).

## ನಿನ್ನೊಲುಮೆ

**ನಿನ್ನೊಲುಮೆಯಿಂದಲೇ ಬಾಳು ಬೆಳಕಾಗಿರಲು**
**ಚಂದ್ರಮುಖಿ ನೀನೆನಲು ತಪ್ಪೇನೆ?**
**ನಿನ್ನ ಸೌಜನ್ಯವೇ ದಾರಿನೆರಳಾಗಿರಲು**
**ನಿತ್ಯಸುಖಿ ನೀನೆನಲು ಒಪ್ಪೇನೆ?**

**ನಿನ್ನ ನಗೆಮಲ್ಲಿಗೆಯ ಪರಿಮಳದ ಪಾತ್ರೆಯಲ್ಲಿ**
**ಚೆಲ್ಲಿ ಸೂಸುವ ಅಮೃತ ನೀನೇನೆ!**
**ನನ್ನ ಕನಸುಗಳೆಲ್ಲ ಕೈಗೊಳ್ಳುವ ಯಾತ್ರೆಯಲಿ**
**ಸಿದ್ಧಿಸುವ ಧನ್ಯತೆಯು ನೀನೇನೆ!**

**ನಿನ್ನ ಕಿರುನಗೆಯಿಂದ, ನಗೆಯಿಂದ, ನುಡಿಯಿಂದ**
**ಎತ್ತರದ ಮನೆ ನನ್ನ ಬದುಕೇನೆ!**
**ಚಂದ್ರನಲಿ ಚಿತ್ರಿಸಿದ ಚೆಲುವಿನೊಳಗುಡಿಯಿಂದ**
**ಗಂಗೆ ಬಂದಳು ಇದ್ದ ಕಡೆಗೇನೆ!**

ರಾಜು ಯಾವಾಗಲೂ ಹಾಡುತ್ತಿದ್ದ ಈ ಹಾಡು ನನ್ನ ಹೃದಯಕ್ಕೆ ತುಂಬಾ ಹತ್ತಿರವಾಗಿತ್ತು. ಭಾರತದಲ್ಲಿ ವಿದ್ಯಾರ್ಥಿ ದೆಶೆಯಲ್ಲಿ ಅವರ ನಿಕಟವರ್ತಿ ಗೆಳೆಯರೊಂದಿಗೂ,



ಮತ್ತೆ ವಾರಂಗಲ್ ಸ್ನೇಹಿತರೊಡನೆಯೂ ನಡೆಸುತ್ತಿದ್ದ ಸಂಗೀತ ಸಂಜೆ ಕಾರ್ಯಕ್ರಮ-ಗಳಲ್ಲೂ ರಾಜು ಈ ಹಾಡುಗಳನ್ನು ತುಂಬಾ ಮಧುರವಾಗಿ ಹಾಡುತ್ತಿದ್ದರು. ಅಡಿಗರ 'ಇಂದು ಕೆಂದಾವರೆ' ಹಾಡನ್ನು ನನ್ನೊಡನೆ ಹಾಡಲು ಇಷ್ಟಪಡುತ್ತಿದ್ದರು. ಸೈಗಲ್‌ನಂತೆ ಅವರ ಕಂಠಶ್ರೀ ಎಂದರೆ ಉತ್ಪ್ರೇಕ್ಷೆಯಲ್ಲ. ಮೋಹನ್, ರಾಜು, ಶೌರಿ, ನೀರಜಾ, ಕಸ್ತೂರಿ, ನಾಣಿ ಪಾಪು, ಮುಕುಂದ್ ಇವರೆಲ್ಲ ನಮ್ಮ ಮನೆಯವರೊಂದಿಗೆ ಸೇರಿದರು ಅಂದರೆ, ಹಾಡುಗಳ ಸುಗ್ಗಿಯೇ ಆಗುತ್ತಿತ್ತು. ಅವರ ಸಂಗೀತ ಪ್ರೀತಿಗೆ ದ್ಯೋತಕವಾಗಿ, ಫಿಲಡೆಲ್ಫಿಯಾದಲ್ಲಿ, ಸಂಗೀತ ನಾಟ್ಯ ಪ್ರಧಾನವಾದ 'ಶೃತಿ' ಸಂಸ್ಥೆಯಲ್ಲಿ ರಾಜು ಸ್ಥಾಪಕ-ಸದಸ್ಯರಾಗಿ ದುಡಿದಿದ್ದಲ್ಲದೆ ಅದರ ಕಾನ್ಸ್ಟಿಟ್ಯೂಷನ್ ಇತ್ಯಾದಿಗಳನ್ನೂ ನೇರಗೊಳಿಸಿ, ಮಾರ್ಗದರ್ಶನ ಮಾಡಿ, ಆ ಸಂಸ್ಥೆಯನ್ನು ಬೆಳೆಸಿದರು. ಅವರ ಇಂಪಾದ ಗಾಯನವನ್ನು ಕೇಳಿದವರು ಯಾರೂ ಎಂದೂ ಅದನ್ನು ಮರೆಯುವಂತಿರಲಿಲ್ಲ. ನನ್ನ ರಾಜುವಿನ ಸಹಬಾಳ್ವೆ ಜೀವನದುದ್ದಕ್ಕೂ ಸಂಗೀತಮಯ, ಸಾಹಿತ್ಯಮಯವಾಗಿ, ಕಲಾತ್ಮಕವಾಗಿ, ಚಿತ್ರವತ್ತಾಗಿತ್ತು.

ನನ್ನ ಹದಿಹರೆಯದ ದಿನಗಳಲ್ಲಿ ನಾನು ಅಕ್ಕನೊಡನೆ ಹಾಡಿಕೊಳ್ಳುತ್ತಿದ್ದ ಕೆ. ಎಸ್. ನರಸಿಂಹಸ್ವಾಮಿಯವರ 'ಅಕ್ಕ ತಂಗಿಯರ ಹಾಡು' ನನಗೆ ತುಂಬಾ ಪ್ರಿಯವಾದದ್ದು. ಈ ಹಾಡಿನ ಕೆಲವು ಸಾಲುಗಳನ್ನು ಅದೆಷ್ಟು ಬಾರಿ ಹಾಡಿ ಖುಷಿ ಪಟ್ಟಿದ್ದೇನೋ!

## ಅಕ್ಕ ತಂಗಿಯರ ಹಾಡು

**ಅಕ್ಕ ತಂಗಿಯರು ಈ ಹಾಡ ಹೇಳಿದರು
ಚಿಕ್ಕ ಮನೆಯೊಳಗೆ ಬೆಳಗಾನ;
ಅಕ್ಕ ಹಾಡಿದಳು; ತಂಗಿ ತೆಳ್ಳಗೆ ನಕ್ಕು
ತಕ್ಕಂತೆ ನುಡಿದಳು ತನನಾನ**

**(ಗಾಳಿ ಬೀಸಿದ ಕಡೆಗೆ ಹಾಡೆದ್ದು ನಡೆದಿತ್ತು;
ಹೂವರಳಿ ಬಿದ್ದಿತ್ತು ಕೆಳಗೆ.
ಹಾಡಿನ ಒಳಗೊಂದು ಜೀವವೆ ನುಡಿದಿತ್ತು:
'ಕೇಳೇನು ಇನ್ನೊಂದು ಗಳಿಗೆ.')**

**'ಹೋದ ಹುಣ್ಣಿಮೆಯಲ್ಲಿ ಹೊನ್ನೂರ ಗಡಿಯಲ್ಲಿ
ನಾ ಕಂಡ ಹುಡುಗ ಏನೆಂದ?'
ಯಾವ ಸೀಮೆಯ ಗಂಡೊ ಅವ ಹೊದ್ದ ಹೊಸ ವಲ್ಲಿ
ನೆಲತನಕ ಬಿತ್ತು ಹೆಗಲಿಂದ.**

**ಬಿದ್ದ ವಲ್ಲಿಯನೆತ್ತಿ ಸರಿಪಡಿಸಿಕೊಂಡಾನೆ, –**
**ನನ್ನನ್ನೆ ನೋಡಿ ನಕ್ಕಾನೆ?**
**ಇನ್ನವನು ಬಿಟ್ಟಾನೆ?**
**ಅವನಂಥ ಹುಡುಗ ಸಿಕ್ಕಾನೆ?**

ಅಕ್ಕತಂಗಿಯರ ಆ ಹಾಡಿನ ಈ ಸಾಲುಗಳನ್ನು ಹಾಡಿ ಹಾಡಿ ಪೂರ್ತಿ ನನ್ನದಾಗಿ ಮಾಡಿಕೊಂಡಿದ್ದೆ. ಕಾಲ ಮುಂದುವರಿದು ನನ್ನ ಮದುವೆಯ ದಿನ ಬಂತು. ಬೆಂಗಳೂರಿನ ನರಸಿಂಹರಾಜ ಕಾಲೋನಿಯ ಶ್ರೀ ರಾಮಮಂದಿರದಲ್ಲಿ ಹಸೆ ಮಣೆಯ ಮೇಲೆ ರಾಜು ಎದುರಿಗೆ ನಿಂತಿದ್ದೆ. ಶುಭ ಮುಹೂರ್ತ ಸಮೀಪಿಸುತ್ತಿದ್ದಂತೆ, ಯಾರೋ ನನ್ನ ಹೆಸರಿಗೆ ಅಂಚೆಯಲ್ಲಿ ಬಂದಿದ್ದ ಕಿರು ಕಾಗದವನ್ನು ನನ್ನ ಕೈಗಿತ್ತರು. ಕಂಪಿಸುವ ಕೈಗಳಿಂದ ಅದನ್ನು ತೆರೆದು ಓದಿದೆ. ಇನ್ನೇನು ಪ್ರಾರಂಭವಾಗಲಿದ್ದ ನಮ್ಮ ಹೊಸ ಸಹಬಾಳ್ವೆಗೆ ಶುಭ ಹಾರೈಸಿ ರಾಜು ಬರೆದ ಕಾಗದ ಅದಾಗಿತ್ತು! ರಾಜು ನನ್ನನ್ನು ನೋಡಿ ನಸುನಕ್ಕರು. ಅದುವರೆಗೂ ನನ್ನ ಕಲ್ಪನಾಲೋಕದಲ್ಲಿ ವಿಹರಿಸುತ್ತಿದ್ದ ಆ ಹುಡುಗ ಆ ಕ್ಷಣದಲ್ಲಿ ನನಗೆ ಸಿಕ್ಕಿಬಿಟ್ಟಿದ್ದ!



# ಭಾವಕ್ಕೆ ಜೀವ ತುಂಬಿದ ಭಾವಜೀವಿ – ರಾಜು ಭಾವ

ಎಲ್. ಜಿ. ಜ್ಯೋತೀಶ್ವರ

ತುಟಿಯ ಕೊನೆಯಲ್ಲಿ ಇದೆಯೋ ಇಲ್ಲವೋ ಎನ್ನುವಂಥ ಕಿರುನಗೆಯ ಹಸನ್ಮುಖಿ. ಸ್ವಲ್ಪ ಹೆಚ್ಚೇ ಎನ್ನಬಹುದಾದ ರಾಜಗಾಂಭೀರ್ಯ. ಕಿವಿಗೊಟ್ಟು ಕೇಳಬೇಕು ಎನ್ನುವಂಥ ಮೃದು ಮಾತು. ಆಗಾಗ ಯಾವುದಾದರೊಂದು ಹಾಡನ್ನು ಗುನುಗುಡುತ್ತಿದ್ದರು. ಅನೇಕ ಜೀವ–ಭಾವಗಳ, ಸಂತೋಷ, ಸದ್ಗುಣಗಳ ಸಂಗಮ, ನನ್ನ ಪ್ರಿಯ ಭಾವ, ಎಚ್. ವೈ. ರಾಜಗೋಪಾಲ್. ಅವರನ್ನು ಮದುವೆಯಾದ ನನ್ನ ಅಕ್ಕ ವಿಮಲಳೂ ಸೇರಿದಂತೆ, ಎಲ್ಲರೂ ಅವನನ್ನು ಪ್ರೀತಿಯಿಂದ 'ರಾಜೂ' ಎಂದು ಕರೆಯುತ್ತಿದ್ದರು.

ರಾಜು ಭಾವನ ಮನೆಯಲ್ಲಿ ನನ್ನನ್ನು ಬಹಳವಾಗಿ ಆಕರ್ಷಿಸಿದ್ದು ಅವರ ತಾಯಿ ಸರಸ್ವತಮ್ಮ. ಮೈಸೂರಿಗೆ ಹೋಗಿದ್ದಾಗ, ನಾನಿನ್ನೂ ೩–೪ ವರ್ಷದ ಚಿಕ್ಕ, ಆದರೆ ಭಾರೀ ತುಂಟ ಹುಡುಗ, ನನ್ನ ಅಕ್ಕಂದಿರ ಪ್ರಕಾರ ಅಲ್ಲಿದ್ದ 'ಜಾನಿ' ಅಚ್ಚ ಬಿಳಿ ಬಣ್ಣದ ನಾಯಿಯ ಮೇಲೆ ನಾನು ಸವಾರಿ ಮಾಡುತ್ತಿದ್ದೆ. ಭಾರೀ ಸಂಭ್ರಮದಿಂದ ಅದನ್ನು ನಾವು ಆಗ ಇದ್ದ ಎನ್. ಆರ್. ಕಾಲೋನಿಯ ಮನೆಗೆ ತಂದು 'ಹುಲಿಯ' ಎಂದು ಹೆಸರಿಟ್ಟಿದ್ದೆ. ಒಂದು ದಿನ ಬೆಳಿಗ್ಗೆ ಎದ್ದಾಗ, ಅಮ್ಮ ಪಕ್ಕದಲ್ಲೇ ಕುಳಿತು ನನ್ನನ್ನು ತಡವುತ್ತಾ 'ಹುಲಿಯ ಹೋಗಿಬಿಟ್ಟೋ' ಎಂದಾಗ, ಅತ್ತು, ರಂಪ ಮಾಡಿದ್ದು ನೆನಪಿದೆ. ಪಾಪ ತಟ್ಟೆಯಲ್ಲಿದ್ದ ಗಾಜಿನ ಚೂರನ್ನು ನುಂಗಿದ್ದೇ ಕಾರಣ.

ರೈಲಿನಲ್ಲಿ ಅಮ್ಮ ವೀಣನ ಜೊತೆ ಹೈದರಾಬಾದಿಗೆ ಹೋಗಿದ್ದ ಮಸುಕು ಮಸುಕು ನೆನಪು. ಅಲ್ಲಿಂದ ಭಾವ ಇದ್ದ ವಾರಂಗಲ್ಲಿಗೆ ಹೋದಾಗ, ಪಕ್ಕದ ಮನೆಯಲ್ಲಿ ಉಯ್ಯಾಲೆ ಆಡುತ್ತಿದ್ದೆ. ಅಲ್ಲಿ ಆಡುತ್ತಿದ್ದ ಹುಡುಗ ನನಗೆ ಬೇಗ ಆಡಲು ಬಿಡಲಿಲ್ಲ ಎಂದು ಆ ಹುಡುಗನನ್ನೇ ಕೆಳಕ್ಕೆ ತಳ್ಳಿ ಆಡಿದ್ದೆ. ಭಾವ ನನ್ನನ್ನು ಎತ್ತಿ ಆಡಿಸುತ್ತಿದ್ದ ನೆನಪೂ ಇದೆ. ನಾನು ಹೋಗುತ್ತಿದ್ದುದು ಕೃಷ್ಣರಾವ್ ಪಾರ್ಕ್ ಬಳಿ ಇದ್ದ 'ಹೋಂ ಸ್ಕೂಲ್'. ಪ್ರಿನ್ಸಿಪಾಲ್ ಆಗಿದ್ದ ಮಿಸ್ ಮಾದಪ್ಪ ಕೂರ್ಗಿ. ಅತಿ ಶಿಸ್ತಿನ, ಒಂಥರಾ ಟೆರರ್ ಟೆರ್ರಿಯರ್. ಪ್ರಭಾವ ಶಾಲಿ, ಹಣವಂತರ ಮನೆಯಿಂದ ಬರುತ್ತಿದ್ದ ಮಕ್ಕಳ ಪಕ್ಷ ವಹಿಸಿ ನನಗೆ ಸುಮ್ಮನೆ ಶಿಕ್ಷೆ ಕೊಡುತ್ತಿದ್ದರು. ಅದೆಲ್ಲಾ ಆ ಚಿಕ್ಕ ವಯಸ್ಸಿನಲ್ಲಿ ಹೇಗೆ ಗೊತ್ತಾಗಬೇಕು? ಬೆಳೆದ ನಂತರ ಅರ್ಥವಾಯಿತು. ನಮ್ಮ ಮನೆಗೆ ಸದಾ ಲೇಖಕರ ದಂಡೇ ನಮ್ಮ ತಂದೆ ಎಲ್. ಗುಂಡಪ್ಪನವರನ್ನು ಕಾಣಲು ಬರುತ್ತಿತ್ತು. ಸಹಜವಾಗಿಯೇ ನನ್ನ ಮೇಲೂ ಪರಿಣಾಮ ಬೀರಿತು. ಪ್ರಶ್ನೆ ಕೇಳುವ ಅಭ್ಯಾಸ ತಾನಾಗಿ ಬೆಳೆಯಿತು. ಇದು ಅರ್ಥವಾಗದೆ, ಟೀಚರುಗಳು ನನಗೆ ಉತ್ತರ ಹೇಳಲು ತೋಚದೆ, ಮಿಸ್ ಮಾದಪ್ಪ ಅವರಿಗೆ ದೂರುತ್ತಿದ್ದರು. ಅವರು ಮನೆಯವರನ್ನು ಕರೆಸುತ್ತಿದ್ದರು. ಒಮ್ಮೆ ಅಮ್ಮ ಬಂದು, ಮಾದಪ್ಪನವರ ಇಂಗ್ಲಿಷ್ ಅರ್ಥವಾಗದೆ, ಮಾದಪ್ಪ ಅಮ್ಮನನ್ನು ಜರಿದು, ನನಗೆ ಸಿಟ್ಟು ಬಂದಿತ್ತು. ಆಗ ವಿಮಲಕ್ಕ ಮಹಡಿ ಮೇಲೆ ಹತ್ತಿ ಬಂದು ನನ್ನ ಕ್ಲಾಸ್ ಟೀಚರ್ ಹತ್ತಿರ ಮಾತನಾಡಿ, ನನ್ನನ್ನು ಸಮಾಧಾನಪಡಿಸಿದ್ದಳು. ಆಗ, ಅವಳು ಮಾಧವಿಯನ್ನು ಹೊತ್ತಿದ್ದಳು.

ರಾಜು ಭಾವನ ಅಣ್ಣ ಶ್ರೀ ಶಾರದಾಪ್ರಸಾದ್ ನನಗೆ ತುಂಬಾ ಇಷ್ಟವಾಗಿಬಿಟ್ಟರು. ಅವರ ಮಾತಿನ ಶೈಲಿ, ಗಾಂಭೀರ್ಯ, ಶ್ರೀಮತಿ ಇಂದಿರಾಗಾಂಧಿ ಅವರ ಪತ್ರಿಕಾ ಕಾರ್ಯದರ್ಶಿ ಎನ್ನುವ ವಿಚಾರ – ಎಲ್ಲ ಸೇರಿ ಅವರ ಬಗ್ಗೆ ಗೌರವ ಹೆಚ್ಚಿಸಿದ್ದವು. ನಾನು ಕೇಳುತ್ತಿದ್ದ ಹಲವು ಪ್ರಶ್ನೆಗಳಿಗೆ ನಗುನಗುತ್ತಲೇ ಉತ್ತರಿಸುತ್ತಿದ್ದರು. ವಿಮಲಕ್ಕ-ಭಾವ ೬೨-೬೩ರಲ್ಲಿ ಬಂದಾಗ, ಮನೆಯ ತುಂಬಾ ಹಸು-ಕರುಗಳು. ಆಗತಾನೇ ಕರು ಹಾಕಿದ್ದ ಭವಾನಿ-ಗಂಗೆಯರ ಗಿಣ್ಣು ಹಾಲನ್ನು 'ಟಿ' ಬ್ಲಾಕ್‌ನಲ್ಲಿದ್ದ ಸರಸ್ವತಮ್ಮನವರ ಮನೆಗೆ ಸೈಕಲ್ ಮೇಲೆ ಕೊಂಡೊಯ್ದು ತಲುಪಿಸುತ್ತಿದ್ದೆ. ಛಳೀಲಿ ಯಾಕಪ್ಪಾ ಬಂದೆ? ಎನ್ನುತ್ತಲೇ ಸರಸ್ವತಮ್ಮನವರು ಹಾಲು, ಕಲ್ಲು ಸಕ್ಕರೆ, ದ್ರಾಕ್ಷಿ ಎಲ್ಲ ಕೊಡುತ್ತಿದ್ದರು.

ಆಗ ಚೇತನಾ, ಶ್ರೀರಾಂ ತುಂಬಾ ಪುಟ್ಟ ಮಕ್ಕಳು. ಚೇತನಾ ಮೊದಲು ಕಪ್ಪೆಯಂತೆ ಮಲಗಿ, ನಂತರ ಅವಳು ಶ್ರೀರಾಂ ಇಬ್ಬರೂ ನನ್ನನ್ನು ತಬ್ಬಿ ಮಲಗುತ್ತಿದ್ದರು. ಶ್ರೀರಾಂ ನನ್ನ ಭುಜದ ಮೇಲೆ ಸವಾರಿ ಮಾಡಿ, ಸಂತೋಷಪಟ್ಟು, 'ಜ್ಯೋತಿ ಮಾವ, ಪಂಚಮೀ ಆನ್ ದಿ ಬೆನ್ನು ಆಫ್ ದಿ ಹಸು' ಅಂತ ಬಾಲ ಭಾಷೆಯಲ್ಲಿ ಮುದ್ದಾಗಿ ಹೇಳುತ್ತಿದ್ದ.

ನಾನು ಐದನೆಯ ಅಥವಾ ಆರನೆಯ ಕ್ಲಾಸ್‌ನಲ್ಲಿ ಇದ್ದಾಗ, ಭಾವ ತಾವು ಚಿಕ್ಕ ಹುಡುಗರಾಗಿದ್ದಾಗ, ಅವರಿಗೆ ಬಹುಮಾನವಾಗಿ ಬಂದಿದ್ದ ನಾಲ್ಕು ವಿಜ್ಞಾನದ



ಪುಸ್ತಕಗಳನ್ನು ನನಗೆ ಕೊಟ್ಟರು. ತುಂಬಾ ಚೆನ್ನಾಗಿದ್ದವು. ಅವನ್ನು ನನ್ನ ಮಕ್ಕಳು ಅಭಿನಂದನ–ಅಖಿಲೇಶರಿಗೆ ಕೊಟ್ಟೆ. ಭಾವನ ಹಸ್ತಾಕ್ಷರದೊಡನೆ ಅವು ಇಂದಿಗೂ ಜೋಪಾನವಾಗಿ ನಮ್ಮ ಬಳಿ ಇವೆ.

ವಿಮಲಾ ಅಕ್ಕ–ರಾಜು ಭಾವ ಒಟ್ಟಿಗೆ ಮಾತಾಡಲು ಕುಳಿತರೆಂದರೆ, ಅದೊಂದು ನುಡಿಹಬ್ಬದ ಸುಗ್ಗಿ. ಸುಮಿತ್ರ, ವಿಮಲ, ಕಮಲ ಹಾಡುತ್ತಿದ್ದರೆ, ರಾಜು ಭಾವ ಮೆಲ್ಲನೆ 'ತಂಬುಲದ ತುಟಿಯ ತೋರೆ' ಎನ್ನುವ ಹಾಡನ್ನು ಹಾಡಲು ಪ್ರಾರಂಭಿಸುತ್ತಿದ್ದರು. ವಿಮಲಾ, ಭಾವ ಒಟ್ಟಿಗೆ ಹಾಡುವಾಗ, ಮಂತ್ರಮುಗ್ಧವಾಗಿ ಕೇಳುತ್ತಿದ್ದೆ. ತುಂಬಾ ಅದ್ಭುತ ಅನುಭವ.

ಆಗಾಗ, ಮಾತಿನ ನಡುವೆ, ಭಾವ ಮೆತ್ತಗೆ ಒಂದು ಹಾಸ್ಯ ಚಟಾಕಿ ಹಾರಿಸುತ್ತಿದ್ದರು. ಅದು ಜೋಕ್ ಎಂದು ಅರ್ಥವಾಗದ ವಿಮಲ, ಅದರ ಪಾಂಡಿತ್ಯಪೂರ್ಣ ವಿಶ್ಲೇಷಣೆಗೆ ತೊಡಗಿ, ಜೋಕ್ ಎಗರಿಹೋಗುತ್ತಿತ್ತು. ವಿಮಲಳಿಗೆ ಅರ್ಥವಾಗಿ, ನಕ್ಕಾಗ, ಭಾವನ ತುಂಟ ನಗುವೇ ಉತ್ತರ. ರಾಜು ಭಾವನಿಗೆ ಪಿಎಚ್.ಡಿ. ಬಂದಾಗ, ನಮಗೆಲ್ಲಾ ತುಂಬ ಹೆಮ್ಮೆ. ಅದರ ಉಪಯೋಗದಿಂದ ಅಮೆರಿಕಾದ ಒಂದು ಡ್ಯಾಮ್‌ನ ಸಮಸ್ಯೆ ಪರಿಹಾರ ಆಯಿತು ಎಂದು ನಂತರ ಗೊತ್ತಾಯಿತು.

ಭಾವ ಯಾವಾಗ ಬಂದರೂ ನನಗೆ ಇಷ್ಟವಾದ ವಸ್ತು ಕೊಡುತ್ತಿದ್ದರು. ಟೀನೇಜರ್ ಆದ ಮೇಲಂತೂ, ಅವರಿಗೆ ಫ್ಲೈಟ್‌ನಲ್ಲಿ ಸಿಗುತ್ತಿದ್ದ ಟಾಯ್ಲೆಟ್ ಕಿಟ್, ಶೇವಿಂಗ್ ಲೋಷನ್, ಯೂ–ಡಿ–ಕಲೋನ್ ನನಗೇ ಮೀಸಲು. ತಪ್ಪದೇ ಕರೆದು ಕೊಡುತ್ತಿದ್ದರು. ಭಾವನ ಅಚ್ಚುಕಟ್ಟು ನನಗೆ ಬೆರಗಿನ, ಅಷ್ಟೇ ಮುಜುಗರದ ವಿಷಯ. 'ಯಾಕೆ ಇಷ್ಟೊಂದು ಪರ್ಟಿಕ್ಯುಲರ್ ಆಗಿ ಫಸ್ ಮಾಡ್ತೀರಿ?' ಎಂದು ಕೇಳುತ್ತಿದ್ದೆ. ಸ್ವಲ್ಪವೂ ಬೇಜಾರು, ಕೋಪ ಮಾಡಿಕೊಳ್ಳದೇ ಉತ್ತರಿಸಿ, ವಿವರಿಸುತ್ತಿದ್ದರು. ನಾನು ಒಬ್ಬ ಜೆಂಟಲ್‌ಮನ್ ಆಗಲು ತುಂಬಾ ಪ್ರಭಾವ ನನ್ನ ಮೇಲೆ ಬೀರಿದರು.

ಭಾವನ ಹಾಸ್ಯ ತುಂಬಾ ನವಿರು. ಥಕ್ಕನೆ ಅದರ ಅರ್ಥ, ಗುರಿ ಹೊಳೆಯುತ್ತಿರಲಿಲ್ಲ. ಅರ್ಥವಾದಾಗ, ನಗೆ ಬಾಂಬು ಗ್ಯಾರಂಟಿ. ಭಾವನನ್ನು ಊರು ತುಂಬಾ ಸುತ್ತಿಸುತ್ತಿದ್ದುದು ಕೂಡಾ ಮಜದ ಅನುಭವ. ಪ್ರತಿ ಬಾರಿಯೂ ತಪ್ಪದೇ ಮೈಸೂರಿನಲ್ಲಿರುವ ಅವರ ತಂಗಿ ನೀರಜಕ್ಕನ ಮನೆಗೆ ಹೊರಡುತ್ತಿದ್ದರು. ನೀರಜಕ್ಕ ಅವರ ಹಾಡಿಕೆಯೂ, ಅಪರೂಪಕ್ಕೆ ಕೇಳಲು ಅವಕಾಶ ಸಿಕ್ಕಾಗ ತುಂಬಾ ಉಲ್ಲಾಸದಾಯಕ. ಆ ರೀತಿ ಅವರು ಹೊರಟಾಗ, ಭಾವನಿಗೆ ನಾನೇ ಆಟೋ, ಟ್ಯಾಕ್ಸಿ ಹಿಡಿದುಕೊಡುತ್ತಿದ್ದೆ.

ಬರಬರುತ್ತಾ ಭಾವನ ಕನ್ನಡ ಸೇವೆ, ಸಂಘಟನಾ ಚಾತುರ್ಯ, ಇಂಡಸ್‌ನ ಸ್ಥಾಪನೆ, ವಿಮಲನ ಜೊತೆ ಹಾಡಾಟ, ಓಡಾಟ, ಬರಹ, ಎಲ್ಲವೂ ತುಂಬಾ ಸಂತೋಷದ

ನೆನಪಿನ ಗರಿಗಳು. ನನ್ನ ಮತ್ತು ರಂಜನಿಯ ಮದುವೆಗೆ ವಿಮಲಕ್ಕ– ಭಾವ ಕಳಿಸಿದ ಗ್ರೀಟಿಂಗ್ ತುಂಬಾ ಸೊಗಸಾಗಿದ್ದು, ನಮಗಿಬ್ಬರಿಗೂ ತುಂಬಾ ಸಂತೋಷ, ಸ್ಫೂರ್ತಿ ಕೊಟ್ಟಿದೆ. ಭಾವ ಬಂದಾಗಲೆಲ್ಲಾ ಕಮಲನ ಕೈಲಿ ಹುರಿಗಾಳು, ಕೋಡುಬಳೆ, ಎಲ್ಲಾ ಕೇಳಿ ಮಾಡಿಸಿಕೊಂಡು, ಮಗುವಿನ ಖುಷಿಯಿಂದ ಎಂಜಾಯ್ ಮಾಡುತ್ತಾ ತಿನ್ನುತ್ತಿದ್ದರು.

ಭಾವ ತಮ್ಮ ನೋವನ್ನೆಲ್ಲಾ ಸ್ವಲ್ಪವೂ ಹೇಳಿಕೊಳ್ಳದೇ ಇದ್ದದ್ದು ಅತ್ಯಂತ ಆಶ್ಚರ್ಯಕರ ವಿಷಯ. ಕಳೆದ ಕೆಲವು ಬಾರಿ ಬಂದಿದ್ದಾಗ, ತಮಗೆ ಇದ್ದ ತೊಂದರೆ, ನೋವು, ಜ್ವರ, ಇನ್‌ಫೆಕ್ಷನ್, ಯಾವುದನ್ನೂ ಒಂದು ಬಾರಿಯೂ ಹೇಳಿಕೊಳ್ಳಲೇ ಇಲ್ಲ. ಇದು ನನಗೆ ಒಂದು ಅರ್ಥೈಸಲಾಗದ ಆಶ್ಚರ್ಯ. ಭಾವನ ಬಗ್ಗೆ ತುಂಬಾ ಹೆಮ್ಮೆ ಎನ್ನಿಸುವ ವಿಚಾರ– ಅವರು ಕಡೆಯವರೆಗೂ ಭಾರತೀಯ ಪೌರತ್ವವನ್ನು ಬಿಟ್ಟುಕೊಡದೇ ಇದ್ದದ್ದು. ಅವರು ಭಾರತಕ್ಕೆ ವಾಪಸ್ ಬಂದು ತಮ್ಮ ಮೇಧಾವಿತನದ ಲಾಭವನ್ನು, ಐಐಟಿ, ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್, ಅಥವಾ ಭಾರತದ ಯಾವುದಾದರೂ ಉನ್ನತ ತಾಂತ್ರಿಕ ಸಂಸ್ಥೆ – ಇಲಾಖೆಗೆ ನೀಡಿದ್ದರೆ, ಮುಂದಿನ ಪೀಳಿಗೆಗೆ ತುಂಬಾ ಲಾಭ ಆಗಿರುತ್ತಿತ್ತು ಎನ್ನುವುದು ನಿಸ್ಸಂದೇಹ.

ಅದ್ಭುತ ಸಾಧಕ, ಸ್ನೇಹಮಯಿ, ಮೇಧಾವಿ ತಂತ್ರಜ್ಞಾನಿ, ಅಮೆರಿಕದ ಕನ್ನಡಿಗ, ಹೊರನಾಡಿನಲ್ಲಿ ಬದುಕಿದರೂ, ಅಲ್ಲೇ ಕನ್ನಡದ ಕಂಪನ್ನು ವಿಸ್ತಾರವಾಗುವಂತೆ ಹರಡಿದ ಕನ್ನಡದ ಡಿಂಗರಿಗ...

ರಾಜು ಭಾವ ಒಳ್ಳೆಯ ಭಾವನೆಗಳಿಗೆ ಅಭಾವವೇ ಇಲ್ಲದ ಅದ್ಭುತ ಭಾವ! ಅವರ ನೆನಪು, ಜೀವನ ಸಂದೇಶ ಅವಿನಾಭಾವ! ಕ್ಯಾನ್ಸರ್ ಅವರನ್ನು ಕರೆದರೂ, ಅವರ ನೆನಪನ್ನು ಅಳಿಸಲಾಗುವುದಿಲ್ಲ! ಅಂಥ ಮಧುರ ಭಾವ, ಇನ್ನಿಲ್ಲ... ಯಾಕಿಲ್ಲ? ನಮ್ಮ ನೆನಪುಗಳಲ್ಲೇ ಹಸಿರಾಗಿದ್ದಾರಲ್ಲ!

ರಾಜು ಭಾವ, ಐ ಮಿಸ್ ಯೂ, ಐ ಲವ್ ಯೂ!

ನೀವೊಂದು ಬೆಚ್ಚನೆಯ ನೆನಪು, ಬಾಳಿಗೆ ಹೊಳಪು!!

■

# ವಿಮಲ-ರಾಜಗೋಪಾಲ್

**–ಡಾ. ಎಲ್. ಜಿ. ಸುಮಿತ್ರ**

ನನ್ನ ತಂಗಿ ವಿಮಲ ವಿಜಯವಾಡ ರೇಡಿಯೋ ಸ್ಟೇಷನ್‌ನಲ್ಲಿ 'ಟ್ರಾನ್ಸ್‌ಮಿಷನ್ ಎಕ್ಸಿಕ್ಯೂಟಿವ್' ಆಗಿ ಕೆಲಸ ಮಾಡುತ್ತಿದ್ದಾಗ, ಅವಳ ಮದುವೆ ಗೊತ್ತಾಯಿತು. ಆಗ ರಾಜಗೋಪಾಲ್ ವಾರಂಗಲ್ಲಿನ ರೀಜನಲ್ ಎಂಜಿನಿಯರಿಂಗ್ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದರು. ಅವರಿಬ್ಬರ ಮದುವೆ ಗೊತ್ತಾದ ಮೇಲೆ, ದೆಹಲಿಯಲ್ಲಿ ಉನ್ನತ ಹುದ್ದೆಗಳಲ್ಲಿದ್ದ ರಾಜಗೋಪಾಲ್‌ರ ಅಣ್ಣಂದಿರು ಮದುವೆಗೆ ಬರಲು ಅನುಕೂಲ–ವಾಗುವಂತೆ ಆರು ತಿಂಗಳು ಕಾಯ್ದು ಮದುವೆ ನಡೆಯಿತು. ಎಲ್ಲರೂ ಇದು 'ಲವ್ ಮ್ಯಾರೇಜೋ?' ಎಂದು ಕೇಳುತ್ತಿದ್ದರು. ರಾಜಗೋಪಾಲ್ ಮತ್ತು ಅವರ ಮನೆಯವರೆಲ್ಲ ನವಿರಾದ ಹಾಸ್ಯ ಪ್ರವೃತ್ತಿಯವರು. ಅವರು ನಕ್ಕು 'Arranged Love Marriage' ಎಂದು ಹೇಳುತ್ತಿದ್ದರು. ಇದರ ಕತೆಯನ್ನು ವಿಮಲ ಸ್ವಾರಸ್ಯವಾಗಿ ಹೇಳುವಳು. ಆ ಕತೆ ಹೀಗಿದೆ. ನನ್ನ ತಂದೆ ವಿಮಲಳಿಗೆ ರಾಜಗೋಪಾಲರನ್ನು ಕೇಳಿ ಅವರ ತಂದೆ ಯೋಗಾನರಸಿಂಹಂ ಅವರಿಗೆ ಪತ್ರ ಬರೆದರು. ಯೋಗಾನರಸಿಂಹಂ ಅವರು ನಮ್ಮ ತಂದೆಗೆ ಮರುಪತ್ರ ಬರೆದು ಅವರಿಬ್ಬರೂ ಒಬ್ಬರನ್ನೊಬ್ಬರು ನೋಡಿ ಒಪ್ಪಿದರೆ ತಾವೂ ಸರಸ್ವತಮ್ಮನವರೂ ನಂತರ ವಿಮಲನನ್ನು ಭೇಟಿ ಮಾಡಿ ಪರಿಚಯ ಮಾಡಿಕೊಳ್ಳುವು–ದಾಗಿಯೂ, ಮದುವೆ ಆಗುವ ವಿಷಯ ಅವರಿಬ್ಬರಿಗೇ ಬಿಟ್ಟಿದ್ದೆಂದೂ ತಿಳಿಸಿದರು.

ಅವರ ಸಂಸಾರದಲ್ಲಿ ಮಕ್ಕಳಿಗೆ ತಮ್ಮದೇ ಆದ ನಿರ್ಧಾರಗಳನ್ನು ತೆಗೆದುಕೊಳ್ಳುವ ಸ್ವಾತಂತ್ರ್ಯ ಇದ್ದಿತು. ನಮ್ಮ ತಂದೆ ವಾರಂಗಲ್ಲಿಗೆ ಹೋಗಿ ರಾಜಗೋಪಾಲರನ್ನು ಕಂಡು ಮಾತಾಡಿ ಬಂದರು. ರಾಜಗೋಪಾಲ್ 'ವಿಜಯವಾಡಕ್ಕೆ ಹೋಗಿ ವಿಮಲಳನ್ನು ಭೇಟಿ ಮಾಡಲು ತಮ್ಮ ಒಪ್ಪಿಗೆ ಇದೆ', ಎಂಬುದನ್ನು ಸೂಚಿಸಿ ಬಂದರು.

ವಿಮಲ 'ಪೊನ್ನಮ್ಮ ತೋಟ' ಎಂಬ ಬಡಾವಣೆಯಲ್ಲಿ ನರಸಿಂಹಮೂರ್ತಿ ಎನ್ನುವವರ ಮನೆಯಲ್ಲಿ ಬಾಡಿಗೆಗೆ ಇದ್ದಳು. ರಾಜಗೋಪಾಲರು ತಾವು ಅವಳನ್ನು ಭೇಟಿಮಾಡಲು ಬರುವುದಾಗಿ ಕಾಗದ ಬರೆದಿದ್ದರೆಂದು ಕಾಣುತ್ತದೆ. ಅವರು ಬರುವ ಸಮಯ ಅವಳಿಗೆ ಗೊತ್ತಿರಲಿಲ್ಲ. ಅವಳು ರೇಡಿಯೋ ಸ್ಟೇಷನ್ನಿನಲ್ಲಿ ಕೆಲಸದ ಮೇಲೆ ಇದ್ದಾಗ ರಾಜಗೋಪಾಲ್ ಅವಳ ಮನೆಗೆ ಹೋಗಿದ್ದಾರೆ. ಅವಳು ಸಿಕ್ಕಿಲ್ಲ. ನಂತರ ವಿಮಲಳನ್ನು ಹುಡುಕಿಕೊಂಡು ಹೊರಟಾಗ ಅವಳು ಹಣ್ಣು ಕೊಂಡುಕೊಳ್ಳಲು ಹೋಗುತ್ತಿದ್ದ ಗಾಡಿಯನ್ನು ಹಿಂಬಾಲಿಸಿದ್ದಾರೆ; ಅವಳ ಫೋಟೋವನ್ನು ನಮ್ಮ ತಂದೆ ಅವರಿಗೆ ಕೊಟ್ಟಿದ್ದರಲ್ಲ. ವಿಮಲ, 'ಇದು ಯಾರಪ್ಪ ಹೀಗೆ ಹಿಂಬಾಲಿಸುವವರು' ಎಂದು ಬೇಗ ಬೇಗ ಹೊರಟಿದ್ದಾಳೆ. ಕೊನೆಗೂ ಇಬ್ಬರಿಗೂ ಭೇಟಿ ಆಗಿದೆ. ನಂತರ, ವಿಮಲ ಮನೆಗೆ ಬಂದಾಗ ಮನೆಯ ಯಜಮಾನಿ 'ವಿಮಲ, ಯವಡೋ Insurance ಅಬ್ಬಾಯಿ ವಚ್ಚಾಡು' ಎಂದು ಹೇಳಿದ್ದಾರೆ. ಇದು ನಾಂದಿ. ಕೊನೆಗೂ Insurance ಅಬ್ಬಾಯಿಯನ್ನು ಅವಳು ಮದುವೆಗೆ ಒಪ್ಪಿದ್ದು ಇತಿಹಾಸ.

ಮದುವೆಗೆ ಆರು ತಿಂಗಳು ಕಾಯಬೇಕಾಯಿತು. ಆ ಸಮಯದಲ್ಲಿ ನಾನು ಹೈದರಾಬಾದಿನ ಆಕಾಶವಾಣಿಯಲ್ಲಿ Programme Executive ಆಗಿ ಕೆಲಸ ಮಾಡುತ್ತಿದ್ದೆ. ವಿಮಲ, ರಾಜಗೋಪಾಲರು ಒಬ್ಬರನ್ನೊಬ್ಬರು ಭೇಟಿಯಾಗಲು ವಿಮಲ ನಮ್ಮ ಮನೆಗೆ ಬರುವಳು. ರಾಜಗೋಪಾಲರು ಬೇರೆಲ್ಲೋ ಇಳಿದುಕೊಳ್ಳುವರು. ಆ ಕಾಲದಲ್ಲಿ ಇದೇ ಹೆಚ್ಚು ಮುಂದುವರಿದ ನಡವಳಿಕೆ. ಆ ಸಮಯದಲ್ಲಿ ರಾಜಗೋಪಾಲರ ಸೌಜನ್ಯಯುತ, ವಿಶ್ವಾಸಪೂರ್ವಕ ನಡವಳಿಕೆ ತುಂಬ ಮೆಚ್ಚಿಗೆಯಾಯಿತು. ಹೀಗೇ ವಿಮಲ, ನನ್ನ ಚಿಕ್ಕ ತಂಗಿಯನ್ನು ಜೊತೆ ಮಾಡಿಕೊಂಡು ಹೋಗಿ ಮೈಸೂರಿನಲ್ಲಿದ್ದ ಯೋಗಾನರಸಿಂಹಂ ಅವರನ್ನು, ಸರಸ್ವತಮ್ಮನವರನ್ನು ಕಂಡು ಅವರ ಆಶೀರ್ವಾದ ಪಡೆದುಕೊಂಡು ಬಂದಳು. ಅವರ ಔದಾರ್ಯ, ಅವರ ಮನೆಯವರೆಲ್ಲರ ವಿಶ್ವಾಸಪೂರ್ವಕ ನಡವಳಿಕೆಯನ್ನು ವಿಮಲ ಮಾತ್ರ ಅಲ್ಲ, ಆಗ ತುಂಬ ಚಿಕ್ಕವಳಾಗಿದ್ದ ನನ್ನ ತಂಗಿ ವೀಣ ಕೂಡ ಇಂದಿಗೂ ಜ್ಞಾಪಿಸಿಕೊಳ್ಳುತ್ತಾಳೆ. ಅಪರೂಪವಾದ ಈ ನಡವಳಿಕೆಗಳೆಲ್ಲ ನಮ್ಮ ಬಳಗದಲ್ಲಿ ಅಚ್ಚರಿ, ಅಭಿಮಾನಗಳನ್ನು ಮೂಡಿಸಿದವು.



-೨-

ವಿಮಲ ಇನ್ನೂ ಕಾಲೇಜಿನಲ್ಲಿ ಓದುತ್ತಿದ್ದಾಗ, ಬೆಂಗಳೂರಿನ ಆಕಾಶವಾಣಿಯಲ್ಲಿ ಶ್ರೀ ಯೋಗಾನರಸಿಂಹಂ ಅವರು ಸಂಸ್ಕೃತ ಕಾರ್ಯಕ್ರಮಗಳಿಗೆ Chief Producer ಆಗಿದ್ದರು. ಅವುಗಳಲ್ಲಿ ನಮ್ಮ ತಂದೆ ಶ್ರೀ ಎಲ್. ಗುಂಡಪ್ಪನವರ ನಾಟಕದ ಸರಣಿ 'ಭಾಸನ ಏಕಾಂಕ ನಾಟಕ'ಗಳಲ್ಲಿ ಒಂದಾದ 'ಪ್ರತಿಜ್ಞಾ ಯೌಗಂಧರಾಯಣ' ಪ್ರಸಾರವಾದಾಗ, ಆಕಾಶವಾಣಿಯ ಕಲಾವಿದೆಯಾಗಿ ವಿಮಲ ವಾಸವದತ್ತೆಯ ಪಾತ್ರ ಮಾಡಿದ್ದಳು. ಮತ್ತು ಅದೇ ನಾಟಕದಲ್ಲಿ ಶ್ರೀ ಯೋಗಾನರಸಿಂಹಂರವರು ಯೌಗಂಧರಾಯಣನ ಪಾತ್ರವನ್ನು ವಹಿಸಿದ್ದರು. ಆದರೆ, ಅವರೇ ಮುಂದೆ ತನ್ನ ಮಾವ ಆಗುವವರು ಎಂದು ವಿಮಲಳಿಗೆ ಗೊತ್ತಿರಲಿಲ್ಲ.

ವಿಮಲ ರಾಜಗೋಪಾಲರ ಮದುವೆ ಬೆಂಗಳೂರಿನಲ್ಲಿ ನಡೆಯಿತು. ಯಾವ ಆಡಂಬರವೂ ಇಲ್ಲದೆ, ಕೊಡು-ಕೊಳ್ಳುವ ಯಾವ ಮಾತೂ ಇಲ್ಲದೆ, ಸರಳವಾಗಿ ನಡೆಯಲಿ ಎಂಬುದು ಅವರ ಮನೆಯವರ ಮಾತು. ನಮ್ಮ ಮನೆಯಲ್ಲಿ ನಡೆಯುವ ಮೊದಲನೆಯ ಶುಭಕಾರ್ಯಕ್ಕೆ ನೆಂಟರಿಷ್ಟರನ್ನೆಲ್ಲ ಕರೆಯಬೇಕೆಂದು ನಮ್ಮ ತಂದೆ ತಾಯಿಯರ ಸಹಜ ಬಯಕೆ. ನಮ್ಮ ತಂದೆ-ತಾಯಿ, ಬಂಧು ಬಳಗದವರೆಲ್ಲರ ವಿಶ್ವಾಸಪಾತ್ರರು, ಬೇರೆ ಬೇರೆ ಊರುಗಳಿಂದ, ಹತ್ತಿರ ದೂರದ ಎಲ್ಲ ನೆಂಟರೂ ಬಂದರು. ನಮ್ಮ ತಂದೆಗೆ ಎಲ್ಲ ಸಾಹಿತಿಗಳೂ ಆಪ್ತರು. ಸಂಜೆಯ ಆರತಕ್ಷತೆಯಲ್ಲಿ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರಿಂದ ಹಿಡಿದು ಎಲ್ಲಾ ಸಾಹಿತಿಗಳೂ, ಅಲ್ಲದೆ ಶ್ರೀ ಯೋಗಾನರಸಿಂಹಂ ಅವರ ಬಳಗ, ಸ್ನೇಹಿತರು ಎಲ್ಲರೂ ಸೇರಿದರು. 'ಸಾಹಿತ್ಯ ಸಮ್ಮೇಳನ ಹೀಗೆ ನಡೆಯಬೇಕು' ಎಂದು ಪು.ತಿ.ನ. ಸಂತೋಷದಿಂದ ಹೇಳಿದ ಮಾತು ಇವತ್ತಿಗೂ ನೆನಪಿನಲ್ಲಿದೆ. ಗೋಕುಲ ನಿರ್ಗಮನವನ್ನು ಅವರಿಂದಲೇ ಕಲಿಯುವ ಅಪೂರ್ವ ಅವಕಾಶ ಸಿಕ್ಕಿದ್ದು, ನಮ್ಮನ್ನು ಅವರು ಯಾವತ್ತೂ ಬಹಳ ವಿಶ್ವಾಸದಿಂದ ಕಾಣುತ್ತಿದ್ದರು. ಅಂದು ಸ್ವಂತ ಮಗಳ ಮದುವೆಯಲ್ಲೆಂಬಂತೆ ಸಂತೋಷಪಟ್ಟರು.

ವಿಮಲ ವಿಜಯವಾಡದಲ್ಲಿ ಎಲ್ಲ ಸಹೋದ್ಯೋಗಿಗಳ, ಅದರಲ್ಲೂ, ಸಂಗೀತ ವಿಭಾಗದವರ ವಿಶ್ವಾಸ ಗಳಿಸಿದ್ದಳು. ಅದರ ಫಲವಾಗಿ, ಅವಳ ಆರತಕ್ಷತೆಯಲ್ಲಿ ಹಾಡಲು ಬಾಲಮುರಳೀಕೃಷ್ಣ ಅವರು ತಮ್ಮ ವೃಂದದೊಂದಿಗೆ ಬಂದರು. ವೆಂಜಮೂರಿ ಲಕ್ಷ್ಮಿ, ಪಿ. ಸೂರ್ಯರಾವ್, ರಮಣಮೂರ್ತಿ, ಯೆಲ್ಲಾ ಸೋಮಣ್ಣ... ಮುಂತಾದವರೆಲ್ಲ ಬಂದು ವರಪೂಜೆಯಿಂದ ಮದುವೆಯ ಎಲ್ಲ ದಿನಗಳಲ್ಲೂ ಸಂಭ್ರಮಪಟ್ಟರು. ಮುಂದೆ ವಿಮಲಾಳ ನಾದಿನಿಯ ಮದುವೆಗೆ ಶ್ರೀರಂಗಂ ಗೋಪಾಲರತ್ನಂ ಬಂದು ಸಂಭ್ರಮಿಸಿದ್ದರು. ನರಸಿಂಹರಾಜಾ ಕಾಲೋನಿಯ ರಾಮಮಂದಿರದಲ್ಲಿ ಮದುವೆ ನಡೆಯಿತು. ಬಾಲಮುರಳಿಯವರ ಸಂಗೀತ ಕೇಳಲು ಯಾರಿಗೆ ತಾನೇ ಇಷ್ಟವಿಲ್ಲ? ಅಂದು ಲೌಡ್

ಸ್ಪೀಕರನ್ನು ಏರ್ಪಾಟು ಮಾಡಿದ್ದರು. ಹೊರಗಡೆಗೆ ಹಾಕಲು permission ತೆಗೆದುಕೊಂಡಿರಲಿಲ್ಲ. ನಮಗೆ ಪರಿಚಿತರೂ ಅಲ್ಲದ ಕೆಲವರು ಹೊರಗೆ ನಿಂತು 'ನಾವು ಮದುವೆ ಮನೆಯ ತೆಂಗಿನಕಾಯಿಗಾಗಿ ಬಂದಿಲ್ಲ, ಹೊರಗಡೆಗೆ ಸಂಗೀತ ಕೇಳುವ ಹಾಗೆ ಧ್ವನಿವರ್ಧಕ ಹಾಕಿ' ಎಂದು ತಗಾದೆ ಮಾಡಿದರು. ಏನೂ ಮಾಡುವ ಹಾಗಿರಲಿಲ್ಲ. ಇದೂ ರಾಜಗೋಪಾಲ್ ವಿಮಲಾರ ಮದುವೆಯ ನೆನಪಿನ ಒಂದು ಅಂಗ. ನಮ್ಮೆಲ್ಲರೊಡನೆ ಅಂದು ರಾಜಗೋಪಾಲ್ ಹಾಗೂ ಅವರ ಮನೆಯವರು ಹೇಗೆ ಸೌಹಾರ್ದ ಸಂತೋಷಗಳಿಂದ ಹೊಂದಿಕೊಂಡಿದ್ದರೋ ಅದೇ ರೀತಿ ಇವತ್ತಿನವರೆಗೂ ನಡೆದಿದೆ.

–೩–

ರಾಜಗೋಪಾಲ್ ಮನೆಯ ಹಿರಿಯ ನಾಲ್ಕು ಅಣ್ಣತಮ್ಮಂದಿರ ಹೆಸರನ್ನು ಹ್ರಸ್ವಮಾಡಿ ಕರೆಯುವುದು ರೂಢಿ. ಪತ್ರ ವ್ಯವಹಾರದಲ್ಲೂ ಅಷ್ಟೇ. ಶಾರದಾಪ್ರಸಾದರು 'ಶೌರಿ', ಡಾ. ಮೋಹನರಾಂರು 'ಮೋಹನ್', ನಾರಾಯಣದತ್ತರು 'ನಾಣಿ', ರಾಜಗೋಪಾಲರು 'ರಾಜು'. ಚಿಕ್ಕವರು ದೊಡ್ಡವರೆಲ್ಲ ಅವರುಗಳನ್ನು ಹಾಗೆಯೇ ಸಂಬೋಧಿಸುತ್ತಿದ್ದದ್ದು. ಮೊದಮೊದಲು ಇದು ನಮಗೆ ಕಷ್ಟವಾಗುತ್ತಿತ್ತು. ಬರುಬರುತ್ತ 'ರಾಜು' ರೂಢಿಯಾಯಿತು. ಆತ್ಮೀಯತೆ ಸಲುಗೆಗಳಲ್ಲೂ ಒಂದು ಬಿಗಿ ಅವರಿಗೆಲ್ಲ ರೂಢಿಯಾಗಿತ್ತು.

ರಾಜು–ವಿಮಲ ಅಮೆರಿಕಕ್ಕೆ ಹೋದ ಮೇಲೂ ನಮ್ಮಗಳ ಜೊತೆ ಒಳ್ಳೆಯ ಬಾಂಧವ್ಯ ಇಟ್ಟುಕೊಂಡಿದ್ದರು. ನಾನು ಅಮೆರಿಕಕ್ಕೆ ಬಂದಾಗಲೆಲ್ಲ ಗೋಕುಲ ನಿರ್ಗಮನ, ಜಾನಪದ ಗೀತೆಗಳ ಕಾರ್ಯಕ್ರಮ ಏರ್ಪಡಿಸುತ್ತಿದ್ದ ಅವರ ವಿಶ್ವಾಸ ಅನನ್ಯ. ಬೆಂಗಳೂರಿನಲ್ಲಿ ವಿಮಲ, ರಾಜು ನಮ್ಮ ಜೊತೆ ಕಳೆದ ದಿನಗಳನ್ನು ಎಂದೂ ಮರೆಯಲು ಸಾಧ್ಯವಿಲ್ಲ. ಅವರ ಸ್ನೇಹಿತರ ಗುಂಪು ಅಪೂರ್ವವಾದದ್ದು. ಅವರ ಕಾಲೇಜಿನ ದಿನಗಳಿಂದಲೂ ಅನೇಕ ಸ್ನೇಹ ಸಂಬಂಧಗಳನ್ನು ಉಳಿಸಿಕೊಂಡು ಬಂದಿದ್ದರು ರಾಜು. ಎಂಜಿನಿಯರ್‌ಗಳಲ್ಲದೆ ಕಲಾವಿದರು, ನಾಟಕರಂಗದಲ್ಲಿ ಖ್ಯಾತಿವಂತರು ಅನೇಕರು ಅವರ ಸ್ನೇಹವಲಯದಲ್ಲಿದ್ದರು. ಎಂಜಿನಿಯರಿಂಗ್‌ಗೆ ಸಂಬಂಧಪಟ್ಟ ವಿಷಯಗಳಲ್ಲೂ, ಸಾಹಿತ್ಯ ಸಂಬಂಧ ವಿಷಯಗಳಲ್ಲೂ ರಾಜಗೋಪಾಲರಿಗಿದ್ದ ಜ್ಞಾನ ಅಪೂರ್ವವಾದದ್ದು. ಅಂತಹ ವ್ಯಕ್ತಿ ಇಷ್ಟು ಬೇಗ ನಮ್ಮನ್ನು ಅಗಲಿದರಲ್ಲ ಎನ್ನುವುದೇ ವ್ಯಥೆ. ಇದ್ದಷ್ಟು ದಿನ ಸಾರ್ಥಕವಾಗಿ ಬದುಕಿದರು. ವಿಮಲ–ರಾಜು ಒಬ್ಬರನ್ನೊಬ್ಬರು ಬಿಟ್ಟು ಇರುತ್ತಿರಲಿಲ್ಲ. ಸಾಹಿತ್ಯ ಇತ್ಯಾದಿ ಎಲ್ಲ ಚಟುವಟಿಕೆಗಳಲ್ಲೂ ಅವರಿಬ್ಬರೂ ಒಟ್ಟಿಗೆಯಾಗೇ ಇರುತ್ತಿದ್ದುದನ್ನು ಎಲ್ಲರೂ ಬಲ್ಲರು. ಈಗ ವಿಮಲಳಿಗೆ, ಅವರ ಮಕ್ಕಳಿಗೆ ಅವರ ನೆನಪೇ ಶಕ್ತಿ ಕೊಡಬೇಕೆಂದು ಹಾರೈಸುತ್ತೇನೆ.

■

# ರಾಜಗೋಪಾಲ್ ವ್ಯಕ್ತಿಚಿತ್ರ

**–ಡಾ. ವಾಸಂತಿ ಕಲ್ಲೆಟನ್**

**ಇಂದು ಕೆಂದಾವರೆಯು ದಳದಳಿಸಿ ದಾರಿಯಲಿ**
**ಗಂಧದೌತಣ ಹೋಗಿ ಬರುವ ಜನಕೆ–**

ಈ ಹಾಡನ್ನು ಅಕ್ಕ ವಿಮಲಾ ಮತ್ತು ಭಾವ ರಾಜಗೋಪಾಲ್ ಹಾಡುತ್ತಿದ್ದರೆ, ಅಲ್ಲಿ ಸೇರಿದ ಮಿತ್ರರ ಬಳಗ ತಲೆ ತೂಗಿ ಆನಂದಿಸುತ್ತಿತ್ತು. ಅವರು ಕನ್ನಡಿಗರಾದರೆ ಆಗಾಗ ಆ ಪದ್ಯದ ಅರ್ಥ ಹೊಳೆದು, ಮೆಚ್ಚಿಗೆಯಿಂದ 'ಆಹಾ' ಅನ್ನುವರು. ಕನ್ನಡ ಬರದಿರುವರು, ಈ ಇಬ್ಬರ ಧ್ವನಿ ಸಮ್ಮಿಳನವನ್ನು ಮೆಚ್ಚಿ 'ವ್ಹಾರೆ ವಾಹ್' ಅನ್ನುವರು.

**ಆನಂದವಿರೆ ಅತಿಥಿಗಳ ಕರೆಯಬೇಕೇ...**

ಆ ಪದ್ಯದಲ್ಲಿ ಹೇಳಿದಂತೆ, ವಿಮಲಾ–ರಾಜು ಅವರ ಮನೆಯಲ್ಲಿ ಅತಿಥಿಗಳು ಸಂತೋಷದಿಂದ ಸೇರುತಿದ್ದರು. ಅವರೆಲ್ಲ, ಭಾರತ ದೇಶದ ಬೇರೆ ಬೇರೆ ಜಾಗಗಳಿಂದ ಅಮೆರಿಕಾಗೆ ಬಂದವರು. ಹೊರ ದೇಶಕ್ಕೆ ಬಂದು ನೆಲಸಿದ ಮೇಲೆ, ತಮ್ಮ ಸಂಸ್ಕೃತಿಯ ಸೊಬಗನ್ನು ಅಗಲಿ, ಹಂಬಲಿಸುತ್ತಿದ್ದವರು. ತಮ್ಮ ಸಂಸ್ಕೃತಿಯನ್ನು ಉಳಿಸಲು, ಜ್ಞಾಪಿಸಿಕೊಂಡು ಸವಿಯಲು, ವಿಮಲಾ ರಾಜುವಿನ ಸ್ನೇಹವನ್ನು ಬಯಸುತ್ತಿದ್ದರು. ಹಾಗೇ ಅನೇಕ ಸಾರಿ ಭೇಟಿಯಾಗಿ, ಬರುಬರುತ್ತಾ, ಇವರಿಬ್ಬರ ಪ್ರೋತ್ಸಾಹದಿಂದ ಅನೇಕ ಸಾಂಸ್ಕೃತಿಕ ಸಂಘಗಳ ರಚನೆಯಾಯಿತು. ಆಗ – ಸುಮಾರು ೧೯೭೦ –





ಅಮೇರಿಕಾದಲ್ಲಿ ಕನ್ನಡಿಗರಿರಲಿ, ಭಾರತ ದೇಶದವರೇ ಹೆಚ್ಚಿರಲಿಲ್ಲ. ಸಾರಿಗೆ ಕರಿಬೇವಿನ ಸೊಪ್ಪು ಬೇಕಿದ್ದರೆ, ಊರೂರು ಅಲೆಯಬೇಕಾಗುತ್ತಿತ್ತು. ನಮಗೆ ಅಭ್ಯಾಸವಾಗಿದ್ದ ಒಳ್ಳೆಯ ಕಾಫಿ ಸಿಗುತ್ತಿರಲಿಲ್ಲ. ರೆಸ್ಟೋರೆಂಟ್‌ಗಳಲ್ಲಿ ನೀರು ಕಾಫಿಗೆ ತಣ್ಣಗಿರುವ ಹಾಲು ಹಾಕಿ ಮುಂದಿಡುತ್ತಿದ್ದರು. ಯಾರಿಗೂ ಯೋಗ ಅಂದರೇನು ಅಂತ ಗೊತ್ತಿರಲಿಲ್ಲ. ಸೀರೆಯನ್ನು ಕಾಸ್ಟ್ಯೂಮ್ ಅನ್ನುತಿದ್ದರು. ನಮಗೆ ಇಂಗ್ಲಿಷ್ ಬರುತ್ತಲ್ಲ ಎಂದು ಆಶ್ಚರ್ಯಪಡುತ್ತಿದ್ದರು. ಈ ವಾತಾವರಣಕ್ಕೆ ಬಂದ ನಮ್ಮವರಿಗೆ ಮುಜುಗರ ಆಗುತ್ತಿದ್ದುದು ಸಹಜ. ಇಲ್ಲಿ ನಮ್ಮ ಮಕ್ಕಳನ್ನು ಹೇಗೆ ಬೆಳೆಸಬೇಕು ಎಂದು ಚಿಂತಿಸುತ್ತಿದ್ದರು.

ವಿಮಲಾ ಕಲಾವಿದೆ. ಹಾಡಿನಲ್ಲಿ, ಕನ್ನಡ ಸಾಹಿತ್ಯದಲ್ಲಿ ಆಳವಾದ ಜ್ಞಾನ. ಜೊತೆಗೆ ಆಲ್ ಇಂಡಿಯಾ ರೇಡಿಯೋನಲ್ಲಿ ಅನೇಕ ದೊಡ್ಡ ಕಲಾವಿದರೊಂದಿಗೆ ಕೆಲಸ ಮಾಡಿ, ಅವರ ಸ್ನೇಹವನ್ನು ಪಡೆದವಳು. ಯಾವ ದೇಶದ ಕಲಾವಿದರನ್ನೂ ಆಕರ್ಷಿಸುವ ಸಾಮರ್ಥ್ಯ ಹೊಂದಿದವಳು. ಭಾವ ರಾಜಗೋಪಾಲ್ ಸಮರ್ಥ ವ್ಯವಸ್ಥಾಪಕರು. ಇಬ್ಬರ ಜೋಡಿಯಿಂದ ಅನೇಕ ಕಾರ್ಯಕ್ರಮಗಳು ನಡೆದವು, ಅನೇಕ ಸಂಘಗಳು ಹುಟ್ಟಿಕೊಂಡವು. ಇಂಡೋ–ಯೂಎಸ್ ಮಕ್ಕಳ ಕೂಟದಲ್ಲಿ ಭಾಗವಹಿಸಿದ ಮಕ್ಕಳು, ಭಾರತದ ಸಂಸ್ಕೃತಿಯನ್ನು ಚೆನ್ನಾಗಿ ಕಲಿತರು. ಉನ್ನತ ಕಲಾವಿದರಿಂದ ತರಪೇತಿ ಪಡೆದರು. ಇಂದ್ರಾಣಿ ರಹಮಾನ್ ಅವರಿಂದ ಒಡಿಸ್ಸಿ ನೃತ್ಯ, ಸಿನಿಮಾ ತಾರೆ ಪದ್ಮಿನಿ ಅವರಿಂದ ಭರತ ನಾಟ್ಯ ಕಲಿತರು. ಭಾರತದ ಹಿರಿಯ ಕಲಾವಿದರ ಕಾರ್ಯಕ್ರಮಗಳ ಮೂಲಕ ನಮ್ಮ ದೇಶದ ಸಂಸ್ಕೃತಿಯನ್ನು ಅರ್ಥ ಮಾಡಿಕೊಂಡರು. ಇನ್ನೊಂದು ಪ್ರಮುಖ ಸಂಘ, 'ಶ್ರುತಿ' – ಶಾಸ್ತ್ರೀಯ ಸಂಗೀತದ ಸಂಘ – ಇದರ ಸ್ಥಾಪನೆಗೂ ಅಕ್ಕ–ಭಾವ ಪ್ರೇರಕರು – ಮೊದಲ ಸ್ಥಾಪಕರಲ್ಲಿ ಇಬ್ಬರು. 'ಸ್ಪೀಕಿಂಗ್ ಆಫ್ ಶಿವ' ಎಂಬ ಎಕ್ಸಿಬಿಷನ್ನಲ್ಲಿ ಫಿಲಡೆಲ್ಫಿಯಾದ ಎಲ್ಲ ಮ್ಯೂಸಿಯಮ್‌ಗಳೂ ಭಾಗವಹಿಸಿದ್ದವು.' ಮ್ಯೂಸಿಯಮ್ ಆಫ್ ಆರ್ಟ್'ನಲ್ಲಿ ವಿಮಲಾ, ರಾಜು ಅನೇಕ ಕಾರ್ಯಕ್ರಮಗಳನ್ನು ನಡೆಸಿದರು. 'ಫ್ರಾಂಕ್ಲಿನ್ ಇನ್ಸ್ಟಿಟ್ಯೂಟ್' ಎಂಬ ಸೈನ್ಸ್ ಮ್ಯೂಸಿಯಂನಲ್ಲಿ, ವಿಮಲಾ, ರಾಜಗೋಪಾಲ್ ಮತ್ತು ನಾನು ಹಾಡಿದ 'ಏಳಯ್ಯ ಏಳು, ಏಳು ಚಿನ್ನದ ಗಿರಿ' ಜಾನಪದ ಗೀತೆ ಹಾಕಿ ಪ್ಲಾನೆಟೇರಿಯಂನಲ್ಲಿ ಸೂರ್ಯನ ಆಕಾಶದ ಪ್ರಯಾಣವನ್ನು ತೋರಿಸಿದರು. ಈ ಎಲ್ಲ ಮ್ಯೂಸಿಯಮ್‌ಗಳ ಕಾರ್ಯಕ್ರಮಗಳೂ ಏಕಕಾಲದಲ್ಲಿ ನಡೆದು, ಬಂದ ಜನಕ್ಕೆ ನಮ್ಮ ದೇಶದ ಸಂಸ್ಕೃತಿಯ ಆಳವಾದ ಪರಿಚಯ ಆಗುವಂತೆ ಮಾಡಿದವು. ಎರಡು ವರ್ಷಕ್ಕೊಮ್ಮೆ ಫಿಲಡೆಲ್ಫಿಯಾ ಸಿವಿಕ್ ಸೆಂಟರ್‌ನಲ್ಲಿ ನ್ಯಾಶನ್ಯಾಲಿಟಿಸ್ ಸರ್ವಿಸ್ ಸೆಂಟರ್‌ನವರು ಎಲ್ಲಾ ದೇಶದ ಕಲಾವಿದರನ್ನೂ ಸೇರಿಸಿ ಮಾಡುತ್ತಿದ್ದ ನ್ಯಾಶನ್ಯಾಲಿಟಿಸ್ ಫೋಕ್ ಫೇರಿನಲ್ಲಿ ಇಂಡಸ್ ಮಕ್ಕಳು ಭಾಗವಹಿಸಿ ತಮ್ಮ ನೃತ್ಯ ಪ್ರೋಗ್ರಾಮ್‌ಅನ್ನು ಹೆಮ್ಮೆಯಿಂದ ಸಾವಿರಾರು ಜನರ ಮುಂದೆ ಪ್ರದರ್ಶಿಸುತ್ತಿದ್ದರು. ಆ ತರಹದ ಬೃಹತ್ ಪ್ರೋಗ್ರಾಮ್‌ಗಳನ್ನು ಆಮೇಲೆ ನಾನು ನೋಡಿಯೇ ಇಲ್ಲ.



**ತಂಬುಲದ ತುಟಿಯ ತೋರಿ**
**ಮಲ್ಲಿಗೆಯ ಮುಡಿದುಕೊಂಡು**

ಈ ಹಾಡನ್ನು ಭಾವ (ರಾಜಗೋಪಾಲ್) ಹಾಡುವಾಗ ಸೈಗಲ್ ಜ್ಞಾಪಕಕ್ಕೆ ಬರುತ್ತಿದ್ದರು – ಅಷ್ಟು ಮಧುರ ಇವರ ಹಾಡಿಕೆ. ಹಾಡುವುದಷ್ಟೇ ಅಲ್ಲ, ಭಾವಗೀತೆಗಳಿಗೆ ರಾಗ ಹಾಕುವುದರಲ್ಲೂ ಭಾವ ಪರಿಣತರು. ಆದರೆ, ಹಾಡು ಹೇಳಿ ಅಂದರೆ ಹಿಂಜರಿಯುತ್ತಿದ್ದರು – ಬಲವಂತ ಮಾಡಿದಷ್ಟೂ ಬಗ್ಗದೆ ಕಾಡುತಿದ್ದರು. ಆದರೆ, ಅವರ ಹಾಬಿ ಅಂದರೆ ಬೇಂದ್ರೆ ಮತ್ತು ನರಸಿಂಹಸ್ವಾಮಿಗಳ ಪದ್ಯಗಳಿಗೆ ರಾಗ ಹಾಕಿ, ಮಧುರವಾಗಿ ಹಾಡುವುದು. ರಾಜಗೋಪಾಲ್ ಈ ಕವಿಗಳ ಕವನಕ್ಕೆ ರಾಗ ಹಾಕುವುದರಲ್ಲಿ ಪರಿಣತರು ಎನ್ನಬಹುದು. 'ಹಿಂಥ ನೋಡದಾ ಗೆಳತಿ' ಎಂಬ ಹಾಡಿಗೆ ಮೊದಲು ರಾಗ ಹಾಕಿದವರೇ ಇವರು. ಆ ಹಾಡನ್ನು ಅವರ ತಮ್ಮ ಎಚ್. ವೈ. ಮುಕುಂದ ಚಿಕ್ಕವರಾಗಿದ್ದಾಗಲೇ ರಾಮಕೃಷ್ಣ ಆಶ್ರಮದ ಸಂಗೀತ ಸ್ಪರ್ಧೆಯಲ್ಲಿ ಹಾಡಿ ಮೊದಲ ಬಹುಮಾನವನ್ನು ಪಡೆದರಂತೆ. ಆಮೇಲೆ ಆ ಹಾಡು, ಆ ರಾಗ ತುಂಬ ಜನಪ್ರಿಯವಾಗಿ, ಒಂದು ಸಿನಿಮಾದಲ್ಲಿ ಬಳಸಲಾಗಿ, ಅದಕ್ಕೆ 'ಬೆಸ್ಟ್ ಸಾಂಗ್ ಆಫ್ ದಿ ಇಯರ್' ಬಿರುದು ಬಂತಂತೆ. ಈ ವಿಷಯ ರಾಜಗೋಪಾಲರಿಗೆ ಯಾರೋ ಹೇಳುವವರೆಗೂ ಗೊತ್ತೇ ಇರಲಿಲ್ಲವಂತೆ! ಮನೆಯಲ್ಲಿ ಮಕ್ಕಳು ಚಿಕ್ಕವರಾಗಿದ್ದಾಗಲಿಂದ ಎಲ್ಲರನ್ನೂ ವಾರಕ್ಕೊಮ್ಮೆ ಸೇರಿಸಿ, ಶ್ಲೋಕಗಳನ್ನೂ, ಭಜನೆಗಳನ್ನೂ ಕಲಿಸಿ ಹಾಡುತ್ತಿದ್ದರು. ರಾಜಗೋಪಾಲ್ ಅವರ ಈ ಗುಣವನ್ನು ಬಲ್ಲವರು ಹೆಚ್ಚಿಲ್ಲ. ಏಕೆಂದರೆ ಅನೇಕ ಗುಣಗಳಿದ್ದರೂ ಭಾವ ತುಂಬ ನಿಗರ್ವಿ, ತಮ್ಮ ಗುಣಗಳನ್ನು ಎಂದೂ ಪ್ರದರ್ಶಿಸುತ್ತಿರಲಿಲ್ಲ.

ಅವರ ಮುಖ್ಯ ಗುಣವೆಂದರೆ, ತಮ್ಮ ಅಪಾರ ಜ್ಞಾನವನ್ನು ಇತರರಿಗೆ ನೀಡುವುದು. ಕಾಲೇಜಿನಲ್ಲಿ ಇಂಜಿನಿಯರಿಂಗ್ ಪ್ರೊಫೆಸರಾಗಿ ಪಾಠ ಹೇಳುವಷ್ಟೇ ಶ್ರದ್ಧೆಯಿಂದ ಬೇರೆ ಬೇರೆ ಪ್ರಸಂಗಗಳಲ್ಲಿ ಚಿಕ್ಕವರಿಗೆ ಅಥವಾ ದೊಡ್ಡವರಿಗೆ ತಮಗೆ ಗೊತ್ತಿದ್ದ ವಿಷಯಗಳನ್ನು ಧಾರಾಳವಾಗಿ, ಕ್ರಮವಾಗಿ ಹೇಳಿಕೊಡುತ್ತಿದ್ದರು. ಭಾರತದಿಂದ ಅಮೆರಿಕಾಗೆ ಓದಲು ನಾನು ಬಂದಾಗ, ವಿಮಲಾಳ ಮನೆಯಲ್ಲೇ ಇದ್ದೆ. ಅಕ್ಕ –ಭಾವ ಇಬ್ಬರಿಂದಲೇ ಈ ದೇಶದ ರೀತಿನೀತಿಗಳನ್ನು ಕಲಿತೆ. ಭಾವನ ಜೊತೆ ಅಂಗಡಿ ಸಾಮಾನು ತರಲು ಹೋದಾಗ, ಅವುಗಳನ್ನು ಆರಿಸುವುದು ಹೇಗೆ, ಕ್ಯಾಶಿಯರ್ಗೆ ಅನುಕೂಲವಾಗುವಂತೆ, ಸಾಮಾನುಗಳ ಬೆಲೆಯ ಚೀಟಿ ಕಾಣುವಂತೆ ಕನ್ವೇಯರ್ ಬೆಲ್ಟಿನ ಮೇಲೆ ಹೇಗೆ ಇಡಬೇಕು, ಆಮೇಲೆ, ಜೋಡಿಸುವಾಗ ಹಾಲು, ಮಜ್ಜಿಗೆ, ಐಸ್ ಕ್ರೀಮ್, ಇತ್ಯಾದಿ ಥಂಡಿ ಸಾಮಾನುಗಳನ್ನು ಒಟ್ಟಿಗೆ ಇಟ್ಟರೆ ಉತ್ತಮ, ಈ ವಿಷಯಗಳನ್ನು ತೋರಿಸಿದರು. ಈ ಉದಾಹರಣೆಯಿಂದ ಅವರು ಎಷ್ಟು ವಿವರವಾಗಿ ಕೆಲಸಗಳನ್ನು ಚಿಕ್ಕವರಿಗೆ ಹೇಳಿಕೊಡುತ್ತಿದ್ದರು ಎಂದು ತಿಳಿಯಬಹುದು. ತಮ್ಮ ಸಮವಯಸ್ಕರಿಗೂ





ಅಷ್ಟೆ, ಅವರನ್ನು ಸೇರಿಸಿ ಲೋಕಕಲ್ಯಾಣಕ್ಕಾಗಿ ಸಂಘಗಳನ್ನು ಸ್ಥಾಪಿಸಿದಾಗ, ಅವರಿಗೆಲ್ಲ, ಈ ಸಂಸ್ಥೆಗಳನ್ನು ಸ್ಥಾಪಿಸುವುದು ಹೇಗೆ, 'ಬೈ ಲಾಸ್' ಅನ್ನು ಹೇಗೆ ಬರೆಯಬೇಕು, ಮೀಟಿಂಗ್ ಅನ್ನು ಹೇಗೆ ನಡೆಸಬೇಕು, ಇವನ್ನೆಲ್ಲ ಹೇಳಿಕೊಟ್ಟರು.

ತಾವು ರಿಟೈರ್ ಆದ ಮೇಲೆ, 'ಪ್ರಸ್ತಾಪ', 'ಕನ್ನಡ ಸಾಹಿತ್ಯ ರಂಗ' ಇವುಗಳ ಕಾರ್ಯಕ್ರಮಗಳನ್ನು ನಡೆಸುವುದರಲ್ಲಿ ಇವರ ಶ್ರದ್ಧೆ, ಧ್ಯೇಯ ಅತ್ಯುತ್ತಮ. ಈ ಕಾರ್ಯಕ್ರಮಗಳಿಂದ, ಇವರ ಮಾರ್ಗದರ್ಶನದಿಂದ, ನಾವೆಲ್ಲಾ ಅನೇಕ ಪಾಠಗಳನ್ನು ಕಲಿತುಕೊಂಡೆವು. ಯಾವ ಕೆಲಸ ಮಾಡಿದರೂ ಅದನ್ನು ಚೆನ್ನಾಗಿ, ಸಮಯಕ್ಕೆ ಸರಿಯಾಗಿ, ಲೋಪ ದೋಷಗಳಿಲ್ಲದಂತೆ ಮಾಡಬೇಕು – ಅದೇ ಅವರ ಅಪೇಕ್ಷೆ. ಅದನ್ನು ಹಾಗೆಯೇ ಮಾಡಿ ತೋರಿಸುತ್ತಿದ್ದರು. ಇಷ್ಟೆಲ್ಲಾ ಕ್ರಮವಾಗಿ ಕೆಲಸ ಮಾಡುವಾಗ ಅವುಗಳು ರಸಹೀನವಾವುದು ಸಾಧ್ಯ. ಆದರೆ ರಾಜಗೋಪಾಲ್ ಬಹಳ ರಸಿಕರು. ಮಾಧುರ್ಯ, ಸೌಂದರ್ಯ ಇಲ್ಲದ ಕೆಲಸಕ್ಕೆ ಅವರು ಅಪರಿಚಿತರು. ಈ ದೇಶದಲ್ಲಿ ಪ್ರಸ್ತುತಿಯಲ್ಲಿ ಸೌಂದರ್ಯಕ್ಕೆ ಎಷ್ಟು ಗಮನ ಕೊಡುತ್ತಾರೆ ಎಂದು ಮೆಚ್ಚಿಕೊಳ್ಳುತ್ತಿದ್ದರು. ತಮ್ಮ ಆಫೀಸಿನಲ್ಲಿ ಟೈಪಿಸ್ಟ್ ಎಷ್ಟು ಚೆನ್ನಾಗಿ ಟೈಪ್ ಮಾಡುತ್ತಾಳೆ, ಆ ಟೈಪ್‌ರೈಟರಿನಲ್ಲಿ ತಪ್ಪುಗಳನ್ನು ತಿದ್ದಬೇಕಾದರೆ ಅದನ್ನು ಎಷ್ಟು ಅಂದವಾಗಿ ಮಾಡಬಹುದು ಇವುಗಳನ್ನು ಎತ್ತಿ ಹೇಳುತಿದ್ದರು. ಅವರು ಮಾಡಿದ ಅಡಿಗೆ ರುಚಿಯಾಗಿರುತ್ತಿತ್ತು. ಬೆರಸಿದ ಕಾಫಿ, ಬಿಸಿ ಬಿಸಿಯಾಗಿ ಪ್ರತಿ ಸಲವೂ ಮೈಸೂರಿನ ಕಾಫಿಯಾಗಿರುತ್ತಿತ್ತು. ಅವರು ಮಾಡಿದ ಸಾರನ್ನು ಮಾರಿದ್ದರೆ ಕೋಟ್ಯಾಧೀಶ್ವರರಾಗುತ್ತಿದ್ದರು.

ನನ್ನ ಪತಿ ಬಾಬ್ ಕಲ್ಲೆಟನ್ ಅವರ ಚರ್ಚ್‌ನವರು ಹಿಂದೂ ಧರ್ಮದ ಬಗ್ಗೆ ಮಾತಾಡಲು, ರಾಜಗೋಪಾಲರನ್ನು ಆಹ್ವಾನಿಸಿದ್ದಾಗ, ಅವರು ಮೂಲ ವಾಲ್ಮೀಕಿ ರಾಮಾಯಣವನ್ನು ತಂದು, ಅದರ ಸ್ವಾರಸ್ಯಕರ ಸಂಗತಿಗಳನ್ನು ಹೇಳಿ, ಜನರ ಆಸಕ್ತಿಯನ್ನು ಹೆಚ್ಚಿಸಿದರು. ಕಾರ್ಯದರ್ಶಿಗಳು ಅವರನ್ನು ಮತ್ತೆ ಕರೆಯಬೇಕು ಅಂದುಕೊಂಡಿದ್ದರು.

ಇಂತಹ ಅಪೂರ್ವ ಪಂಡಿತರೂ, ರಸಿಕರೂ, ಜ್ಞಾನಿಗಳೂ, ಅನೇಕರಿಗೆ ಗುರು, ಗೆಳೆಯ, ಪೋಷಕರಾಗಿ, ನಮಗೆಲ್ಲಾ ಮಾರ್ಗದರ್ಶಕರಾಗಿದ್ದ ರಾಜಗೋಪಾಲ್ ನಮ್ಮ ಜೊತೆ ಇಲ್ಲವೆಂದರೆ ಅದು ನಾವು ಒಪ್ಪದ ವಿಷಯ. ನಮ್ಮ ಹೃದಯದಲ್ಲಿ ಅವರು ಚಿರಂಜೀವಿ.

■

# ನನ್ನ ಪ್ರೀತಿಯ ಅಣ್ಣ ರಾಜು

**–ನೀರಜಾ ಅಚ್ಯುತರಾವ್**

೧೯೩೫ರ ಮೇ ತಿಂಗಳಿನಲ್ಲಿ ಜನಿಸಿದ ಅಣ್ಣ ರಾಜು (ರಾಜಗೋಪಾಲ್ ಎಂಬುದು ಅವನ ಪೂರ್ತಿ ಹೆಸರು, ನಮಗೆ ಅವನು ರಾಜು) ನನಗಿಂತ ವಯಸ್ಸಿನಲ್ಲಿ ಆರು ವರ್ಷ ಹಿರಿಯ. ಮನೆಯಲ್ಲಿ ತುಂಬ ಮುದ್ದಿನ ಮಗುವಾಗಿ ಬೆಳೆದವನು ನಮ್ಮ ಹಿರಿಯಕ್ಕ ಲಕ್ಷ್ಮಿ ಅಥವಾ ಪಾಪು ಅವನನ್ನು ನೋಡಿಕೊಳ್ಳಲೆಂದೇ ಒಂದು ವರ್ಷ ಶಾಲೆಯನ್ನು ಕೂಡ ಬಿಡಬೇಕಾಯಿತಂತೆ. ಅದಕ್ಕೆ ಕಾರಣವೂ ಇತ್ತು. ಅವನು ಚಿಕ್ಕ ಮಗುವಾಗಿದ್ದಾಗ ಅವನನ್ನು ಉಳಿಸಿಕೊಳ್ಳಲು ತುಂಬಾ ಕಷ್ಟಪಡಬೇಕಾಯಿತಂತೆ. ಈಗಿನಂತೆ ರೋಗ ನಿರೋಧಕ ಔಷಧಗಳು ಇನ್ನೂ ಬಂದಿರಲಿಲ್ಲವಲ್ಲ ಆಗ! ಮಗುವನ್ನು ಮದ್ರಾಸಿನಲ್ಲಿದ್ದ ನಮ್ಮ ತಾತನವರ ಮನೆಗೆ ಕರೆದುಕೊಂಡು ಹೋಗಿ, ಅಲ್ಲಿ ರಾಜಬಾದರ್ ಎಂಬ ಹೋಮಿಯೋಪತಿ ಡಾಕ್ಟರ ಬಳಿ ಔಷಧಿ ಕೊಡಿಸಿ ಅವರ ರೋಗ ಗುಣವಾಯಿತಂತೆ. ಆ ಡಾಕ್ಟರರು ಮಗುವನ್ನು ಅಳುವುದಕ್ಕೆ ಬಿಡಬಾರದು ಎಂದು ಹೇಳಿದ್ದರಂತೆ. ಆದ್ದರಿಂದ ಅವನ ಇಚ್ಛೆಗಳನ್ನು ಪೂರೈಸುತ್ತ, ಅವನು ಹೇಳಿದಂತೆ ಮನೆಯವರೆಲ್ಲಾ ಕೇಳುತ್ತ ಇರಬೇಕಾಯಿತಂತೆ! 'ನನ್ನನ್ನು ಅಳಿಸಲೇಬಾರದು ಎಂದು ಹೇಳಿದ. ಆ ಡಾಕ್ಟರನ್ನು ಒಮ್ಮೆ ನೋಡಿ ಅವರಿಗೆ ವಂದನೆ ಸಲ್ಲಿಸಿ ಬರಬೇಕು' ಎಂದು ತೀರ ಇತ್ತೀಚಿನವರೆಗೂ ಬಹು ಹೆಮ್ಮೆಯಿಂದ ಹೇಳುತ್ತಿದ್ದ ರಾಜು, ದೊಡ್ಡವನಾದ ಮೇಲೆ ಎಂದೂ ಮೊಂಡತನ ಮಾಡಿದವನಲ್ಲ.

ನನ್ನ ಅವನ ಒಡನಾಟದ ಮೊದಲ ನೆನಪೆಂದರೆ ಮೈಸೂರು ಲಕ್ಷ್ಮೀಪುರದ ಡಾಕ್ಟರ್ ರಂಗಣ್ಣನವರ ಮನೆಯ ಒಂದು ಮನೆಯಲ್ಲಿ ನಾವಿದ್ದಾಗಿನದು. ಸುಮಾರು ೧೯೪೩-೪೪ನೇ ವರ್ಷ ಇರಬಹುದು. ಆಗ ಸ್ವಾತಂತ್ರ್ಯ ಹೋರಾಟಗಾರರಾಗಿದ್ದ, ಗಾಂಧಿ, ತಿಲಕ್, ಪಟೇಲ್, ನೆಹರು, ಆಜಾದ್ ಮುಂತಾದವರ ಚಿತ್ರಗಳನ್ನು ರಟ್ಟಿನ ಮೇಲೆ ಅಂಟಿಸಿದ ಚಿಕ್ಕ ಕಟ್ ಔಟ್‌ಗಳು ನಮ್ಮ ಮನೆಯಲ್ಲಿ ಇದ್ದವು. ರಾಜು ಅವುಗಳನ್ನು ಕಿಟಕಿಯಲ್ಲಿ ದೀಪಕ್ಕೆದುರಾಗಿ ಜೋಡಿಸಿ, ಹಿಂಬದಿಯ ಗೋಡೆಯ ಮೇಲೆ ಅವುಗಳ ಛಾಯೆ ಬೀಳುವಂತೆ ಮಾಡಿ, ಗಾಂಧಿ ತಿಲಕ್ ಸಂವಾದ ಮಾಡಿಸುತ್ತಿದ್ದ. 'ಸ್ವರಾಜ್ಯ ನನ್ನ ಜನ್ಮಸಿದ್ಧ ಹಕ್ಕು' ಇತ್ಯಾದಿ ಮಾತುಗಳನ್ನಾಡುತ್ತ ಹಾವಭಾವಗಳೊಂದಿಗೆ ನಟನೆ ಮಾಡಿ ತೋರಿಸುತ್ತಿದ್ದ. ನಾನು ಎಲ್ಲವನ್ನೂ ಬೆರಗುಗಣ್ಣುಗಳಿಂದ ನೋಡುತ್ತಿದ್ದೆ.

ಪ್ರಪಂಚದ ಎರಡನೇ ಮಹಾಯುದ್ಧ ನಡೆದು, ಆಗತಾನೆ ಮುಕ್ತಾಯಗೊಂಡಿತ್ತು. ನನ್ನ ಬಾಲ್ಯದ ದಿನಗಳು, ತುಂಬಾ ಸುಭಿಕ್ಷ ಕಾಲವೇನಲ್ಲ. ಆಟದ ಸಾಮಗ್ರಿಗಳು ನಮಗೆ ಸಿಗುತ್ತಿರಲಿಲ್ಲ. ಕೊಳ್ಳುವ ಸಾಮರ್ಥ್ಯವೂ ಇರಲಿಲ್ಲ. ಎಲ್ಲ ಮನೆಯಲ್ಲೇ ಮಾಡಿಕೊಳ್ಳಬೇಕಾಗುತ್ತಿತ್ತು. ನನಗೆ ಜ್ಞಾಪಕ ಇದ್ದಂತೆ, ಒಂದು ಚೆಂಡು ಮಾಡಿಕೊಳ್ಳಲು ಪೇಪರ್‌ನಿಂದ ಉಂಡೆ ಮಾಡಿ, ಸೈಕಲ್ ಟ್ಯೂಬ್ (ಹಳೆಯದು), ಅವನ್ನು ಚಿಕ್ಕ ಚಿಕ್ಕ ಭಾಗಗಳಾಗಿ ಕತ್ತರಿಸಿ ಪೇಪರ್ ಉಂಡೆಯ ಮೇಲಕ್ಕೆ ತೊಡಿಸಿ, ರಾಜು ಬಾಲ್ ತಯಾರಿಸುತ್ತಿದ್ದ. ಚಿನ್ನಿದಾಂಡಂತೂ ಎಲ್ಲರೂ ಅವರವರೇ ಮಾಡಿಕೊಳ್ಳುತ್ತಿದ್ದರು. ಅವನು ಬುಗುರಿಯನ್ನು ಮರದಿಂದ ಮಾಡಿ, ಮೊಳೆ ಹೊಡಯಲು ಹೋಗಿ ಬುಗುರಿ ಎರಡು ಹೋಳಾಗುತ್ತಿದ್ದುದು ಜ್ಞಾಪಕವಿದೆ. ಹಲಸಿನ ಮರದಿಂದ ಗೋಂದು ತೆಗೆದು ಬಾಟಲಿನಲ್ಲಿ ಸಂಗ್ರಹಿಸುತ್ತಿದ್ದುದ್ದು ನೆನಪಿದೆ. ಬರೆಯಲು ಇಂಕ್ ಪೆನ್ ಬರುವ ಮುಂಚೆ ಶಾಯಿಯನ್ನು ಕೆಂಪು, ನೀಲಿ ಪುಡಿಗಳನ್ನು ತಂದು ನೀರಿನಲ್ಲಿ ಕದರಿ ಬಾಟಲಿಗೆ ಹಾಕಿಕೊಂಡು, ಸ್ಟೀಲ್ ನಿಬ್ಬುಗಳಿಂದ ರಾಜು ಬರೆಯುತ್ತಿದ್ದುದು ಜ್ಞಾಪಕವಿದೆ. ಪರೀಕ್ಷೆ ಬಂತೆಂದರೆ ಶಾಯಿನ ಬಾಟಲಿಯನ್ನು ಕೈಲಿ ಹಿಡಕೊಂಡು ಅವನು ಶಾಲೆಗೆ ಹೋಗುತ್ತಿದ್ದ. ಕೈ ತುಂಬಾ ಶಾಯಿಯ ಕಲೆ ಇರುತ್ತಿತ್ತು. ನಿಬ್ಬನ್ನು ಸಿಕ್ಕಿಸಿಕೊಳ್ಳಲು ಕಡ್ಡಿಯನ್ನು ಅವನೇ ತಯಾರಿಸುತ್ತಿದ್ದ. ಓದು ಬರೆಹದಲ್ಲಿ ಅವನಿಗೆ ಎಷ್ಟು ಆಸಕ್ತಿ ಇತ್ತೆಂದರೆ ಯಾವುದಕ್ಕೂ ಬೇಸರಿಸಿಕೊಳ್ಳದೆ ಎಲ್ಲ ಸಾಮಗ್ರಿಯನ್ನು ಹೊಂದಿಸಿಕೊಳ್ಳುತ್ತಿದ್ದ, ಭದ್ರಾವತಿ ಪೇಪರ್ ಕಾರ್ಖಾನೆಯ ರೀಮುಗಟ್ಟಲೆ ಪೇಪರ್ ಕೊಂಡು ತಂದು ಕತ್ತರಿಸಿ ಪುಸ್ತಕವನ್ನು ದಬ್ಬಳ, ಟ್ವೈನ್ ದಾರದಿಂದ ಹೊಲೆದುಕೊಳ್ಳುವುದು ಆಗ ಸರ್ವೇ ಸಾಮಾನ್ಯವಾಗಿತ್ತು. ನಮ್ಮ ಮನೆಯಲ್ಲಿ.

**ಮಕ್ಕಳ ಕೂಟದ ಮನೆ:** ೧೯೪೫ನೇ ವರ್ಷ ಲಕ್ಷ್ಮಿಪುರದಲ್ಲಿ ಡಾ॥ ರಂಗಣ್ಣನವರ ಮನೆ ಬಿಟ್ಟು ಅದೇ ಬೀದಿಯ ಬೇರೊಂದು ಮನೆಗೆ ಬಂದೆವು. ಅಲ್ಲಿ ನಮ್ಮ ಮೈಸೂರು



ಮಕ್ಕಳ ಕೂಟಕ್ಕೆಂದು ಒಂದು ದೊಡ್ಡ ಹಾಲ್, ಮಕ್ಕಳು ಆಡಲು ವಿಶಾಲವಾದ ಕಾಂಪೌಂಡ್ ಇರುವ ಮನೆ ಔಟ್ ಹೌಸ್‌ನಲ್ಲಿ ನಮ್ಮ ವಾಸ. ಆ ಕಾಂಪೌಂಡಿನಲ್ಲಿ ಎಲಚಿ, ಬೇಲ, ಅಮಟೆ ಮುಂತಾದ ಅನೇಕ ಹಣ್ಣಿನ ಮರಗಳೂ, ದೊಡ್ಡ ಪಾದರಿ ಹೂವಿನ ಮರವೂ ಇದ್ದವು. ಆ ಮನೆಯ ಮಾಲೀಕರು ಈಗಲೂ ಆ ಮರಗಳನ್ನು ಅಷ್ಟೇ ಚೆನ್ನಾಗಿ ನೋಡಿಕೊಳ್ಳುತ್ತಾರೆಂಬುದು ವಿಶೇಷ. ರಾಜುವೂ ನಾನೂ ಒಟ್ಟೊಟ್ಟಿಗೆ ಆಟಪಾಟಗಳಲ್ಲಿ ತೊಡಗುತ್ತಿದ್ದೆವು. ಸಂಜೆಯಾದರೆ ಮಕ್ಕಳ ಕೂಟಕ್ಕೆ ತುಂಬಾ ಮಕ್ಕಳು ಬರುತ್ತಿದ್ದರು. ಅವರೊಂದಿಗೆ ಆಟವಾಡುತ್ತಿದ್ದೆವು.

ಒಂದು ಸಂಜೆ ನನಗೆ ಟೇಬಲ್ ಮೇಲೆ ಊಟ ಮಾಡಬೇಕೆಂದು ತುಂಬಾ ಆಸೆಯಾಯಿತು. ಈಗಿನಂತೆ ಮನೆಗಳಲ್ಲಿ ಡೈನಿಂಗ್ ಕುರ್ಚಿ ಟೇಬಲ್ ಇರುತ್ತಿರಲಿಲ್ಲ. ನನಗೂ ರಾಜುಗೂ ಓದಲು ಚಿಕ್ಕ ಟೇಬಲ್ ಕುರ್ಚಿಗಳು ಇದ್ದವು. ಅದನ್ನೇ ಅಚ್ಚುಕಟ್ಟಾಗಿ ಒರೆಸಿ, ಶುಚಿಮಾಡಿ ಕಾಂಪೌಂಡಿನಲ್ಲಿ ಒಳ್ಳೆ ಸ್ಥಳ ಹುಡುಕಿ ಜೋಡಿಸಿಕೊಂಡೆವು. ಊಟಕ್ಕೆ ಏನಿತ್ತು? ಈಗಿನಂತೆ ಮಕ್ಕಳಿಗೆ ವಿಧ ವಿಧವಾದ ಬಣ್ಣ ಬಣ್ಣದ, ಕರುಂಕುರುಂ ತಿಂಡಿಗಳಾಗಲೀ, ಚಾಕಲೇಟ್, ಐಸ್‌ಕ್ರೀಂ, ಥಮ್ಸ್ ಅಪ್, ಕೋಕೋಕೋಲಾಗಳಾಗಲೀ ಗೊತ್ತೇ ಇರಲಿಲ್ಲ! ಅಡಿಗೆ ಮನೆಗೆ ಹೋಗಿ ಅನ್ನದ ತಪ್ಪಲೆಯಿಂದ ಅನ್ನ ತೆಗೆದು, ಸಾರು ಹಾಕಿಕೊಂಡು ಚೆನ್ನಾಗಿ ಕಲೆಸಿ ಎರಡು ತಟ್ಟೆಗಳಿಗೆ ಹಾಕಿಕೊಂಡು ತಂದು ಟೇಬಲ್ ಮೇಲೆ ಇರಿಸಿಕೊಂಡೆವು. ಅಷ್ಟರಲ್ಲಿ ನಮಗಿಬ್ಬರಿಗೂ ಊಟಕ್ಕೆ ಬೆಲ್ ಬಾರಿಸಬೇಕೆಂದು ಆಸೆಯಾಯಿತು. ಮನೆಯಲ್ಲಿದ್ದ ಪುಟ್ಟ ಜಾಗಟೆಯನ್ನು ಮರಕ್ಕೆ ತೂಗುಕಟ್ಟಿ, ರಾಜು ಅದನ್ನು ಮೂರು ಬಾರಿ ಢಣ್ ಢಣ್ ಢಣ್ ಎನಿಸಿದ ಮೇಲೆ ನಮ್ಮ ಊಟದ ವೇಳೆ ಬಂತು! ಅಂದು ಆ ಟೇಬಲ್ ಮೇಲೆ ಊಟ ಮಾಡಿ ಜೀವನಲ್ಲಿ ಏನೋ ಸಾಧನೆ ಮಾಡಿದಂತೆ ತೃಪ್ತಿ. ಖುಷಿ, ಪಟ್ಟೆವು! ಕಾಸು ಖರ್ಚಿಲ್ಲದೆ ಇದ್ದುದರಲ್ಲೇ ಬಹಳ ತೃಪ್ತಿಪಟ್ಟುಕೊಳ್ಳುತ್ತಿದ್ದ ಆ ಬಾಲ್ಯದ ದಿನಗಳು ಅತ್ಯಂತ ಸಂತೋಷಕರ ದಿವಸಗಳು. ಈಗಿನ ಮಕ್ಕಳಿಗೆ ಈ ಅಲ್ಪತೃಪ್ತಿ ಸಾಧ್ಯವೆ?

**ಮಕ್ಕಳ ಕೂಟದ ರೇಡಿಯೋ ಕಾರ್ಯಕ್ರಮಗಳು:** ಮಕ್ಕಳ ಕೂಟದ ಸರಸ್ವತಿ ಎಂದೇ ಹೆಸರಾಗಿದ್ದ ಅಮ್ಮ ಮಕ್ಕಳ ಕೂಟದಿಂದ ರೇಡಿಯೋಗಾಗಿ ತಯಾರಿಸುತ್ತಿದ್ದ ಮಕ್ಕಳ ಕಾರ್ಯಕ್ರಮದಲ್ಲಿ ಇತರ ಮಕ್ಕಳೊಂದಿಗೆ ರಾಜುವೂ, ನಾನೂ ಭಾಗವಹಿಸುತ್ತಿದ್ದೆವು. ಒಂದು ವಿಶೇಷ ಸಂದರ್ಭಕ್ಕಾಗಿ, ಕುವೆಂಪು ಅವರನ್ನು ಆಕಾಶವಾಣಿಗೆ ಕರೆಸಿದ್ದರು. ಆ ಕಾರ್ಯಕ್ರಮದಲ್ಲಿ ಭಾಗವಹಿಸಿದ ಮಕ್ಕಳಿಗೆಲ್ಲಾ ಕುವೆಂಪು ಅವರ ಕೈಯಿಂದ ಬಹುಮಾನ ಕೊಡಿಸಿದ್ದರು. ನನ್ನ ತಮ್ಮ ಮುಕುಂದ ತುಂಬ ಚಿಕ್ಕವನು ಆಗ. ತನಗೆ ಬಹುಮಾನ ಬರಲಿಲ್ಲವೆಂದು ಅಳಲು ಮೊದಲಿಟ್ಟ. ಮಕ್ಕಳ ಕಾರ್ಯಕ್ರಮದ ಮೇಲ್ವಿಚಾರಕರಾಗಿದ್ದ ಶ್ರೀಮತಿ ಪುಟ್ಟತಾಯಮ್ಮನವರು ತಕ್ಷಣ ನನ್ನ ತಮ್ಮನಿಗೂ ಒಂದು ಆಟದ ಸಾಮಾನು ಅವರಿಂದಲೇ ಕೊಡಿಸಿ, ಮಗುವನ್ನು ಸಮಾಧಾನಪಡಿಸಿದ್ದರು.

ಮಕ್ಕಳ ಕಾರ್ಯಕ್ರಮದಲ್ಲಿ ರಾಜುವೂ, ನಾನೂ ಅನೇಕ ಬಾರಿ ಭಾಗವಹಿಸುತ್ತಿದ್ದ-ರಿಂದ ಆಕಾಶವಾಣಿಯವರು ಅವರ ಸ್ಟುಡಿಯೋದಲ್ಲಿ ಹಾಕಲೆಂದೋ, ರೇಡಿಯೋ ಜರ್ನಲ್‌ಗೆ ಹಾಕಲೆಂದೋ ಯಾವುದಕ್ಕೆಂದು ನೆನಪಿಲ್ಲ. ನಮ್ಮಿಬ್ಬರ ಫೋಟೋ ತೆಗೆಸುವ ಸಲುವಾಗಿ ನಮ್ಮನ್ನು ಸ್ಟುಡಿಯೋಗೆ ಕರೆದಿದ್ದರು. ಅದಕ್ಕಾಗಿ ನಾವಿಬ್ಬರೂ ಆಕಾಶವಾಣಿಗೆ ಹೋಗಿ ಗಂಟೆಗಟ್ಟಲೆ ಕಾದು ಫೋಟೋಗ್ರಾಫರ್ ಬಾರದೆ ಬೇಸರವಾಗಿ, ಹಸಿದುಕೊಂಡು ಹಿಂತಿರುಗಿದ್ದೆವು. ಮತ್ತೂ ಒಮ್ಮೆ ರೇಡಿಯೋದವರು ಫೋಟೋ ತೆಗೆಸಲೆಂದು ನಮ್ಮನ್ನು ಬರಹೇಳಿದಾಗ, ಎಷ್ಟು ಹೊತ್ತು ಕಾಯಬೇಕೋ ಎಂದು ಒಂದು ದೊಡ್ಡ ಪೊಟ್ಟಣ ಕಾರಶೇವ್ ಕಟ್ಟಿಸಿಕೊಂಡು ಹೋಗಿದ್ದೆವು. ಆದರೆ ಅವತ್ತು ಫೋಟೋ ಗ್ರಾಫರ್ ಬೇಗನೆ ಬಂದಿದ್ದರಿಂದ ಕೆಲಸವೂ ಬೇಗ ಮುಗಿಯಿತು, ಕೈತುಂಬಾ ದೊಡ್ಡ ಪೊಟ್ಟಣದ ತಿಂಡಿಯೂ ಉಳಿದಿತ್ತು. ಮಜವಾಗಿ ತಿಂದು ಮುಗಿಸಿ ಹಿಂತಿರುಗಿದೆವು.

**ಒಂದು ಕೀಟಲೆ ಪ್ರಸಂಗ:** ರಾಜು ತಾನು ಅಣ್ಣ ಎಂಬ ಅಧಿಕಾರದಿಂದ ನನ್ನನ್ನು ಸದಾ ಕೀಟಲೆ ಮಾಡುತ್ತಿದ್ದ. ಒಮ್ಮೆ ಅವನಿಗೆ ತಿಳಿಯಬಾರದೆಂದು ರೂಮು ಬಾಗಿಲು ಹಾಕಿಕೊಂಡು, ನಾನೂ ನನ್ನ ಗೆಳತಿಯರೂ ಡ್ಯಾನ್ಸ್ ಮಾಡುತ್ತಿದ್ದೆವು. ರಾಜು ಸುಮ್ಮನಿರದೆ ಕಿಟಕಿ ಮೇಲೆ ಹತ್ತಿ ಒಡೆದ ಗಾಜಿನ ಮೂಲಕ ನೋಡಿ 'ನೀರಜಾ, ನಿನ್ನ ಡ್ಯಾನ್ಸ್ ನೋಡಿಬಿಟ್ಟೆ!' ಎಂದು ಕೂಗಿದ್ದೂ, ನಾನು ಕೋಪಗೊಂಡಿದ್ದೂ ಜ್ಞಾಪಕ ಇದೆ ಈಗಲೂ!

ಆಕಾಶವಾಣಿಯಲ್ಲಿ ನಡೆದ ಮತ್ತೊಂದು ಪ್ರಸಂಗ: ಯಾವ ಸಮಾರಂಭ ಎಂದು ನೆನಪಿಲ್ಲ. ಆಕಾಶವಾಣಿಗೆ ನಾವು ಮಕ್ಕಳ ಕೂಟದಿಂದ ತುಂಬಾ ಮಕ್ಕಳು ಹೋಗಿದ್ದೆವು. ಆಗ ಮಕ್ಕಳ ಕಾರ್ಯಕ್ರಮಲ್ಲಿ ಭಾಗವಹಿಸುತ್ತಿದ್ದ ಸಂಸ್ಥೆಗಳು ಬೆರಳೆಣಿಕೆಯಷ್ಟೆ. ಗೋಪಾಲಸ್ವಾಮಿ ಶಿಶುವಿಹಾರ, ಜಗದಂಬಾ ಶಿಶುವಿಹಾರ, ಮಕ್ಕಳ ಕೂಟ, ಬಹುಶಃ ವನಿತಾ ಸದನ ಶಾಲೆ... ಎಲ್ಲಾ ಸೇರಿದ್ದವು. ಜೂಟಾಟ ಆಡುತ್ತಿದ್ದೆವು. ಯಾವುದೋ ಸಣ್ಣ ವಿಷಯ ಇಟ್ಟುಕೊಂಡು ನಾನು ಹೋದಲ್ಲೆಲ್ಲ ಬಂದು ರಾಜು ನನ್ನನ್ನು ಕೀಟಲೆ ಮಾಡುತ್ತಿದ್ದ. ನನ್ನ ಸಹನೆ ಮಿತಿಮೀರಿ 'ಏ ರಾಜು! ನೀನು ಹೀಗೆ ನನ್ನನ್ನ ಪೀಡಿಸಿದ್ರೆ ನಿನ್ನ ಕೈ ಮೇಲೆ ಬಿಸಿ ಸಾರು ಸುರಿದುಬಿಡ್ತೀನಿ ಹುಷಾರು!' ಎಂದು ಜೋರಾಗಿ ಕೂಗಿದೆ. ಅದಕ್ಕೂ ಸುಮ್ಮನಿರದೆ ಆ ಮಹರಾಯ, 'ಇಲ್ಲಿ ಸಾರು ಎಲ್ಲಿ ಇರುತ್ತೆ!' ಎಂದು ಮತ್ತೊಂದು ಕೀಟಲೆ ಶುರುಮಾಡಿದ. ಆಮೇಲೆ ನನಗೆ ಮುನಿಸು ಬಂದಾಗಲೆಲ್ಲ. ಅವನೇ 'ಬಿಸಿ ಸಾರು ಸುರಿದುಬಿಡ್ತೀನಿ.' ಅಂತ ಹೇಳಿ ಹೇಳಿ ರೇಗಿಸುತ್ತಿದ್ದ. ಬಹುಶಃ ಇದೊಂದು ಜಾಗತಿಕ ವಿಷಯವಾಗಿ ಪ್ರಚಾರ ಪಡೆದು ದೇಶ ವಿದೇಶಗಳಲ್ಲಿ ನೆಲೆಸಿರುವ ನಮ್ಮ ಮನೆಯ ಮಕ್ಕಳು ಮೊಮ್ಮಕ್ಕಳಾದಿಯಾಗಿ ಎಲ್ಲರಿಗೂ ಗೊತ್ತಾಗಿ ನನಗೆ ವಿಶ್ವಖ್ಯಾತಿಯನ್ನೇ ತಂದು ಕೊಟ್ಟಿದ್ದರೆ, ಅದಕ್ಕೆ ಕಾರಣ ರಾಜು. ಸುಮಾರು ೬೭



ವರ್ಷಗಳ ಹಿಂದೆ ನಡೆದ ಆ ಘಟನೆ ಇವತ್ತು ನಡೀತೇನೂ ಎಂಬಂತೆ ನೆನಪಿನಲ್ಲಿ ಹಚ್ಚ ಹಸಿರಾಗಿದೆ.

**ಸ್ವಾತಂತ್ರ್ಯೋತ್ಸವ:** ಭಾರತಕ್ಕೆ ಸ್ವಾತಂತ್ರ್ಯ ಬಂದಾಗ ನಮಗೆಲ್ಲ ಬಹಳ ಸಡಗರ. ನಮ್ಮ ಮನೆಯ ಮೇಲೆ ಬಾವುಟ ಹಾರಿಸಿದ್ದು, ಅಮ್ಮ ಪಾಯಸದ ಅಡುಗೆ ಮಾಡಿದ್ದು ಜ್ಞಾಪಕವಿದೆ. ನಮ್ಮ ಹಿರಿಯ ಅಣ್ಣ ಶಾರದಾ ಪ್ರಸಾದ್ ಮೈಸೂರಿನಲ್ಲಿ ಸ್ವಾತಂತ್ರ್ಯ ಹೋರಾಟದ ವಿದ್ಯಾರ್ಥಿ ನಾಯಕನಾಗಿ ಎರಡು ಬಾರಿ ಸೆರೆಮನೆ ವಾಸ ಅನುಭವಿಸಿದ್ದ. ಆ ಎಲ್ಲಾ ಘಟನೆಗಳ ನಂತರ ಬ್ರಿಟಿಷರು ತೊಲಗುತ್ತಾರೆಂಬುದು ನಿಜಕ್ಕೂ ತುಂಬಾ ಖುಷಿಯ ವಿಷಯವಾಗಿತ್ತು. ಅಣ್ಣ ಹೀಗೊಂದು ಹಾಡು ರಚಿಸಿದ್ದ:

**ವಿಜಯೋತ್ಸಾಹದಿ ನಲಿಯುವ ಬನ್ನಿ**
**ವಿಮುಕ್ತ ದೇಶವ ಹೊಗಳುವ ಬನ್ನಿ**
**ನಲಿಯುವ ಹೊಗಳುವ ಮಣಿಯುವ ಬನ್ನಿ**
**ಜೈ ಭಾರತ ಜೈ ಭಾರತ ಜೈ ಹಿಂದ್**

ಮೇಲಿನ ಪಲ್ಲವಿಯೊಂದಿಗೆ ಮೂರು ಚರಣಗಳಿದ್ದವು. ಅಪ್ಪ ನಮ್ಮನೆಯಲ್ಲಿದ್ದ ಸಂಪಿಗೆ ಮರದ ಕೆಳಗಿದ್ದ ಬೆಂಚಿನ ಮೇಲೆ ಕುಳಿತು ಆ ಹಾಡಿಗೆ ರಾಗಮಾಲಿಕೆಯಾಗಿ ಸ್ವರಪಡಿಸಿದ್ದು, ಕಣ್ಣಿಗೆ ಕಟ್ಟಿದಂತಿದೆ. ಆ ಹಾಡನ್ನು ಮನೆ ಮಂದಿಗೆಲ್ಲ ಒಟ್ಟಾಗಿ ಹಾಡಲು ಕಲಿಸಿದರು. ಆ ಹೊಸತರಲ್ಲಿ ನಾನು ಅಮ್ಮನ ಸ್ನೇಹಿತೆ ತಿಮ್ಮಮ್ಮನವರ ಮನೆಗೆ ಹೋದಾಗಲೆಲ್ಲ 'ಜೀಜಂ – ಅವರು ಮುದ್ದಿಗೆ ನನ್ನನ್ನು ಹಾಗೆ ಕರೆಯುತ್ತಿದ್ದರು– ವಿಜಯೋತ್ಸಾಹದಿ ಹಾಡಮ್ಮ' ಎನ್ನುತ್ತಿದ್ದರು. ನಾನು ಹಿಂದೇಟು ಹೊಡೆಯದೆ ಹಾಡುತ್ತಿದ್ದೆ. ಆಗಸ್ಟ್ ೧೫, ೧೯೪೭ರಂದು ಸ್ವಾತಂತ್ರ್ಯೋತ್ಸವ ಮೈಸೂರು ಟೌನ್ ಹಾಲ್ ಮೈದಾನದಲ್ಲಿ ಏರ್ಪಾಡಾಗಿತ್ತು. ರಾಜನೂ, ನಾನೂ ಅಂದಿನ ಬಹಿರಂಗ ಸಭೆಯಲ್ಲಿ ಸಾವಿರಾರು ಜನರ ಸಮ್ಮುಖದಲ್ಲಿ ಹೆದರಿಕೆ ಇಲ್ಲದೆ 'ವಿಜಯೋತ್ಸಾಹದಿ ನಲಿಯುವ ಬನ್ನಿ' ಹಾಡಿ ಸೈ ಎನ್ನಿಸಿಕೊಂಡಿದ್ದೆವು. ಈಗಲೂ ಆ ನೆನಪು ಮೈ ನವಿರೇಳಿಸುತ್ತದೆ.

ರಾಜುವಿನ ವಿದ್ಯಾರ್ಥಿ ಜೀವನ: ರಾಜು ಶಾಲೆಯ ಓದಿನಲ್ಲಿ ಬಹಳ ಮುಂದಿರುತ್ತಿದ್ದ. ಅಲ್ಲಿ ಸುವಾರ್ತೆಯಿಂದ ಹಿಡಿದು ಎಲ್ಲ ವಿಷಯಗಳಲ್ಲೂ ಇವನೇ ಮೊದಲಿಗ. ಅವನ ಸಹಪಾಠಿಗಳಲ್ಲಿ ಕೆಲವರು ಇವನನ್ನು ಸಹಿಸಲಾರದೆ ಊಟದ ಡಬ್ಬಿಗೆ ಮಣ್ಣು ತುಂಬಿಸಿದ್ದರು ಎಂದು ಒಮ್ಮೆ ಹೇಳಿದ್ದ. ಗೋಪಾಲಸ್ವಾಮಿ ಶಿಶುವಿಹಾರದಲ್ಲಿ ನಾನೂ ನನ್ನ ತಮ್ಮನೂ ಓದುತ್ತಿದ್ದೆವು. ಡಾ॥ ಎಂ. ವಿ. ಗೋಪಾಲಸ್ವಾಮಿಯವರು ಸೈಕಾಲಜಿ ಪ್ರೊಫೆಸರ್ ಆಗಿದ್ದವರು. ಮಕ್ಕಳಿಗೊಂದು ಒಳ್ಳೆಯ ಮಾಂಟೆಸರಿ ಶಾಲೆ ಇರಬೇಕೆಂದು ಈ ಶಿಶುವಿಹಾರ ಆರಂಭಿಸಿದ್ದರು. ಅಲ್ಲಿಯೇ ಮೇಲಿನ ತರಗತಿಗಳೂ ಆರಂಭಗೊಂಡಿದ್ದವು. ಆ ಶಾಲೆಯ ಮುಖ್ಯೋಪಾಧ್ಯಾಯಿನಿ ಶ್ರೀಮತಿ ಎಸ್. ಗಂಗಮ್ಮನವರು ಆ ಶಾಲೆಯನ್ನು ತುಂಬ

ಮುತುವರ್ಜಿಯಿಂದ ನಡೆಸುತ್ತಿದ್ದರು. ಆಕೆ ರಾಜುವನ್ನು ಮಿಷನ್ ಶಾಲೆ ಬಿಟ್ಟು ತಮ್ಮ ಶಾಲೆಗೆ ಬರುವಂತೆ ಪುಸಲಾಯಿಸಿದರು. ರಾಜು ನಮ್ಮ ಶಾಲೆಯಲ್ಲಿ ಓದಿದರೆ, ಎಲ್.ಎಸ್. (ಲೋಯರ್ ಸೆಕೆಂಡರಿ)ನಲ್ಲಿ ನಮ್ಮ ಶಾಲೆಗೆ ರ್‍ಯಾಂಕ್ ಬರುತ್ತದೆ ಎಂದು ಅವರ ಆಸೆ. ರಾಜು ಅವರಿಗೆ ನಿರಾಸೆ ಮಾಡದೆ ಗೋಪಾಲಸ್ವಾಮಿ ಶಾಲೆಗೆ ಸೇರಿ, ಎಲ್.ಎಸ್. ಪರೀಕ್ಷೆಯಲ್ಲಿ ಶಾಲೆಗೊಂದು ರ್‍ಯಾಂಕ್ ತಂದು ಕೊಟ್ಟಿದ್ದ. ಮುಂದೆ ಶಾರದಾ ವಿಲಾಸ ಹೈಸ್ಕೂಲಿನಲ್ಲಿ ಎಸ್.ಎಸ್.ಎಲ್.ಸಿ. ಮತ್ತು ಶಾರದಾ ವಿಲಾಸ್ ಕಾಲೇಜಿನಲ್ಲಿ ಇಂಟರ್ ಮೀಡಿಯೇಟ್ ಸಹ ಓದಿ ಉತ್ತಮ ದರ್ಜೆಯಲ್ಲಿ ಪಾಸ್ ಮಾಡಿದ್ದ.

ತಂದೆ ಶ್ರೀ ಯೋಗಾನರಸಿಂಹಂ ಅವರು ಶಿವಮೊಗ್ಗ ಜಿಲ್ಲೆಯ ವಿದ್ಯಾಧಿಕಾರಿ-ಗಳಾಗಿದ್ದರು. ೧೯೫೨ರಲ್ಲಿ ಅವರು ನಿವೃತ್ತರಾಗುವವರಿದ್ದರು. ಆಗಷ್ಟೆ ರಾಜು ತನ್ನ ಎಸ್.ಎಸ್.ಎಲ್.ಸಿ. ಪರೀಕ್ಷೆ ಮುಗಿಸಿದ್ದ. ಆ ಬೇಸಗೆಯಲ್ಲಿ ಮೈಸೂರಿನಿಂದ ಅಮ್ಮ, ಪಾಪು, ಕಸ್ತೂರಿ (ಅಕ್ಕಂದಿರು) ರಾಜು, ಮುಕುಂದ ಮತ್ತು ನಾನು ಶಿವಮೊಗ್ಗಕ್ಕೆ ಹೋದೆವು. ಅಲ್ಲಿ ಸುತ್ತಮುತ್ತಲ ಸ್ಥಳಗಳನ್ನೆಲ್ಲ-ಭದ್ರಾವತಿ, ತೀರ್ಥಹಳ್ಳಿ, ಜೋಗ್ ಜಲಪಾತ ತುಂಗಭದ್ರಾ ನದಿಗಳು ಸೇರುವ ಕೂಡಲಿ ಮುಂತಾದವನ್ನೆಲ್ಲ ನೋಡಿ ಖುಷಿಪಟ್ಟಿದ್ದೆವು. ಅಲ್ಲಿ 'ಹೊಳಲೂರು' ಎಂಬಲ್ಲಿಗೆ ಹೋಗಲು ಒಂದು ಹೊಳೆ ದಾಟಬೇಕಾಗಿತ್ತು. ಅದನ್ನು ಎತ್ತಿನಗಾಡಿಯಲ್ಲಿ ಕುಳಿತು ದಾಟಿದ್ದು, ಒಂದು ಹೊಸ ಅನುಭವಾಗಿತ್ತು! ಅಲ್ಲಿ ನದೀ ಸ್ನಾನ ಮಾಡಿದ್ದು, ಎಲ್ಲ ಇಷ್ಟು ವರ್ಷಗಳ ನಂತರವೂ ಮರೆಯದೆ ನೆನಪಿನಲ್ಲಿದೆ! ನಾವು ಶಿವಮೊಗ್ಗದಲ್ಲಿದ್ದಾಗಲೇ ರಾಜುವಿನ ಎಸ್.ಎಸ್. ಎಲ್.ಸಿ. ಫಲಿತಾಂಶ ಪ್ರಕಟವಾಗಿ ಅವನು ಒಳ್ಳೆಯ ರ್‍ಯಾಂಕ್ ಪಡೆದುಕೊಂಡಿದ್ದ. ಆ ಸಂತೋಷಕ್ಕಾಗಿ ಅಪ್ಪ ನಮ್ಮನ್ನೆಲ್ಲ ಶಿವಮೊಗ್ಗೆಯ ಗೋಪಿ ಹೋಟೆಲ್‌ಗೆ ಕರೆದುಕೊಂಡು ಹೋಗಿ, ಟ್ರೀಟ್ ಕೊಡಿಸಿದರು. ರಾಜುವಿನ ಕೈಗೆ ದುಡ್ಡು ಕೊಟ್ಟು, 'ನೀನೇ ಏನು ತಿಂಡಿ ಬೇಕೋ ಹೇಳಿ ತರಿಸು. ಆ ನಂತರ ದುಡ್ಡನ್ನು ನೀನೇ ಕೊಡಬೇಕು' ಎಂದರು. ಮಸಾಲೆದೋಸೆ, ಕೇಸರಿಭಾತು, ಐಸ್ ಕ್ರೀಂ, ಎಲ್ಲಾ ಆಯಿತು. ನಾವ್ಯಾರು ಕಾಫೀ ಗೀಫಿ ಕುಡಿಯುತ್ತಿರಲಿಲ್ಲ. ಎಲ್ಲ ಆದ ನಂತರ ಬಂದ ಬಿಲ್ ನೋಡಿ ರಾಜುವಿಗೆ ಸ್ವಲ್ಪ ಕಸಿವಿಸಿ ಆಯಿತು. ಅಪ್ಪ ಕೊಟ್ಟಿದ್ದ ದುಡ್ಡಿಗಿಂತ ಹೆಚ್ಚು ಬಿಲ್ ಆಗಿತ್ತು. ಅಪ್ಪನಿಗೆ ಬಿಲ್ ತೋರಿಸಿದ. ಅಪ್ಪ ಯಾವತ್ತೂ ಕೋಪದಿಂದ ಮಾತಾಡುತ್ತಿರಲಿಲ್ಲ! ನಗುನಗುತ್ತಲೆ ನಾನು ಬಾಕಿ ಕೊಡುತೀನಿ, ಹೆದರಬೇಡ ಎಂದದ್ದು ಈಗಲೂ ನೆನಪಿದೆ!

ಎಲ್ಲ ಹುಡುಗರಂತೆ ಬುಗುರಿ, ಚಿನ್ನಿದಾಂಡು, ಗೋಲಿ ಆಡುತ್ತ ಅವನೂ ಕ್ರಿಕೆಟ್ ಪ್ರಿಯನಾದ. ಮಕ್ಕಳ ಕೂಟದಲ್ಲೂ ಇತರ ಗೆಳೆಯರೊಂದಿಗೂ ದಿನಾ ಕ್ರಿಕೆಟ್ ಆಡುತ್ತಿದ್ದ. ಭಾರತದ ವಿನು ಮಂಕಡ್ ಮತ್ತು ಆಸ್ಟ್ರೇಲಿಯದ ಬ್ರಾಡ್‌ಮನ್ ಅವನ ಕ್ರಿಕೆಟ್ ದೇವರುಗಳಾದರು. ಇಲಸ್ಟ್ರೇಟೆಡ್ ವೀಕ್ಲಿ ಆಫ್ ಇಂಡಿಯಾದಲ್ಲಿ ಬಂದ ಅವರ ಚಿತ್ರಗಳನ್ನು



ಕತ್ತರಿಸಿ ಇಟ್ಟುಕೊಳ್ಳುವುದು. ಕ್ರಿಕೆಟ್ ಕಾಮೆಂಟರಿ ರೇಡಿಯೋದಲ್ಲಿ (ಆಗ ಟಿ.ವಿ. ಇರಲಿಲ್ಲ) ಕೇಳುವುದು ಅವನ ಹವ್ಯಾಸಗಳಲ್ಲಿ ಒಂದಾಯಿತು.

**ಮಕ್ಕಳ ಸಚಿತ್ರ ಭಾರತ:** 'ಪಿಲ್ಲಲ ಬೊಮ್ಮಲ ಭಾರತಂ' ಎಂಬುದು ತೆಲುಗಿನಲ್ಲಿ ಶ್ರೀ ಬಾಪಿನೀಡು ಅವರು ಮಕ್ಕಳಿಗಾಗಿ ಬರೆದ ಮಹಾಭಾರತದ ಪುಸ್ತಕ. ಅದನ್ನು ನನ್ನ ತಾಯಿ ಶ್ರೀಮತಿ ಎಚ್. ವೈ. ಸರಸ್ವತಿಯವರು ಕನ್ನಡಕ್ಕೆ ಭಾಷಾಂತರಿಸಿ ಅದನ್ನು 'ಮಕ್ಕಳ ಸಚಿತ್ರ ಭಾರತ' ಎಂದು ಕರೆದರು. ಪುಸ್ತಕ ತೆರೆದರೆ ಎಡಭಾಗದ ಹಾಳೆಯಲ್ಲಿ ಕತೆ, ಬಲಭಾಗದಲ್ಲಿ ಆ ಕತೆಯ ಚಿತ್ರ ಇರುವಂತೆ ಆ ಪುಸ್ತಕ ಮಕ್ಕಳು ತಾವೇ ಓದಲೂ, ಬೇಕಾದ ಬಣ್ಣ ತುಂಬಿಸಬಹುದಾದಂತಹ ರೇಖಾ ಚಿತ್ರಗಳೂ ಇದ್ದು ಮಕ್ಕಳಿಗೆ ಇಷ್ಟವಾಗುವಂತೆ ಇತ್ತು. ಇದರ ಮುದ್ರಣವನ್ನು ಮೈಸೂರಿನ ಉಷಾ ಪ್ರೆಸ್‌ನಲ್ಲಿ ಮಾಡಿಸುವಾಗ, ರಾಜು ಸಾಕಷ್ಟು ದೂರ ಸೈಕಲ್ ತುಳಿದುಕೊಂಡು ಹೋಗಿ ಅಚ್ಚಾದ ಪ್ರೂಫ್‌ಗಳನ್ನು ತಂದು, ತಿದ್ದಿದ ಪ್ರೂಫ್‌ಗಳನ್ನು ಮತ್ತೆ ಮುದ್ರಣಾಲಯಕ್ಕೆ ಕೊಡುವ ಕೆಲಸ ನಿರ್ವಹಿಸುತ್ತಿದ್ದ. ಆಗಿನಿಂದಲೇ ಮುದ್ರಣ, ಪ್ರೂಫ್ ತಿದ್ದುವುದು ಎಲ್ಲದರಲ್ಲೂ ಅಮ್ಮನಿಗೆ ರಾಜು, ಕಸ್ತೂರಿ ಇಬ್ಬರೂ ನೆರವಾಗುತ್ತಾ ಕೆಲಸ ಕಲಿತುಕೊಂಡರು. ಅಮ್ಮನಾದರೋ ಮೊಳೆ ಜೋಡಿಸುವುದರಿಂದ ಹಿಡಿದು ಪುಸ್ತಕ ಬೈಂಡ್ ಮಾಡುವವರೆಗೂ ಎಲ್ಲ ಕೆಲಸಗಳನ್ನು ತಮ್ಮ ತಾತನವರ ಬಿ.ಬಿ.ಡಿ. ಪ್ರೆಸ್‌ನಲ್ಲಿಯೇ ಕಲಿತಿದ್ದಳು.

**ಓದುವ ಹವ್ಯಾಸ:** ಪುಸ್ತಕಗಳನ್ನೋದುವುದೆಂದರೆ ರಾಜುವಿಗೆ ಬಹಳ ಪ್ರೀತಿ. ಚಿಕ್ಕ ವಯಸ್ಸಿನಿಂದ ಹಿಡಿದು ಅವನು ಕೊನೆಯತನಕ ತುಂಬ ಪುಸ್ತಕಗಳನ್ನೋದುತ್ತಿದ್ದ. ಅಲ್ಲದೆ ನಮ್ಮ ತಂದೆಯವರು ಬೇಸಿಗೆ ರಜೆಗೆ ಬಂದಾಗ, ಅವರ ಪರೀಕ್ಷೆ ಕೆಲಸ ಮುಗಿದ ನಂತರ, ಒಳ್ಳೆಯ ಪುಸ್ತಕಗಳನ್ನು ಓದಿ ಹೇಳುತ್ತಿದ್ದರು. ನಮ್ಮಿಂದಲೂ ಗಟ್ಟಿಯಾಗಿ ಓದಿಸಿ ಕೇಳುತ್ತಿದ್ದರು. ವಾಲ್ಮೀಕಿ ರಾಮಾಯಣದ ಭಾಗಗಳನ್ನು ಓದಿ ಹೇಳಿದ್ದರು. ಗ್ರೀಕ್ ರುದ್ರ ನಾಟಕಗಳ ಕತೆಗಳನೇಕವನ್ನು ಹೇಳಿದ್ದರು ಎಂದು ರಾಜು ಸ್ಮರಿಸಿಕೊಂಡಿದ್ದಾನೆ. 'ಅಪ್ಪ ನಮಗೆ ಯಾವಾಗಲೂ ಉತ್ತಮ ಸಾಹಿತ್ಯ ಓದಿ ಎಂದು ಹೇಳುತ್ತಿದ್ದರು. ಮೊದಲು ಅವನ್ನು ಓದಬೇಕು. ಆಮೇಲೆ ಉಳಿದವು. ಒಳ್ಳೆಯ ಸಾಹಿತ್ಯ ಎನ್ನಿಸಿಕೊಂಡದ್ದರ ಪರಿಚಯ ಮೊದಲು ಆದರೆ, ಗುಣಾವಗುಣಗಳನ್ನು ಪರಿಶೀಲಿಸುವ ಶಕ್ತಿ ವಿವೇಚನೆ ಬರುತ್ತದೆ. ಮನಸ್ಸು ಪರಿಷ್ಕಾರವಾಗುತ್ತದೆ ಎಂಬ ಕಾರಣದಿಂದ. ಆಮೇಲೆ ಬೇಕಾದರೆ ಬೇರೆಯದನ್ನೂ ಓದಿ' ಇನ್ನೊಂದು ಅವರ ಸೂಚನೆಯೆಂದರೆ, ಓದಿದ ಪುಸ್ತಕಗಳ ಬಗ್ಗೆ ಒಂದು ಅಂಚೆ ಕಾರ್ಡಿನಲ್ಲಿ ಹಿಡಿಸುವಷ್ಟು ಅದರ ಸಾರಾಂಶ, ಅದರ ಬಗ್ಗೆ ನಮ್ಮ ಅನಿಸಿಕೆಗಳನ್ನು ಬರೆದಿಡಬೇಕೆಂಬುದು ಅದಕ್ಕಾಗಿ ಆ ಸೈಜಿನ ಕಾರ್ಡುಗಳನ್ನು ತಂದು ಕೊಟ್ಟಿದ್ದರು. ಅಣ್ಣ ಶೌರಿಯೂ ಇಂಥ ಕಾರ್ಡುಗಳನೇಕವನ್ನು ಬರೆದು ಇಟ್ಟಿದ್ದ. 'ಅಪ್ಪನ ಸೂಚನೆಯ ಮೇರೆಗೆ ನಾನೂ ಆಗ ಓದಿದ ಅನೇಕ ಪುಸ್ತಕಗಳ ಸಣ್ಣ ವಿಮರ್ಶೆಗಳನ್ನು





ಬರೆಯಲು ಮೊದಲು ಮಾಡಿದೆ. ಆಗ ಮಾಡಿದ ಕೆಲಸ ಎಷ್ಟೋ ರೀತಿಯಲ್ಲಿ ಸಹಾಯ ಮಾಡಿದೆ. ನಾನು ಇಲ್ಲಿ (ಅಮೇರಿಕಾದಲ್ಲಿ) ಪಿಎಚ್.ಡಿ. ಮಾಡುತ್ತಿದ್ದಾಗ ಆಗಿನ ನನ್ನ ಪ್ರಾಧ್ಯಾಪಕರು ಮಾಡುತ್ತಿದ್ದ ಸಂಶೋಧನೆಯ ಅಂಗವಾಗಿ ಅನೇಕ ಲೇಖನಗಳನ್ನು ಓದಿ ಅದರ ಸಾರಾಂಶವನ್ನು ಬರೆದಿಡಬೇಕಾಗುತ್ತಿತ್ತು. ಮೊದಲು ಬರೆದ ಅಂಥ ನಾಲ್ಕೈದನ್ನು ಓದಿ ನನ್ನ ಪ್ರೊಫೆಸರರು 'ಎಲ್ಲಿ ಕಲಿತೆ ನೀನು ಇಷ್ಟು ಚೆನ್ನಾಗಿ ಸಿನಾಪ್ಸಿಸ್ ಬರೆಯುವುದು' ಎಂದು ಕೇಳಿದ್ದರು. ಅಪ್ಪ ನಮಗೆ ಚಿಕ್ಕಂದಿನಲ್ಲಿ ಮಾಡಿಸಿದ ಕೆಲಸ ಇಲ್ಲಿ ತುಂಬ ಸಹಾಯಕ್ಕೆ ಬಂದಿತ್ತು. ಅದರ ಬಗ್ಗೆ ಹೇಳಿದಾಗ ನನ್ನ ಪ್ರೊಫೆಸರರು ತುಂಬ ಸಂತೋಷಪಟ್ಟಿದ್ದರು' ಎಂದು ಅಪ್ಪನ ಬಗ್ಗೆ 'ಸಂಗೀತದ ಸಿರಿ' ಪುಸ್ತಕದಲ್ಲಿ ರಾಜು ನೆನೆದುಕೊಂಡಿದ್ದಾನೆ. ಮೈಸೂರಿನಲ್ಲಿ ಹೈಸ್ಕೂಲು ಕಾಲೇಜು ವಿದ್ಯಾರ್ಥಿಗಳಿಗಾಗಿ ಒಂದು ವಿಶೇಷ ಪುಸ್ತಕ ವಿಮರ್ಶಾ ಸ್ಪರ್ಧೆ ಏರ್ಪಾಡಾಗಿತ್ತು. ಶಿವರಾಮ ಕಾರಂತರ 'ಮರಳಿ ಮಣ್ಣಿಗೆ' ಕಾದಂಬರಿಯ ವಿಮರ್ಶೆ ಬರೆದು ರಾಜು–ಹೈಸ್ಕೂಲಿನಲ್ಲಿದ್ದಾಗಲೇ ಪ್ರಥಮ ಬಹುಮಾನ ಗಳಿಸಿದ್ದ. ಅಕ್ಕ ಕಸ್ತೂರಿ ಚರ್ಚಾ ಸ್ಪರ್ಧೆಗಳಲ್ಲೂ, ರಾಜು ಬರವಣಿಗೆಯಲ್ಲೂ ಬಹುಮಾನಗಳನ್ನು ಪಡೆಯುತ್ತಿದ್ದರು. ಓದಿನಲ್ಲೂ ಇಬ್ಬರೂ ಮುಂದು.

**ರೇಡಿಯೋ ನಾಟಕ:** ರಾಜು ಬಹುಶಃ ಇಂಟರ್‌ಮೀಡಿಯೇಟ್‌ನಲ್ಲಿ ಓದುತ್ತಿದ್ದಾಗಲೇ ರೇಡಿಯೋ ಆಡಿಷನ್‌ನಲ್ಲಿ ಗೆದ್ದಿದ್ದ. ಅವನಿಗೆ ಒಳ್ಳೆಯ ಕಂಠಸಿರಿ, ಒಳ್ಳೆಯ ಶುದ್ಧ ಉಚ್ಚಾರಣೆ ಇದ್ದು, ಅವನಿಗೆ ನಾಯಕ ಪಾತ್ರಗಳೇ ದೊರೆಯುತ್ತಿದ್ದವು. ಮೈಸೂರು ಆಕಾಶವಾಣಿ ಬೆಂಗಳೂರಿಗೆ ವರ್ಗವಾಗುವವರೆಗೂ ಸುಮಾರು ೧೯೫೦ರವರೆಗೆ ರೇಡಿಯೋ ನಾಟಕಗಳಲ್ಲಿ ಭಾಗವಹಿಸುತ್ತಿದ್ದ, ಕೆ. ವಿ. ಅಯ್ಯರ್ ಅವರ 'ಶಾಂತಲಾ'ದ ರೇಡಿಯೋ ನಾಟಕ ರೂಪಾಂತರದಲ್ಲಿ ರಾಜು ವಿಷ್ಣುವರ್ಧನನ ಪಾತ್ರ ನಿರ್ವಹಿಸಿದ್ದು, ಅದು ಕೆಲವು ಕಂತುಗಳಲ್ಲಿ ಪ್ರಸಾರವಾಗಿತ್ತೆಂದು ನೆನಪು. ತುಂಬಾ ಉತ್ತಮ ಅಭಿನಯವಿತ್ತು. ಅವನು ರೇಡಿಯೋ ನಾಟಕ ವಿಭಾಗದಲ್ಲಿ ಭಾಗವಹಿಸಲು ದೆಹಲಿಗೆ ಹೋಗಿದ್ದ.

ರಾಜು, 'ಹಲವು ಮಕ್ಕಳ ತಾಯಿ' – ಮಕ್ಕಳ ಕೂಟದ ಶ್ರೀಮತಿ ಎಚ್. ವೈ ಸರಸ್ವತಿ' ಎಂಬ ಪುಸ್ತಕದಲ್ಲಿ ಮತ್ತೊಂದು ರೇಡಿಯೋ ನಾಟಕದ ಬಗ್ಗೆ ಹೀಗೆ ಪ್ರಸ್ತಾಪಿಸಿದ್ದಾನೆ. 'ಮೈಸೂರು ಆಕಾಶವಾಣಿಯಲ್ಲಿ ಒಂದು ರೇಡಿಯೋ ನಾಟಕೋತ್ಸವ ನಡೆದಿತ್ತು. ಸುಮಾರು ೧೯೫೫ರಲ್ಲಿ ಇರಬಹುದು. ಇತರ ಹಲವಾರು ಭಾಷೆಗಳ ರೇಡಿಯೋ ನಾಟಕಗಳನ್ನೂ ಕನ್ನಡಕ್ಕೆ ಅನುವಾದಿಸಿ, ಪ್ರಸಾರಗೊಳಿಸಿದ್ದರು. ನಮ್ಮ ಅಮ್ಮನ ಪಾಲಿಗೆ ಬಂದಿದ್ದ ನಾಟಕ ತೆಲುಗಿನದು. ಗೊ. ರಾ. ಶಾಸ್ತ್ರಿ ಎಂಬುವರು ಬರೆದ 'ತೀಯನಿ ತಲಪಲು' ಎಂಬುದು. ಅಮ್ಮ ಅದನ್ನು 'ಸವಿ ನೆನಪು' ಎಂಬ ಹೆಸರಿನಲ್ಲಿ ಅನುವಾದಿಸಿದ್ದಳು. ಅದೊಂದು ರೇಡಿಯೋ ತಂತ್ರವನ್ನು ಬಹಳ ಪರಿಣಾಮಕಾರಿಯಾಗಿ ಬಳಸಿಕೊಂಡ ವಿಶಿಷ್ಟ ನಾಟಕ. ಎರಡೇ ಪಾತ್ರಗಳು. ಅವರೂ



ನೇರವಾಗಿ ಒಬ್ಬರಿಗೊಬ್ಬರು ಹೆಚ್ಚು ಮಾತಾಡುವುದಿಲ್ಲ. ಸ್ವಗತಗಳು ಹಳೆಯ ನೆನಪಿನ ಸುರುಳಿ ಬಿಚ್ಚುತ್ತ ಹೋಗುವ ಹಿನ್ನೋಟದ (ಫ್ಲ್ಯಾಶ್‌ಬ್ಯಾಕ್) ನಿರೂಪಣೆಯ ಮೂಲಕ ಕತೆ ಸಾಗುತ್ತದೆ. ಕತೆಯ ವಿವರಗಳೆಲ್ಲ ಈಗ ನೆನಪಿನಿಂದ ಜಾರಿವೆ. ತಮ್ಮ ಹರೆಯದಲ್ಲಿ ಒಬ್ಬರಿಗೊಬ್ಬರು ಮನಸ್ಸು ತೆತ್ತಿದ್ದ ಪ್ರೇಮಿಗಳು ಮದುವೆಯಾಗಲು ಸಾಧ್ಯವಾಗದೆ ಬೇರ್ಪಟ್ಟಿದ್ದಾರೆ. ವರ್ಷಗಳ ಬಳಿಕ ಅಂದಿನ ಯುವಕ ಈಗ ಒಬ್ಬ ಸರಕಾರಿ ಅಧಿಕಾರಿಯಾಗಿ ಹಿಂದೆ ತಾನಿದ್ದ ಊರಿಗೆ ವರ್ಗವಾಗಿ ಬಂದಿದ್ದಾರೆ. ಆ ಊರಿನಲ್ಲಿ ಅಂದು ಒಂದು ಹರಾಜಾಗಲಿದೆ. ಅದು ತಾನು ಹಿಂದೆ ಪ್ರೇಮಿಸಿದ ಯುವತಿಯ ಬಡತಾಯಿಯ ಸ್ವತ್ತು. ನಾಯಕ ತಾನೇ ಮನೆಯನ್ನು ಕೊಳ್ಳಲು ನಿರ್ಧರಿಸುತ್ತಾನೆ. ಇದನ್ನು ತಾನೇಕೆ ಕೊಳ್ಳುತ್ತಿದ್ದೇನೆ ಎಂದು ಅರ್ಧ ತನಗೂ, ಇನ್ನರ್ಧ ತನ್ನೊಡನೆ ಬಂದಿದ್ದ ಸಿಬ್ಬಂದಿಯವನಿಗೂ ಎನ್ನುವಂತೆ ಹೇಳುತ್ತಾನೆ'. 'ಹಳೆಯ ಪ್ರೇಮಿಗಳು ಮತ್ತೆ ಸಂಧಿಸುವುದೇ ಇಲ್ಲ.... ಕಥೆ ಮನಸ್ಸು ಕಲಕುವಂತಿತ್ತು. ಸ್ವಗತಗಳು ಬಹಳ ಚೆನ್ನಾಗಿದ್ದವು. ಆ ನಾಟಕದಲ್ಲಿ ಯುವಕನ ಪಾತ್ರ ವಹಿಸಲು ನನ್ನನ್ನೇ ಕರೆದಿದ್ದರು. ನಾಯಕಿಯ ಪಾತ್ರದಲ್ಲಿ ಎಚ್. ಪಿ. ಸರೋಜ ನಟಿಸಿದ್ದರು. ಉತ್ತಮ ನಾಟಕ ಕರ್ತರೂ ಸೂಕ್ಷ್ಮ ಸಂವೇದಿಯೂ ಆದ, ಆಕಾಶವಾಣಿಯ ಪ್ರಮುಖ ಸ್ಥಾನದಲ್ಲಿದ್ದ ಶ್ರೀ ಎಸ್. ಎನ್. ಶಿವಸ್ವಾಮಿಯವರು ನಮ್ಮ ಪ್ರಸಾರವನ್ನು ಬಹಳವಾಗಿ ಮೆಚ್ಚಿಕೊಂಡಿದ್ದರು.'

ನಾನು ಇಷ್ಟು ಉದ್ದದ ಅವನ ಬರಹವನ್ನು ಹಾಗೇ ಬರೆಯಲು ಕಾರಣ, ಅವನ ಅದ್ಭುತ ಜ್ಞಾಪಕ ಶಕ್ತಿ, ಇಷ್ಟೊಂದು ಹಳೆಯ ವಿಷಯವನ್ನೇ ಆದರೂ ಚೂರು ಮರೆಯದಂತೆ, ಅದೇ ಸೀಕ್ವೆನ್ಸ್‌ನಲ್ಲಿ, ಈಗ ನಡೆಯಿತೇನೂ ಎಂಬಂತೆ ಬರೆಯಬಲ್ಲ ಅವನ ಸಾಮರ್ಥ್ಯಕ್ಕೆ ಒಂದು ಉದಾಹರಣೆಯಾಗಿ. ಇನ್ನೊಂದು ರೇಡಿಯೋ ನಾಟಕ ಅಪ್ಪನ ನಿರ್ದೇಶನದಲ್ಲಿ ಆಡಿದ ಭಾಸನ ಸಂಸ್ಕೃತದ 'ಪ್ರತಿಮಾ' ನಾಟಕ, ಅದನ್ನು ನೆನೆಪಿಸಿಕೊಂಡು ರಾಜು ಹೀಗೆ ಹೇಳಿದ್ದಾನೆ: 'ಅಪ್ಪ 'ಪ್ರತಿಮಾ' ನಾಟಕ ತಯಾರಿಸಲು ನಿರ್ಧರಿಸಿದಾಗ ಅದರಲ್ಲಿ ಭರತನ ಪಾತ್ರ ವಹಿಸಲು ನನ್ನನ್ನು ಆಹ್ವಾನಿಸಿದ್ದರು. ನಾನು ಆ ವೇಳೆಗೆ ಹಲವಾರು ರೇಡಿಯೋ ನಾಟಕಗಳಲ್ಲಿ ಪಾತ್ರ ವಹಿಸಿದ್ದೆ. ಅಪ್ಪನ ನಾಟಕದಲ್ಲಿ ಭಾಗವಹಿಸಿದ್ದು ಅದೊಂದೇ ಬಾರಿ. (ನನ್ನ ಹೆಂಡತಿ ವಿಮಲಳೂ ಅಪ್ಪನ 'ಸ್ವಪ್ನವಾಸವದತ್ತಾ' ನಾಟಕದಲ್ಲಿ ಪಾತ್ರ ವಹಿಸಿದ್ದಳು, ನಮಗೆ ಮದುವೆ ಆಗುವ ಮುಂಚೆ.) ಆ ನಾಟಕದಲ್ಲಿ ಪಾತ್ರ ವಹಿಸಿದ್ದು, ನನಗೆ ವಿಶೇಷ ತೃಪ್ತಿ ನೀಡಿತು. ಅಪ್ಪ ನನ್ನಲ್ಲಿ ನಂಬುಗೆಯಿರಿಸಿ ಆ ಒಳ್ಳೆಯ ಪಾತ್ರವನ್ನು ನನಗೆ ಕೊಟ್ಟರಲ್ಲ ಎಂದು ಹೆಮ್ಮೆಯೂ ಆಯಿತು. ಶ್ರೀ ಮೋಟಗಾನ ಹಳ್ಳಿ ಸುಬ್ರಹ್ಮಣ್ಯ ಶಾಸ್ತ್ರಿಗಳು ನನ್ನ ಪಾತ್ರ ನಿರ್ವಹಣೆಯನ್ನು ಮೆಚ್ಚಿಕೊಂಡದ್ದು, ನನಗೆ ತುಂಬಾ ಸಂತೋಷವಾಯಿತು. ಅಪ್ಪ ಆ ನಾಟಕದ ನಾಂದೀ ಪದ್ಯವನ್ನೂ, ಭರತವಾಕ್ಯವನ್ನೂ ಮಧ್ಯಮಾವತಿ ರಾಗದಲ್ಲಿ ಬಹು ಸುಂದರವಾಗಿ ಹಾಡಿದ್ದರು.





ಅದರ ಭಾಗಗಳು ಈಗಲೂ ನೆನಪಿನಲ್ಲಿವೆ. ಈ ಎರಡನ್ನೂ ಒಂದೇ ರಾಗದಲ್ಲಿ ಹಾಡುವ ರಂಗ ಸಂಪ್ರದಾಯವನ್ನು ಕುರಿತು ಶಾಸ್ತ್ರಿಗಳೂ ಅಪ್ಪನೂ ಮಾತನಾಡಿಕೊಂಡದ್ದು ಜ್ಞಾಪಕವಿದೆ.' ಅಂದ ಹಾಗೆ, ನಮ್ಮ ತಂದೆಯವರು ಆಕಾಶವಾಣಿಯಲ್ಲಿ ರಸಮಂಜರಿ ಎಂಬ ಸಂಸ್ಕೃತ ಕಾರ್ಯಕ್ರಮಕ್ಕೂ, ಹೈಸ್ಕೂಲ್ ವಿದ್ಯಾರ್ಥಿಗಳಿಗಾಗಿ ಶೈಕ್ಷಣಿಕ ಪ್ರಸಾರಕ್ಕೂ ಸಂಯೋಜಕರಾಗಿದ್ದರು.

ರೇಡಿಯೋ ನಾಟಕವಲ್ಲದೆ ರಂಗದ ಮೇಲೂ ಅವನು ನಟಿಸುತ್ತಿದ್ದ. ಶಾರದಾ ವಿಲಾಸ ಕಾಲೇಜಿನಲ್ಲಿ ಮಾಸ್ಟರ್ ಹಿರಣ್ಯಯ್ಯ ಇವನ ಸಹಪಾಠಿ. ಅವರೊಂದಿಗೂ ನಾಟಕಗಳಲ್ಲಿ ಪಾತ್ರ ಮಾಡುತ್ತಿದ್ದ. ಅಲ್ಲದೆ ಅವನ ಗೆಳೆಯರು ಸುಬ್ಬನರಸಿಂಹ, ಅವರ ತಂಗಿ ಲೀಲಾ, ರಾಮನಾಥ, ಬಾಲು, ಶೇಷಾದ್ರಿ ಎಲ್ಲ ಸೇರಿ 'ಉಂಡಾಡಿ ಗುಂಡ' ನಾಟಕ ಆಡಿದ್ದರು. ಅದರಲ್ಲಿ ರಾಜು ಪಾತ್ರ ವಹಿಸಿದಂತೆ ನೆನಪಿಲ್ಲ. ಅಭ್ಯಾಸಕ್ಕಂತೂ ಅವನು ಹೋಗುತ್ತಿದ್ದ. ಇಂತಹ ಒಂದು ನಾಟಕದ ಪ್ರಾಕ್ಟೀಸು ಸಮಯದಲ್ಲಿ ಮಾಸ್ಟರ್ ಹಿರಣ್ಣಯ್ಯನವರ ತಂದೆಯವರಿಗೆ ಕಾಯಿಲೆಯಾಗಿ ಆತ ತಕ್ಷಣ ಊರಿಗೆ ಹೋಗಬೇಕಾಗಿ ಬಂತು! ತನ್ನಲ್ಲಿದ್ದ ಸೈಕಲನ್ನು ಹದಿನೈದು ರೂಪಾಯಿಗೆ ಮಾರಿ ಆ ದುಡ್ಡು ತೆಗೆದುಕೊಂಡು ಆತ ಊರಿಗೆ ಹೋದರು. ಆಗ ಆ ಸೈಕಲ್ಲನ್ನು ಕೊಂಡಿದ್ದು ರಾಜುವೇ!

**ನಾಟಕದ ಸಂಪತ್:** ಖ್ಯಾತ ನಟ, ನಿರ್ದೇಶಕ ಸಂಪತ್ ಅವರು ರಾಜುವಿನ ಜೀವನದಲ್ಲಿ ಅತಿ ಮುಖ್ಯ ವ್ಯಕ್ತಿ. ಪ್ರಾತಃಸ್ಮರಣೀಯರಾಗಿದ್ದರೆನ್ನಬೇಕು! ಅವರನ್ನು ನೆನೆದುಕೊಳ್ಳದೆ ಅವನ ಒಂದು ದಿನವೂ ಕಳೆಯುತ್ತಿರಲಿಲ್ಲ. ಅವರಿಂದ ಅವನು ಅಷ್ಟೊಂದು ಪಡೆದುಕೊಂಡಿದ್ದ. ಅವರು ಮಾಡಿಸುತ್ತಿದ್ದ ಅನೇಕ ಇಂಗ್ಲಿಷ್ ಮತ್ತು ಕನ್ನಡ ನಾಟಕಗಳಲ್ಲಿ ರಂಗದ ಮೇಲೆ ಇಲ್ಲವೆ ರಂಗದ ಹಿಂಬದಿಯಲ್ಲಿ ರಾಜು ಇರುತ್ತಿದ್ದ. ಅವರ ನಿರ್ದೇಶನದಲ್ಲಿ ರೇಡಿಯೋ ನಾಟಕವಲ್ಲದೆ ರಂಗದ ಮೇಲೂ ಅವನು ನಟಿಸುತ್ತಿದ್ದ. ಅವರ ನಿರ್ದೇಶನದಲ್ಲಿ ನಾಟಕ ಮಾಡುವುದೆಂದರೆ ಅದೊಂದು ವಿಶೇಷ ಅನುಭವ. ಯೋಚಿಸಲೂ, ಕಲಿಯಲೂ ಎಷ್ಟೊಂದು ಸರಕು ಕೊಡುತ್ತಿದ್ದರು ಅವರು! ನಾನೂ ಅವರ ನಿರ್ದೇಶನದಲ್ಲಿ ಒಂದೇ ಒಂದು ಇಂಗ್ಲಿಷ್ ನಾಟಕದಲ್ಲಿ ಮಾಡಿದ್ದೇನೆಂಬುದನ್ನು ಅತ್ಯಂತ ವಿನಯದಿಂದ ಸ್ಮರಿಸಿಕೊಳ್ಳುತ್ತೇನೆ.

ರಾಜು ನನ್ನ ನಾಟಕ, ಸಂಗೀತ ಚಟುವಟಿಕೆಗಳಿಗೆಲ್ಲ ಒಂದು ಮಾದರಿ ಆಗಿದ್ದ. ನನ್ನ ಬಗ್ಗೆ ಅವನಿಗೆ ಹೆಮ್ಮೆ ಇತ್ತು. ನಾನು ಶಾಲೆಯಲ್ಲಿ ನಟಿಸುತ್ತಿದ್ದ ನಾಟಕಗಳಿಗೆ ಬಂದು ನೋಡಿ ಬೆನ್ನು ತಟ್ಟಿ ಪ್ರೋತ್ಸಾಹಿಸುತ್ತಿದ್ದ. ಅವನೊಟ್ಟಿಗೆ ಒಟ್ಟಾಗಿ ರಂಗದ ಮೇಲೆ ನಾಟಕದಲ್ಲಿ ಮಾಡಬೇಕೆಂಬ ನನ್ನ ಇಚ್ಛೆ ನೆರವೇರಲಿಲ್ಲ. ಸಂಗೀತವನ್ನು ನಾನು ಅಪ್ಪನಿಂದಲೇ ಕಲಿಯುತ್ತಿದ್ದೆ. ಅದಕ್ಕೂ ಅವನ ಒತ್ತಾಸೆ ಬಹಳ ಇರುತ್ತಿತ್ತು. ದಿನವೂ ರಾತ್ರಿ ೯-೪೫ರಿಂದ ೧೦-೦೦ ಗಂಟೆವರೆಗೆ ಪಾಕಿಸ್ತಾನ ರೇಡಿಯೋದಲ್ಲಿ ಬಡೇ



ಗುಲಾಂ ಆಲಿ ಖಾನರ ಹಿಂದುಸ್ತಾನಿ ಗಾಯನದ ರೆಕಾರ್ಡು ಹಾಕುತ್ತಿದ್ದರು. ಅದನ್ನು ಅವನು ಬಹಳ ಆಸಕ್ತಿಯಿಂದ ಕೇಳುತ್ತಿದ್ದ. ಆಗ ನನ್ನನ್ನೂ ಜತೆಗೆ ಕೂರಿಸಿಕೊಳ್ಳುತ್ತಿದ್ದ. ಹೀಗಾಗಿ ಒಳ್ಳೆಯ ಸಂಗೀತ ಕೇಳುವುದಕ್ಕೆ ಒಂದು ಒಳ್ಳೆ ಮಾರ್ಗದರ್ಶನ ನೀಡಿದ ನನಗೆ. ಬಿಡಾರಂ ಕೃಷ್ಣಪ್ಪನವರ ರಾಮ ಮಂದಿರದಲ್ಲಿ ರಾಮೋತ್ಸವ ಸಂಗೀತ ಪ್ರತಿ ವರ್ಷ ನಡೆಯುತ್ತಿತ್ತು. ನಾನು ತಪ್ಪದೆ ಹೋಗಿ ಕೇಳುತ್ತಿದ್ದೆ. ಬಂದ ನಂತರ ಅದರ ಬಗ್ಗೆ ಎಲ್ಲ ವಿವರಗಳನ್ನೂ ಕೇಳುತ್ತಿದ್ದ. ಹಾಗೆ ಒಂದು ಬಾರಿ ವಿ। ಬಿ. ದೇವೇಂದ್ರಪ್ಪನವರು ನಡೆಸುತ್ತಿದ್ದ ಹನುಮಜಯಂತಿ ಸಂಗೀತೋತ್ಸವದಲ್ಲಿ ವಿ। ಗಂಗೂಬಾಯಿ ಹಾನಗಲ್ ಅವರ ಕಛೇರಿ ರಾತ್ರಿ ಒಂಬತ್ತು ಗಂಟೆಯ ಮೇಲೆ ಆರಂಭವಾಗಿ ರಾತ್ರಿ ಒಂದು ಗಂಟೆಯವರೆಗೂ ನಡೆದಿತ್ತು. ನನ್ನ ಗೆಳತಿ ಪಾಪು, ನಾನು ಮತ್ತು ರಾಜು ನಿಬ್ಬೆರಗಾಗಿ ಆಕೆಯ ಸಂಗೀತ ಕೇಳುತ್ತ ವೇಳೆಯ ಪರಿವೆಯಿಲ್ಲದೆ ಕುಳಿತಿದ್ದೆವು. ಹಿಂತಿರುಗುವಾಗ ಪೊಲೀಸರು ನಮ್ಮನ್ನು ಪ್ರಶ್ನಿಸಿದ್ದರು. ಈ ಸಂಗೀತ ಕಾರ್ಯಕ್ರಮ ಕೇಳಿ ತಮಗಾದ ಅನುಭವಗಳ ಅದ್ಭುತವಾದ ಲೇಖನವನ್ನು ಹೆಸರಾಂತ ಕಾದಂಬರಿಕಾರ ಶ್ರೀ ಎಸ್. ಎಲ್. ಭೈರಪ್ಪನವರು ಬರೆದಿದ್ದಾರೆ.

ರಾಜು ಎಂಜಿನಿಯರಿಂಗ್‌ಗಾಗಿ ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಎಂಜಿನಿಯರಿಂಗ್ ಸೇರಿದ. ಅವನು ಬಿ.ಇ. ಡಿಗ್ರಿ ಪಡೆದುಕೊಂಡು ಆನಂತರ ಭಾರತೀಯ ವಿಜ್ಞಾನ ಸಂಸ್ಥೆ, ಬೆಂಗಳೂರಿನಲ್ಲಿ ಎಂ.ಇ. ಮುಗಿಸಿದ. ವಾರಂಗಲ್‌ನಲ್ಲಿ ಸುಮಾರು ಆರು ವರ್ಷಗಳ ಕೆಲಸ ಮಾಡಿ ೧೯೬೭ರಲ್ಲಿ ಡಾಕ್ಟರೇಟ್ ವಿದ್ಯಾಭ್ಯಾಸಕ್ಕಾಗಿ ಅಮೆರಿಕಾದ ಪೆನ್ಸಿಲ್ವೇನಿಯ ಸ್ಟೇಟ್ ಯೂನಿವರ್ಸಿಟಿಗೆ ಹೋದ. ವಾರಂಗಲ್‌ನಲ್ಲಿದ್ದಾಗಲೇ ಅವನ ವಿವಾಹ ೧೯೬೩ರಲ್ಲಿ ವಿಮಲಾ ಅವರೊಂದಿಗೆ ಆಯಿತು. ಕನ್ನಡ ಸಾಹಿತಿ ಶ್ರೀ ಎಲ್. ಗುಂಡಪ್ಪನವರ ಮಗಳು ವಿಮಲಾ, ತುಂಬಾ ಸ್ನೇಹಪರಳು. ಶ್ರೇಷ್ಠ ಜಾನಪದ ಗಾಯಕಿ ಮತ್ತು ಒಳ್ಳೆಯ ಲೇಖಕಿ. ಇವರ ಮದುವೆಯಲ್ಲಿ ಉರುಟಣೆ, ಮುಂತಾದವುಗಳಲ್ಲಿ ವಿಮಲಳ ಅಕ್ಕ ಸುಮಿತ್ರ ಅವರು ಹಾಡಿದ ಬೀಗರ ಹಾಡುಗಳಂತೂ ನಮಗೆ ಬಹಳ ತಮಾಷೆಯಾಗಿತ್ತು. ನಮ್ಮ ಮನೆಯಲ್ಲಿ ಮದುವೆ ಮನೆಯಲ್ಲಿ ತಮಾಷೆ ಇತ್ಯಾದಿಗಳಿಗೆ ಆಸ್ಪದವಿಲ್ಲದೆ ಎಲ್ಲರೂ ತುಂಬಾ ಗಂಭೀರವಾಗಿರುತ್ತಿದ್ದುದಕ್ಕೆ ವ್ಯತಿರಿಕ್ತವಾಗಿ ಇವರ ಮನೆಯಲ್ಲಿ ಹಗುರವಾದ ತಮಾಷೆಗಳಿಂದ ತುಂಬಿ ಮದುವೆ ಮನೆ ವಾತಾವರಣ ತಿಳಿಯಾಗಿತ್ತು. ನಮ್ಮ ಅಣ್ಣ ಮೋಹನರಾಂ ಅಂತೂ ನಮಗೆ ಏನೂ ಗೊತ್ತಿಲ್ಲಪ್ಪ.... ಎಂದೇ ರಾಗವಾಗಿ ಹಾಡಿ ಬೀಗರಿಗೆ ಜವಾಬುಕೊಡುತ್ತಿದ್ದ.

ಬರೀ ಶಾಸ್ತ್ರೀಯ ಸಂಗೀತ, ಭಕ್ತಿ ಸಂಗೀತ ಮಾತ್ರ ಅಭ್ಯಾಸ ಇದ್ದ ನಮ್ಮ ಮನೆಗೆ ವಿಮಲಾ ಅತ್ತಿಗೆ ಬಂದ ಮೇಲೆ ಜಾನಪದ ಸಂಗೀತದ ಪರಿಚಯವಾಯಿತು. ಈಗಂತೂ ಮೋಹನರಾಂನ ಮಗ ರಾಹುಲ್ ರಾಮ್ ದೊಡ್ಡ ಪಾಪ್ ಸಿಂಗರ್ ಎಂದು ವಿಶ್ವ

ವಿಖ್ಯಾತಿ ಗಳಿಸಿಕೊಂಡಿದ್ದಾನೆ. ಕಾಲ ಬದಲಾದಂತೆ ಎಲ್ಲ ತೆರನಾದ ಸಂಗೀತಕ್ಕೂ ಕಿವಿಗಳೂ, ಮನಸ್ಸು ಒಗ್ಗಿವೆ.

**ಅಮೆರಿಕಾಕ್ಕೆ ವಲಸೆ:** ರಾಜು ವಾರಂಗಲ್ಲಿನಿಂದ ಮುಂದೆ ಪಿಎಚ್.ಡಿ. ಪದವಿಗಾಗಿ ಫಿಲಡೆಲ್ಫಿಯಾಗೆ ಹೊರಟ. ಅಲ್ಲಿನ ಪೆನ್ಸಿಲ್ವೇನಿಯಾ ಸ್ಟೇಟ್ ಯೂನಿವರ್ಸಿಟಿಯಿಂದ ೧೯೬೯ರಲ್ಲಿ ಪಿಎಚ್.ಡಿ. ಪದವಿ ಪಡೆದುಕೊಂಡ. ೧೯೬೯ರಿಂದ 'ವಿಲನೋವ' ವಿಶ್ವವಿದ್ಯಾಲಯದ ಸಿವಿಲ್ ಇಂಜಿನಿಯರಿಂಗ್ ವಿಭಾಗದ ಉಪಪ್ರಾಧ್ಯಾಪಕನಾಗಿ ೧೯೭೩ರವರೆಗೂ ಕೆಲಸ ಮಾಡಿದ. ಅಲ್ಲಿಂದ ಮುಂದೆ ಯುನೈಟೆಡ್ ಇಂಜಿನಿಯರ್ಸ್/ ರೇಥಿಯಾನ್ ಕನ್‌ಸ್ಟ್ರಕ್ಷನ್ ಕಂಪನಿಯಲ್ಲಿ ಸೇವೆ ಸಲ್ಲಿಸಿದ. ಇದಿಷ್ಟೂ ಅವನ ವೃತ್ತಿಯ ಬಗೆಗಾದರೆ ಅವನ ಪ್ರವೃತ್ತಿ ಓದು. ಬರವಣಿಗೆಗಳು, ಹಾಡು ಇವುಗಳನ್ನು ಚೆನ್ನಾಗಿ ರೂಢಿಸಿಕೊಂಡು ಬಂದ. ಬರೆವಣಿಗೆ ವಿಷಯವಾಗಿ ಅಮ್ಮನಿಂದ ತನ್ನ ಮೇಲಾದ ಪ್ರಭಾವದ ಬಗ್ಗೆ ರಾಜು ಹೀಗೆ ಜ್ಞಾಪಿಸಿಕೊಂಡಿದ್ದಾನೆ. 'ನಾವು ಯಾರಿಗಾದರೂ ಕಾಗದ ಬರೆದರೆ ಬರಹ ಚೆನ್ನಾಗಿರಬೇಕು. ಬರೆದ ಸಾಲುಗಳು ನೇರವಾಗಿರಬೇಕು. ಕಾಗದ ಸರಿಯಾಗಿ ಮಡಿಸಬೇಕು. ಕವರಿನ ಮೇಲೆ ವಿಳಾಸ ಸ್ಫುಟವಾಗಿ ಬರೆಯಬೇಕು ಕವರಿಗೆ ಅಂಚೆ ಚೀಟಿಯನ್ನು ಎಗ್ಗಾಮುಗ್ಗ ಅಲ್ಲದೆ ಸರಿಯಾಗಿ ಹಚ್ಚಬೇಕು ಇವನ್ನೆಲ್ಲ ಅಮ್ಮ ಹೇಳೀಕೊಡುತ್ತಿದ್ದಳು. ನಮ್ಮ ತಂದೆಯವರೂ ಇಂಥ ವಿಚಾರಗಳಲ್ಲಿ ಆಸಕ್ತಿ ತೋರುತಿದ್ದರು. ಅದರಿಂದಾಗಿ ನಮಗೆ ಒಳ್ಳೆ ತರಬೇತಿ ದೊರೆಯಿತು.' ಗೋಪಾಲಸ್ವಾಮಿ ಶಿಶುವಿಹಾರದಲ್ಲಿ ಅವನು ಓದುತ್ತಿದ್ದಾಗ ಅಲ್ಲಿ ಕನ್ನಡ ಕಲಿಸುತ್ತಿದ್ದ ಕನ್ನಡ ಅಧ್ಯಾಪಕಿ ಶ್ರೀಮತಿ ಎ. ಆರ್. ರುಕ್ಮಿಣಮ್ಮ ಅವರ ಬಗೆಗೂ 'ಸಂಗೀತದ ಸಿರಿ' ಪುಸ್ತಕದಲ್ಲಿ ಹೀಗೆ ಬರೆಯುತ್ತಾನೆ. 'ಶ್ರೀಮತಿ ಎ. ಆರ್. ರುಕ್ಮಿಣಮ್ಮ ನನ್ನ ಮೇಲೆ ಅತ್ಯಂತ ಪ್ರಭಾವ ಬೀರಿದ ವ್ಯಕ್ತಿಗಳಲ್ಲೊಬ್ಬರು. ಆಕೆ ನನ್ನಲ್ಲಿ ಕನ್ನಡದ ಬಗ್ಗೆ ತೀವ್ರವಾದ ಉತ್ಸಾಹ ಬೆಳೆಸಿದರು. ಕನ್ನಡಕ್ಕೆ ನಮ್ಮ ಮನೆಯಲ್ಲಿ ಯಾವಾಗಲೂ ದೊಡ್ಡ ಸ್ಥಾನವೇ ಇತ್ತು. ನಾವೆಲ್ಲ ಕನ್ನಡ ಮೀಡಿಯಂನಲ್ಲೇ ಓದಬೇಕೆಂದು ಅಪ್ಪ ಹೇಳಿದ್ದರು. ಈಕೆಯ ಪಾಠದಿಂದ ಕನ್ನಡದಲ್ಲಿ ವಿಶೇಷ ಪ್ರೀತಿ ಉಂಟಾಯಿತು. ನಮಗೆ ಪಠ್ಯವಾಗಿ ಇಟ್ಟಿದ್ದ ನಾರಣಪ್ಪನ ಭಾರತದ ಭಾಗಗಳು, ಸಭಾ ಪರ್ವ ಇತ್ಯಾದಿ ಎಲ್ಲ ಮುಗಿಸಿ, ಪರೀಕ್ಷೆಗೆ ಬೇಕಿಲ್ಲದ ಲಕ್ಷ್ಮೀಶನ ಜೈಮಿನಿ ಭಾರತದಿಂದ ಕೆಲವು ಭಾಗಗಳು (ಸುಧನ್ವ ಚರಿತ್ರೆ) ಶರಶ್ಚಂದ್ರ, ಪ್ರೇಮಚಂದರ ಕತೆಗಳನ್ನೆಲ್ಲ ಹೇಳಿದ್ದರು.

**ನೆಲೆ:** ಅಮೆರಿಕಾದಲ್ಲಿ ನೆಲೆಸಿ, ರಾಜುವಿನ ಮಕ್ಕಳೂ ಬೆಳೆಯುತ್ತ ಬಂದಂತೆ, ಮಕ್ಕಳಿಗಾಗಿ ಒಂದು ಸಂಸ್ಥೆಯನ್ನು ಸ್ಥಾಪಿಸಿ, ಮಕ್ಕಳ ಏಳಿಗೆಗಾಗಿ ಹಲವು ವರ್ಷಗಳು ರಾಜು–ವಿಮಲ ದುಡಿದಿದ್ದಾರೆ. ೧೯೭೫ರಲಿ 'ಇಂಡಸ್' ಎಂದರೆ 'ಇಂಡೋ ಯುಎಸ್ ಆರ್ಗನೈಜೇಷನ್' ಎಂಬ ಮಕ್ಕಳ ಕೂಟವನ್ನು ಸ್ಥಾಪಿಸಿದರು, ನಮ್ಮ ಅಮ್ಮನಂತೆ.



ತಿಂಗಳಿಗೆ ಮೂರು ಭಾನುವಾರಗಳು, ಒಂದೊಂದು ಭಾನುವಾರವೂ ಮೂರು ಗಂಟೆಗಳ ಕಾಲ ಮಕ್ಕಳ ಪ್ರಗತಿಗಾಗಿ ಭಾರತೀಯ ಸಂಸ್ಕೃತಿಯ ಪರಿಚಯ ಮಾಡಿಸುವುದು. ಇಲ್ಲಿ ಯಾವೊಂದೇ (ಕನ್ನಡ) ಭಾರತೀಯ ಭಾಷೆಗೆ ಒತ್ತು ಕೊಡದೆ ಭಾರತದ ಯಾವುದೇ ಭಾಷೆಯ ಮಕ್ಕಳೂ, ಅಮೆರಿಕಾ ಮಕ್ಕಳೂ ಸಹ ಬರುತ್ತಿದ್ದು, ಸಂವಹನ ಭಾಷೆ ಇಂಗ್ಲಿಷ್ ಆಗಿರುತ್ತಿತ್ತು. ಭಾರತದ ಹಬ್ಬಗಳೂ, ಪುರಾಣದ ಕತೆಗಳೂ, ಇವುಗಳನ್ನು ತಿಳಿಸಿಕೊಡುತ್ತಿದ್ದರು. ಭರತನಾಟ್ಯ ಕಲಿಸಲು ಖ್ಯಾತ ನಟಿ ಪದ್ಮಿನಿ, ಆನಂತರ ಇಂದ್ರಾಣಿ ರೆಹಮಾನ್ ಬರುತ್ತಿದ್ದರೆಂದೂ ತಿಳಿದುಬರುತ್ತದೆ. ದೀಪಾವಳಿ ಹಬ್ಬ ಆಚರಣೆಯಲ್ಲಿ ಮನೆಯಿಂದ ತಂದ ತಿಂಡಿಗಳನ್ನು ಹಂಚಿಕೊಂಡು ತಿಂದು, ಸುರು ಸುರು ಬತ್ತಿಗಳನ್ನು ಹಚ್ಚುತ್ತಿದ್ದುದನ್ನೂ ರಾಜು ತಿಳಿಸಿದ್ದಾನೆ.

ರಾಜು ಅಮೆರಿಕಾಕ್ಕೆ ಹೋದ ಹೊಸತರಲ್ಲಿ ಇಂತಹ ಸಂಸ್ಥೆಗಳು ಬೆರಳೆಣಿಕೆಯಷ್ಟೇ ಇದ್ದು ಅವುಗಳ ಅಗತ್ಯ ಆಗ ಹೆಚ್ಚಾಗಿತ್ತು ಎನಿಸುತ್ತದೆ. ಅನಂತರ ಸಾವಿರಾರು ಜನ ಭಾರತೀಯರು ಅಲ್ಲಿಗೆ ವಲಸೆ ಹೋದ ಮೇಲೆ ಇಂತಹ ಸಂಸ್ಥೆಗಳು ಕನ್ನಡ, ಸಂಗೀತ, ನೃತ್ಯ ಮುಂತಾದವನ್ನು ಕಲಿಸುವ ಏರ್ಪಾಡುಗಳೂ ಸರ್ವೇ ಸಾಧಾರಣವಾಗಿರುತ್ತದೆ. ಅಮ್ಮ ಮಾಡಿದಂತೆ ಮಕ್ಕಳ ಸಂಸ್ಥೆಯೊಂದನ್ನು ೧೫ ವರ್ಷ ನಡೆಸಿ ಫಿಲೆಡೆಲ್ಫಿಯಾದ ಮ್ಯೂಸಿಯಮ್‌ನಲ್ಲಿ 'ಸ್ಪೀಕಿಂಗ್ ಆಫ್ ಶಿವ' ಎಂಬ ಬೃಹತ್ ಪ್ರದರ್ಶನದಲ್ಲಿ ಭಾರತೀಯ ಮೂಲದ ಮಕ್ಕಳು ಭಾಗವಹಿಸುವಂತೆ ವಿಮಲಾ-ರಾಜು ಇಬ್ಬರೂ ದುಡಿದಿದ್ದಾರೆ. ಆಗ ಅಲ್ಲಿ ಭಾಗವಹಿಸಿದ ಅವರ ಮಕ್ಕಳು ಮಾಧವಿ, ಚೇತನಾ, ಶ್ರೀರಾಂ ಇವರಿಗೂ, ಇತರರಿಗೂ ಇದು ಸಾಕಷ್ಟು ಸ್ಫೂರ್ತಿ ಕೊಟ್ಟಿರುವುದರಲ್ಲಿ ಸಂದೇಹವಿಲ್ಲ.

**ಬರವಣಿಗೆ:** ಅವನ ಕನ್ನಡ ಬರವಣಿಗೆಗಳು ಅವನ ಹೆಚ್ಚಿನ ಓದಿನ ಫಲ. ಅಮೆರಿಕಾದಲ್ಲಿದ್ದರೂ ನಮ್ಮೆಲ್ಲರಿಗಿಂತ ಹೆಚ್ಚಾಗಿ ಅವನು ಕನ್ನಡ ಪುಸ್ತಕಗಳನ್ನು ಓದಿರುತ್ತಿದ್ದ. ಮನೆಯಲ್ಲಿ ತಂದೆಯವರು ಕೊಟ್ಟಿದ್ದ ಸಂಗೀತದ ತಳಹದಿಯಿಂದ ಸಂಗೀತದ ಬಗ್ಗೆ ಚಿಂತನೆಗಳನ್ನು ಓದುತ್ತ ಅದರ ಬಗ್ಗೆಯೂ ತಕ್ಕಮಟ್ಟಿಗೆ ಬರೆಯುವ ಜ್ಞಾನ ಬೆಳೆಸಿಕೊಂಡಿದ್ದ. ಬೆಂಗಳೂರು ನಾಗರತ್ನಮ್ಮನವರ ಬಗೆಗೂ ಒಂದು ಲೇಖನ ಬರೆದಿದ್ದ. ಸಂಗೀತ ಮತ್ತು ಭಾರತೀಯ ನೃತ್ಯದ ಬಗ್ಗೆ ಅಮೆರಿಕಾದ ಶ್ರುತಿ ಇಂಡಿಯನ್ ಮ್ಯೂಸಿಕ್ ಮತ್ತು ಡ್ಯಾನ್ಸ್ ಸೊಸೈಟಿ ಅಂತರ್ಜಾಲ ತಾಣ ಮತ್ತು ಅದರ ಪ್ರಕಟಣೆಗಳಾದ ಶ್ರುತಿ ರಂಜಿನಿ ಮತ್ತು ಶ್ರುತಿ ನೋಟಟ್ಸ್'ಳಲ್ಲಿ ಆ ಲೇಖನಗಳು ಪ್ರಕಟವಾಗಿವೆ.

ಬಹುಶಃ ಬರವಣಿಗೆ ಅವನು ಆರಂಭಿಸಿದಾಗ ಅವನ ವಯಸ್ಸು ಹತ್ತು ಕೂಡ ಇರಲಿಲ್ಲ. ಲಕ್ಷ್ಮೀಪುರಂನ ನಮ್ಮ ಮನೆಯ ಪಕ್ಕದಲ್ಲಿ ಪ್ರಸಿದ್ಧ ಇಂಗ್ಲಿಷ್ ಕಾದಂಬರಿಕಾರ ಆರ್. ಕೆ. ನಾರಾಯಣ್ ವಾಸವಿದ್ದರು. ಅವರ 'ಸ್ವಾಮಿ ಅಂಡ್ ಫ್ರೆಂಡ್ಸ್' ಅನ್ನು ಮೂಲದಲ್ಲಿ ಓದಿ ರಾಜು ತನ್ನ ಅನಿಸಿಕೆಗಳನ್ನು ಆಗಲೇ ಬರೆದು, ಅವರಿಗೆ ಕೊಟ್ಟಿದ್ದನಂತೆ.

(ಅಣ್ಣ ಶೌರಿ ಅದನ್ನು ಕನ್ನಡಕ್ಕೆ ಭಾಷಾಂತರಿಸಿ, 'ಸ್ವಾಮಿ ಮತ್ತು ಸ್ನೇಹಿತರು' ಪುಸ್ತಕ ಪ್ರಕಟಿಸಿದ್ದರು. (ಆಗ ಅವರ ವಯಸ್ಸು ಕೇವಲ ಹದಿನೆಂಟು.) ರಾಜುಗೆ ಸಾಹಿತ್ಯವನ್ನು ಶಾಸ್ತ್ರೀಯವಾಗಿ ಓದುವ ಅವಕಾಶವಾಗಲಿಲ್ಲ. ಅವನು ಎಂಜಿನಿಯರ್ ಆಗಬೇಕೆಂದು ವಿಧಿನಿಯಮವಿತ್ತೆಂದು ತೋರುತ್ತೆ. ಆದರೆ ಓದುತ್ತ ಬರೆಯುತ್ತ ನಿವೃತ್ತನಾದ ಮೇಲೆ ಫುಲ್ ಟೈಮ್ ಸಾಹಿತಿಯೇ ಆದ. 'ಅಮೆರಿಕನ್ನಡ' ಪತ್ರಿಕೆಗೆ ಅವನು ಬರೆದ 'ಗಾಂಧಾರಿ' ಕುರಿತಾದ ಲೇಖನ, ಅಂತೆಯೇ ಬೊಮ್ಮನಹಳ್ಳಿಯ ಕಿಂದರಜೋಗಿ ಬಗೆಗೂ ತುಂಬಾ ವ್ಯಾಸಂಗ ಮಾಡಿ ಬರೆದ ಲೇಖನ, ಈ ಪ್ರಬಂಧಗಳನ್ನೊಳಗೊಂಡು 'ಗಾಂಧಿ ಯುಗಕ್ಕೆ ಕನ್ನಡಿ' ಎಂಬ ಪುಸ್ತಕ ಪ್ರಕಟವಾಗಿವೆ.

ಅಮೆರಿಕನ್ ಇಂಡಿಯನ್ನರ ಪುರಾಣ ಮತ್ತು ಜಾನಪದ ಕತೆಗಳನ್ನು ಇಂಗ್ಲಿಷ್‌ನಿಂದ ಅನುವಾದ ಮಾಡಿ ೨೦೧೪ರಲ್ಲಿ 'ಸೃಷ್ಟಿ: ನಾಲ್ಕು ಜಗತ್ತುಗಳು' ಎಂಬ ಶೀರ್ಷಿಕೆಯಲ್ಲಿ ರಾಜು ಬರೆದು, 'ಅಭಿನವ' ಅವರಿಂದ ಪ್ರಕಟಗೊಂಡಿದೆ. ಈ ಪ್ರಕಟಣೆಗೆ ತುಂಬಾ ಮುಂಚಿತವಾಗಿ ಇದು ಇನ್ನೂ ಮೂಲ ಪ್ರತಿಯಲ್ಲಿದ್ದಾಗ, ರಾಜು ಮೈಸೂರಿಗೆ ಬಂದಿದ್ದ. ಅವನ ಆ ಕತೆಗಳನ್ನು ಓದುವ ಒಂದು ಕಾರ್ಯಕ್ರಮವನ್ನು ನಮ್ಮ ಮನೆಯಲ್ಲಿ ಏರ್ಪಡಿಸಿದ್ದೆವು. ಕನ್ನಡದ ಖ್ಯಾತ ಸಾಹಿತಿಗಳಾದ, ಶ್ರೀ ಎಸ್. ಎಲ್. ಭೈರಪ್ಪ ಮತ್ತು ಡಾ. ಪ್ರಭುಶಂಕರ ಅವರು ಉಪಸ್ಥಿತರಿದ್ದರು. ಬರಹದ ಬಗ್ಗೆ ಭೈರಪ್ಪನವರು, 'ಇದು ನೀವೇ ಬರೆದಿದ್ದ? ಎಷ್ಟು ಚೆನ್ನಾಗಿದೆ ಈ ಭಾಷೆ' ಎಂದು ಒಳ್ಳೆಯ ಮಾತುಗಳನ್ನಾಡಿದ್ದರು.

ಶ್ರೀ ಎಚ್. ಕೆ. ನಂಜುಂಡಸ್ವಾಮಿಯವರೊಂದಿಗೆ ಸೇರಿ ಪ್ರಕಟಿಸಿದ ಸಂಪಾದಿತ ಗ್ರಂಥಗಳ ಪೈಕಿ 'ನಗೆಗನ್ನಡಂ ಗೆಲ್ಗೆ' ಎಂಬ ನಗೆ ಸಾಹಿತ್ಯ ನಡೆದು ಬಂದ ದಾರಿಯನ್ನು ಗುರುತಿಸುವ ಗ್ರಂಥ ಪ್ರಮುಖವಾದದ್ದು. ಬಿಡಿ ಬರಹಗಳು: ಕನ್ನಡದ ವಿಜಯವಾಣಿ, ಕನ್ನಡ ಪ್ರಭ, ಅಮೆರಿಕನ್ನಡ ಇತ್ಯಾದಿ ಪತ್ರಿಕೆಗಳಲ್ಲಿ, ಕೆಂಡಸಂಪಿಗೆ ಅಂತರ್ಜಾಲ ತಾಣದಲ್ಲೂ ರಾಜುವಿನ ಲೇಖನಗಳು ಪ್ರಕಟಗೊಂಡಿವೆ. ಸಾಹಿತ್ಯದ ಲೇಖನಗಳು, ಬೇರು–ಸೂರು, ಕಾರಂತ ಚಿಂತನ, ಕುವೆಂಪು ಸಾಹಿತ್ಯ, ಯದುಗಿರಿಯ ಬೆಳಕು, ಆಚೀಚೆಯ ಕತೆಗಳು, ಅನಂತಮೂರ್ತಿ, ಪಿ. ಶ್ರೀನಿವಾಸರಾವ್ ಸಮಗ್ರ ಸಾಹಿತ್ಯ, ಅಣ್ಣ ಶಾರದಾ ಪ್ರಸಾದ್ ಸಂಪಾದಿಸಿದ ಗ್ರಂಥಗಳು ಇವುಗಳಲ್ಲಿ ಪ್ರಕಟಗೊಂಡಿವೆ.

ಅಮೆರಿಕದಲ್ಲಿ ಕನ್ನಡ ಸಾಹಿತ್ಯಕ್ಕೆಂದೇ ಸ್ಥಾಪಿತವಾದ ಕನ್ನಡ ಸಾಹಿತ್ಯ ರಂಗದ ಸ್ಥಾಪಕ ಸದಸ್ಯ ಮತ್ತು ಅದರ ಅಧ್ಯಕ್ಷ ಸ್ಥಾನದಲ್ಲಿ ಸೇವೆ ಸಲ್ಲಿಸಿ ಅದರ ಪ್ರಕಟಣೆಯ ಸಂಪಾದಕ ವರ್ಗದಲ್ಲೂ ಕೆಲಸ ಮಾಡಿದ್ದಾನೆ.

ಇದಲ್ಲದೆ ನಮ್ಮ ಮನೆಯವರು ಸೇರಿ ಸ್ಥಾಪಿಸಿದ 'ದೇವಗೀತಂ ಚಾರಿಟಬಲ್ ಟ್ರಸ್ಟ್ (ರಿ')ನ ಸ್ಥಾಪಕ ಅಧ್ಯಕ್ಷನಾಗಿ ನಮ್ಮ ತಂದೆಯವರ ಬಗ್ಗೆ ಮಾಡಿದ ಜಾಲತಾಣಕ್ಕೆ ಅಪ್ಪನ ಬಗ್ಗೆ ಲೇಖನಗಳನ್ನು ಬರೆದುಕೊಟ್ಟಿದ್ದಾನೆ. ಅದರಲ್ಲಿ ನಮ್ಮ ತಂದೆಯವರ



ಲೇಖನಗಳನ್ನು ಮತ್ತು ಮನೆಯ ಇತರರ ಲೇಖನಗಳನ್ನೂ ಪ್ರಕಟಿಸಿ ಕಾಪಾಡುವ ಆಶಯದೊಂದಿಗೆ ಸ್ಥಾಪನೆ ಆಯಿತು. ಅದರಲ್ಲಿ ಇನ್ನು ಮುಂದೆ ರಾಜು ಮುಂತಾದ ಮನೆಯವರ ಬರಹಗಳನ್ನೂ ಈ ಟ್ರಸ್ಟಿನ ವ್ಯಾಪ್ತಿಯಲ್ಲಿ ಅಂತರ್ಜಾಲ ತಾಣದಲ್ಲಿ ತರುವ ಇಚ್ಛೆ ಇದೆ.

**ಪುರಸ್ಕಾರಗಳು:** ರಾಜುವಿನ ಕನ್ನಡ ಸಾಹಿತ್ಯ ಸೇವೆಯನ್ನು ಗುರುತಿಸಿ ಕೆಲವು ಪ್ರಶಸ್ತಿಗಳು ಅವನಿಗೆ ದೊರೆತವು.

ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ೨೦೦೭ – ಹೊರನಾಡ ಕನ್ನಡಿಗ

ಆಳ್ವಾಸ್ ನುಡಿಸಿರಿ ವಿರಾಸತ್ ಪ್ರಶಸ್ತಿ – ೨೦೧೩

ಕಾವೇರಿ ಕನ್ನಡ ಸಂಘದ ಪ್ರಶಸ್ತಿ – ಯು.ಎಸ್.ಎ.

'ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ' ಸಮಾರಂಭಕ್ಕೆ ಬೆಂಗಳೂರಿಗೆ ನಾವೆಲ್ಲ ಹೋಗಿದ್ದೆವು. 'ಆಳ್ವಾಸ್ ನುಡಿಸಿರಿ ಪ್ರಶಸ್ತಿ' ಬಂದಾಗ, ಮೂಡಬಿದರೆಗೆ ರಾಜುವಿನೊಡನೆ ನಾನೂ ಹೋಗಿದ್ದೆ ಎಂಬುದು ನನಗೆ ತುಂಬಾ ಹೆಮ್ಮೆಯ ವಿಚಾರ. ದೇವಗೀತಂ ಜಾಲತಾಣ, ಸಿ.ಡಿ. ಮತ್ತು ದೇವಗೀತಂ ಚಾರಿಟಬಲ್ ಟ್ರಸ್ಟ್, ನಮ್ಮ ತಂದೆ ಯೋಗಾನರಸಿಂಹಂ–ಅವರ ಕೃತಿಗಳ ಸಿ.ಡಿ.ಗಳನ್ನು ಮಾಡಿ ಲೋಕಾರ್ಪಣೆ ಮಾಡುವ ಕಾರ್ಯಕ್ರಮ ರಾಜುವಿನ ಸುಪರ್ದಿನಲ್ಲಿ ೨೦೧೧ ಸೆಪ್ಟೆಂಬರ್‌ನಲ್ಲಿ ಬಹಳ ಅಚ್ಚುಕಟ್ಟಾಗಿ ನಡೆದ ಕಾರ್ಯಕ್ರಮವಾಗಿತ್ತು. ಆ ಕಾರ್ಯಕ್ರಮ, ಬೆಂಗಳೂರಿನಲ್ಲಿ ಗಾಯನ ಸಮಾಜದಲ್ಲಿ ನಡೆದು, ವಿ। ಆರ್. ಕೆ. ಶ್ರೀಕಂಠನ್ ಅವರು ಅಧ್ಯಕ್ಷತೆ ವಹಿಸಿದ್ದರು. ಅವರು ನಮ್ಮ ತಂದೆಯನ್ನು ಬಲ್ಲವರಾಗಿದ್ದು, ಪ್ರೀತಿಯ ಮಾತುಗಳನ್ನಾಡಿದರು. ಶ್ರೀ ರಾಜನಾರಾಯಣ್ ಜಾಲತಾಣವನ್ನು ಕುರಿತೂ, ಲಾಲ್‌ಗುಡಿ ಕೃಷ್ಣನ್ ಅವರು ಅಪ್ಪನ ಕೃತಿಗಳ ಬಗೆಗೂ ಮಾತನಾಡಿದರು. ಅದಕ್ಕೆ ಬೇಕಾಗುವ ಟ್ರಸ್ಟ್ ಡೀಡ್‌ಅನ್ನು ರೂಪುರೇಷೆಗಳನ್ನು ಬಹಳ ವ್ಯಾಪಕವಾದ ರೀತಿ ಯೋಚಿಸಿ, ರಾಜುವೇ ಬರೆದುಕೊಟ್ಟನು. ಪ್ರತಿ ವರ್ಷ ಅದರ ವಾರ್ಷಿಕೋತ್ಸವಕ್ಕೆ ತಂದೆಯವರ ಕೃತಿಗಳನ್ನೊಳಗೊಂಡ ಒಂದು ಸಂಗೀತ ಕಚೇರಿ ನಡೆಸುತ್ತಿದ್ದೇವೆ. ಇದಲ್ಲದೆ ಮುಖ್ಯವಾಗಿ ನಮ್ಮ ತಾಯಿಯವರ ಬಗೆಗೆ ಒಂದು ಪುಸ್ತಕ ಪ್ರಕಟಿಸಬೇಕೆಂದು, ನಮ್ಮ ಹಿರಿಯಣ್ಣ ಶಾರದಾಪ್ರಸಾದರ ಆಸೆಯಿತ್ತು. ಅದರ ಜವಾಬ್ದಾರಿಯನ್ನು ಅವರೇ ರಾಜುವಿಗೆ ವಹಿಸಿದ್ದರು. ಆ ಕೆಲಸವನ್ನು ಅನೇಕ ತೊಂಚಾವಂಚಗಳ ನಡುವೆ ೨೦೧೬ರಲ್ಲಿ 'ಹಲವು ಮಕ್ಕಳ ತಾಯಿ' ಎಂಬ ಶೀರ್ಷಿಕೆಯಲ್ಲಿ ಪುಸ್ತಕವಾಗಿ ಪ್ರಕಟವಾಯಿತು.

ಈ ಪುಸ್ತಕವನ್ನು ಪ್ರಕಟಿಸಲು ನಾವು ಬಹಳ ವರ್ಷಗಳು ಕೆಲಸ ಮಾಡಿದೆವು. ಅಣ್ಣ ಮೋಹನ್‌ರಾಂ ದೆಹಲಿಯಲ್ಲಿ ರಾಜು ಅಮೆರಿಕಾದಲ್ಲಿ, ನಾನು ಮೈಸೂರಿನಲ್ಲಿ

ಹೀಗೆ ಇದು ಖಂಡಾಂತರಗಳ ನಡುವಿನ ಕೆಲಸವಾಯಿತು. ಮೈಸೂರಿನಲ್ಲಿರುವವರ ಲೇಖನಗಳನ್ನು ನಾನು ಸಂಗ್ರಹಿಸಿದೆ. ಅಮೆರಿಕಾದಲ್ಲಿ ಬರೆದವರಿಂದ ರಾಜು ಆನ್ ಲೈನ್ ಸಂಗ್ರಹಿಸಿದ. ನಮ್ಮ ಪ್ರಿಂಟರ್ ಬೆಂಗಳೂರಿನಲ್ಲಿದ್ದರು. ಅವರು ಅಚ್ಚು ಮಾಡಿದ ಪ್ರೂಫ್‌ಗಳನ್ನು ರಾಜುವೊಮ್ಮೆ, ನಾನೊಮ್ಮೆ ನೋಡುತ್ತಿದ್ದೆವು. ಈ ರೀತಿ ಎಲ್ಲ ವಿಳಂಬ ನಡೆಯಾಯಿತು.

ಅಲ್ಲದೆ ಪುಸ್ತಕ ಅನೇಕ ವಿಭಾಗಗಳನ್ನು ಹೊಂದಿ, ಫೋಟೋ ಆಲ್ಬಮ್, ಕಪ್ಪು-ಬಿಳುಪು, ಬಣ್ಣದ ಚಿತ್ರಗಳು, ವಂಶವೃಕ್ಷವನ್ನೂ ಒಳಗೊಂಡು ಒಳ್ಳೆಯ ದಾಖಲೆಯ ಪುಸ್ತಕವಾಗಬೇಕೆಂದೂ, ಅಮ್ಮನಿಗೆ ಅವಳ ಮಕ್ಕಳು ಸಲ್ಲಿಸುವ ಒಳ್ಳೆ ಕಾಣಿಕೆ ಯಾಗಬೇಕೆಂದೂ ಅತೀವ ಶ್ರದ್ಧೆ-ಶ್ರಮ ವಹಿಸಿ ರಾಜು ಈ ಕಾರ್ಯ ಕೈಗೊಂಡ. ಇಲ್ಲಿ ಒಂದು ವಿಷಯ ನಾವ್ಯಾರೂ ಅಲಕ್ಷಿಸುವಂತಿಲ್ಲ. ಇವೆಲ್ಲವನ್ನೂ ಅವನು ತನ್ನ ಕ್ಯಾನ್ಸರ್ ಟ್ರೀಟ್‌ಮೆಂಟ್‌ನೊಂದಿಗೆ ಮಾಡಿದನೆನ್ನುವುದು ಆಶ್ಚರ್ಯವಾಗುತ್ತದೆ. ಮಧ್ಯೆ ಮಧ್ಯೆ ಆಸ್ಪತ್ರೆಗೆ ಹೋಗಿ ಕೀಮೋಥೆರಪಿ ಮಾಡಿಸಿಕೊಂಡು, ಹಿಂತಿರುಗಿ ಒಂದು ದಿನ ವಿಶ್ರಾಂತಿ ಪಡೆದು ಮತ್ತೆ ಕೆಲಸ ಕೈಗೆತ್ತಿಕೊಳ್ಳುತ್ತಿದ್ದ. ಈ ಪುಸ್ತಕ ಪ್ರಕಟಣೆಯ ಸಲುವಾಗಿ ನಾನು ವಾರಕ್ಕೆರಡು ಬಾರಿಯಾದರೂ ಅವನೊಂದಿಗೆ ಫೋನ್‌ನಲ್ಲಿ ಮಾತನಾಡುತ್ತಿದ್ದೆ. ಒಮ್ಮೆಯೂ ಸಹ ತನ್ನ ಅನಾರೋಗ್ಯ, ನೋವು ಇವುಗಳ ಬಗ್ಗೆ ಅವನು ಮಾತಾಡುತ್ತಿರಲಿಲ್ಲ. ಹೇಗಿದ್ದೀಯಪ್ಪ? ಎಂದರೆ 'ನೀನು ಹೇಗಿದ್ದೀಯಾ? ನಾನು ತಕ್ಕಮಟ್ಟಿಗೆ ಚೆನ್ನಾಗಿಯೇ ಇದ್ದೀನಿ' ಎನ್ನುತ್ತಿದ್ದ. ಎಂಥ ಕಷ್ಟದ ಸಮಯದಲ್ಲೂ ಮನಸ್ಸಿನ ಸಮಸ್ಥಿತಿ ಕಳೆದುಕೊಳ್ಳುತ್ತಿರಲಿಲ್ಲ, ನಮ್ಮ ತಂದೆಯವರಲ್ಲೂ ಆ ಗುಣಗಳಿದ್ದವು. ೨೦೧೬ ಯುಗಾದಿಗೆ ನಮ್ಮಮ್ಮನ ೧೧೦ನೇ ವರ್ಷ ವರ್ಧಂತಿ. ಆನಂತರ ಬಂದ ಭಾನುವಾರ ಎಂದರೆ ಏಪ್ರಿಲ್ ೧೦ರಂದು, 'ಹಲವು ಮಕ್ಕಳ ತಾಯಿ – ಮಕ್ಕಳ ಕೂಟದ ಎಚ್. ವೈ. ಸರಸ್ವತಿ' ಪುಸ್ತಕ ಲೋಕಾರ್ಪಣೆ ಕಾರ್ಯಕ್ರಮ ನಡೆಯಿತು. ಅಣ್ಣ ರಾಜು, ಅತ್ತಿಗೆ ವಿಮಲ ಬರಲಾಗಲಿಲ್ಲ. ಆದರೆ ಅಲ್ಲಿಂದಲೇ ಎಲ್ಲಾ ಏರ್ಪಾಡೂ ಅವನೇ ಮಾಡಿದ್ದ. ಹಿರಿಯರೂ, ಸ್ವಾತಂತ್ರ್ಯ ಹೋರಾಟಗಾರರೂ ಆದ ಶ್ರೀ ಎಚ್. ಎಸ್. ದೊರೆಸ್ವಾಮಿ ಯವರು ನಮ್ಮ ಕುಟುಂಬವನ್ನು ಬಲ್ಲವರು. ಅವರೇ ಪುಸ್ತಕ ಲೋಕಾರ್ಪಣೆ ಮಾಡಿ, ಹಳೆಯ ನೆನಪುಗಳನ್ನು ಹಂಚಿಕೊಂಡರು. ಡಾ॥ ಇಂದಿರಾ, ಸಮಾಜಶಾಸ್ತ್ರ ಪ್ರಾಧ್ಯಾಪಕಿ, ಮೈಸೂರು ವಿಶ್ವವಿದ್ಯಾನಿಲಯ ಮತ್ತು ಶ್ರೀಮತಿ ಬಿ. ಎನ್. ಸುಮಿತ್ರಾಬಾಯಿ, ಸಾಹಿತ್ಯ ಕೋವಿದೆ ಮತ್ತು ವಿಮರ್ಶಕಿ- ಇವರುಗಳು ಪುಸ್ತಕವನ್ನು ಕುರಿತು ಮಾತನಾಡಿದರು. ನೆಂಟರಿಷ್ಟರು, ಮಕ್ಕಳು ಮೊಮ್ಮಕ್ಕಳೆಲ್ಲರೂ ಸೇರಿ ಸಂಭ್ರಮಿಸಿದೆವು.

ನಮ್ಮ ಅಣ್ಣಂದಿರ ಪೈಕಿ ಸಂಸ್ಕೃತ ಮತ್ತು ಹಿಂದಿ ಭಾಷೆಗಳಲ್ಲಿ ಅಗಾಧ ಪಾಂಡಿತ್ಯ ಹೊಂದಿ, ಪತ್ರಿಕಾ ರಂಗದಲ್ಲಿ ಪ್ರೌಢಿಮೆಗಳಿಸಿದ್ದವರು ಶ್ರೀ ನಾರಾಯಣ ದತ್ತ ಅವರು.



ಅವರ ಸೇವಾ ಕ್ಷೇತ್ರ ಮುಂಬಯಿ ಆಗಿದ್ದು, ಭಾಷೆ ಹಿಂದಿ ಆಗಿದ್ದುದರಿಂದಲೂ ಕನ್ನಡ ನಾಡಿನಲ್ಲಿ ಅವರನ್ನೂ ಬಲ್ಲವರು ಬಹಳ ಕಡಿಮೆ. ಅವರ ೮೦ನೆಯ ವರ್ಧಂತಿಗೆ ಹಿಂದಿ ಪತ್ರಕರ್ತ ಗೆಳೆಯರೆಲ್ಲ ಸೇರಿ ಒಂದು ಗ್ರಂಥ ಸಮರ್ಪಣೆ ಮಾಡಿದ್ದರು. 'ಮನೀಷಿ ಸಂಪಾದಕ ಶ್ರೀ ನಾರಾಯಣ ದತ್ತ' ಎಂಬುದು ಅದರ ಶೀರ್ಷಿಕೆ ಆ ಪುಸ್ತಕವನ್ನು ಡಾ॥ ಭಾಸ್ಕರಮಯ್ಯ ಅವರಿಂದ ಕನ್ನಡಕ್ಕೆ ಮಾಡಿಸಿ, ಆ ಸಮಾರಂಭವೂ ಸಹ ೨೦೧೭ ಫೆಬ್ರುವರಿಯಲ್ಲಿ ನಡೆದು, 'ಆಚಾರ್ಯ ಸಂಪಾದಕ ನಾರಾಯಣ ದತ್ತ' ಎಂಬ ಶಿರೋನಾಮದಲ್ಲಿ ಪ್ರಕಟಗೊಂಡಿತು. ಆ ಕೆಲಸವನ್ನೂ ರಾಜು ತನ್ನ ಅತೀವ ಅನಾರೋಗ್ಯದಲ್ಲೂ ವ್ರತದಂತೆ ಹಿಡಿದು ಸಮಾಪ್ತಗೊಳಿಸಿದ. ಈ ಎರಡು ಪುಸ್ತಕಗಳ ಲೋಕಾರ್ಪಣೆಗೆ ಅವನು ಬರಲಾಗದೆ ಹೋದ. ಅವರ ಅನುಪಸ್ಥಿತಿಯಲ್ಲಿ ನನ್ನ ತಮ್ಮ ಮುಕುಂದ ಮತ್ತು ನಾನು ಆ ಕಾರ್ಯಕ್ರಮಗಳನ್ನು ನಡೆಸಬೇಕಾಯಿತು.

ಸಾವನ್ನು ಸ್ಥಿತ ಪ್ರಜ್ಞನಂತೆ ಸ್ವೀಕರಿಸಿದ ಬಗೆ: ಎಲ್ಲವನ್ನೂ ಚೆನ್ನಾಗಿ ವ್ಯವಸ್ಥಿತವಾಗಿ ಮಾಡುವ ಅವನ ಗುಣ ಕೊನೆಯವರೆಗೂ ಹಾಗೇ ನಡೆದುಕೊಂಡು ಬಂತು. ಜವರಾಯ ಬಂದಾಗಲೂ ಅವನನ್ನು ಕೊಂಚ ನಿಧಾನಿಸುವಂತೆ ಹೇಳಿ, ಆಸ್ಪತ್ರೆಯ ಐ.ಸಿ.ಯು.ನಿಂದ ಫೋನ್ ಮಾಡಿ ನಮಗೆಲ್ಲ ಹೇಳಬೇಕೆಂದರೆ ಅವನ ಸಂಯಮವನ್ನು ಏನೆಂದು ಹೇಳೋಣ?

ಏಪ್ರಿಲ್, ೧ನೆಯ ತಾರೀಖು, ೨೦೧೮ ಬೆಳಿಗ್ಗೆ ಸುಮಾರು ೭.೩೦ ಗಂಟೆ, ನನಗೆ ಫೋನ್ ಬಂತು. ನಾನು 'ಹಲೋ' ಎಂದೆ, 'ನಾನಮ್ಮ ರಾಜು' ಎಂದ, ನಾನು 'ಹೇಗಿದ್ದೀಯ ಎಂದೆ'. 'ನಾನು ಆಸ್ಪತ್ರೆಯ ಐ.ಸಿ.ಯು.ನಲ್ಲಿದ್ದೀನಿ. ಥೆರಪಿ ಆರಂಭಿಸುತ್ತಾರೆ. ಆಮೇಲೆ ಮಾತಾಡೋಕ್ಕೆ ಆಗೊಲ್ಲ ಅಂತ ಕಾಣುತ್ತೆ. ನಾನು ಈ ಸಲ ಇಲ್ಲಿಂದ ಮನೆಗೆ ಹಿಂತಿರುಗಿ ಹೋಗಲ್ಲ. ಇಲ್ಲಿಂದಲೇ..' 'ಅಯ್ಯೋ ರಾಜು, ಹಾಗೆ ಹೇಳಬೇಡ.' 'ಹೌದಮ್ಮ, ನಾನು ಹೋಗುತ್ತೇನೆ. ನಿನಗೂ, ನಿನ್ನ ಮಗಳು, ಅಳಿಯ, ಮೊಮ್ಮಗಳು, ಮಗ, ಸೊಸೆ, ಇನ್ನೊಬ್ಬ ಮೊಮ್ಮಗಳು ಎಲ್ಲರಿಗೂ ನನ್ನ ಆಶೀರ್ವಾದ ತಿಳಿಸಿಬಿಡು' ಎಂದು ಹೇಳಿ ಫೋನ್ ಇಟ್ಟುಬಿಟ್ಟ. ಇದೇ ರೀತಿ ನನ್ನ ಅಣ್ಣ ಮೋಹನ್‌ರಾಂಗೂ ಫೋನ್ ಮಾಡಿ ಮಾತಾಡಿದನಂತೆ. ಮರುದಿನವೇ, ಏಪ್ರಿಲ್ ೨ನೇ ತಾರೀಖು ಅವನು ತೀರಿಹೋದ.

ಅಂತೂ ರಾಜು ಸದಾ ತನ್ನ ನಿಯಂತ್ರಣದಲ್ಲಿ ಇದ್ದ ಮನುಷ್ಯ. ಸ್ವಭಾವ ಮೃದು, ಯಾರನ್ನೂ ನೋಯಿಸುತ್ತಿರಲಿಲ್ಲ. ಮನೆಯನ್ನೂ ಅಚ್ಚುಕಟ್ಟಾಗಿ ನಿಭಾಯಿಸುತ್ತಿದ್ದ. ಎಲ್ಲರಿಗೂ ಅವನು ಬೇಕಾದವನಾಗಿದ್ದ. ನನಗೆ ಸಿಕ್ಕ ಇಂತಹ ಅಣ್ಣಂದಿರು ಎಲ್ಲರಿಗೂ ಸಿಗಲಿ ಎಂದು ಹಾರೈಸುತ್ತೇನೆ.

■

# ಕಿರಿಯಣ್ಣ ರಾಜು

**–ಹೆಚ್. ವೈ. ಮುಕುಂದ**

ಯೋಗಾನರಸಿಂಹಂ ಮತ್ತು ಸರಸ್ವತಿ ದಂಪತಿಗಳಿಗೆ ನಾವು ಎಂಟು ಮಕ್ಕಳು. ಮೊದಲನೆಯವ ಶಾರದಾ ಪ್ರಸಾದ (ಶೌರಿ), ಅವನ ಬೆನ್ನಿಗೆ ಬಿದ್ದವರು ಕ್ರಮವಾಗಿ, ಲಕ್ಷ್ಮೀ (ಪಾಪು), ನಾರಾಯಣ ದತ್ತ (ನಾಣಿ), ಮೋಹನ ರಾಮ (ಮೋಹನ್), ಕಸ್ತೂರಿ (ಮಿ), ರಾಜಗೋಪಾಲ (ರಾಜು), ನೀರಜ (ಬಿಡ್ಡಿ) ಮತ್ತು ಕೊನೆಯವ ನಾನು ಮುಕುಂದ (ಪುಟ್ಟಿ).

ನಮ್ಮ ತಾತ (ತಂದೆಯ ತಂದೆ) ನಾರಣಪ್ಪ ಹೊಳೇನರಸೀಪುರದವರು. ವೈದಿಕ ಕುಟುಂಬ. ಪೌರೋಹಿತ್ಯದಲ್ಲಿ ಆಸಕ್ತಿ ಇಲ್ಲದವರು. ಓದಿ ಮುಂದೆ ಬರಬೇಕೆಂಬ ಹಂಬಲ ಪ್ರಬಲವಾಗಿ ತಾತ ಮೈಸೂರಿಗೆ ನಡೆದು (ಅಕ್ಷರಶಃ) ವಲಸೆ ಬಂದವರು. ನೆಂಟರ ಮನೆಯಲ್ಲಿ ಇದ್ದುಕೊಂಡು ಮೆಟ್ರಿಕ್ಯುಲೇಶನ್ ಪಾಸು ಮಾಡಿದವರು, ರಾತ್ರಿಯ ಓದೆಲ್ಲ ಬೀದಿ ದೀಪದ (ಎಣ್ಣೆದೀಪ) ಬೆಳಕಿನಲ್ಲಿ, ನಿದ್ದೆಯಿಂದ ಜೋಂಪು ಬಂದರೆ ತಕ್ಷಣ ಎಚ್ಚರವಾಗಲೆಂದು ತಮ್ಮ ನೀಳಕೇಶವನ್ನು ಆ ದೀಪದ ಕಂಬಕ್ಕೇ ಕಟ್ಟಿಕೊಳ್ಳುವರು!

ಕಿರಿಯಣ್ಣ ರಾಜು (ರಾಜಗೋಪಾಲ) ಹುಟ್ಟಿದ್ದು ೧೯೩೫ನೇ ಇಸವಿ, ಮೇ ತಿಂಗಳು. ನಾನು ಹುಟ್ಟಿದ್ದು ೧೯೪೫ನೇ ಇಸವಿ, ನವೆಂಬರ್ ತಿಂಗಳು. ಹೀಗಾಗಿ ನಮ್ಮಿಬ್ಬರಿಗೆ ಅಂತರ ಹತ್ತೂವರೆ ವರ್ಷಗಳು. ರಾಜುವಿಗೆ ಅಪ್ಪ ಅಮ್ಮ ಇಟ್ಟ ಹೆಸರು



ರಾಜ. ನಮ್ಮ ಸೋದರಮಾವ ಗೋಪಾಲ್, ಅವನಿಗೆ ಬಹಳ ಪ್ರಿಯ. ಅಚ್ಚುಮೆಚ್ಚಿನ ಮಾವನ ಹೆಸರನ್ನು ತನ್ನ ಹೆಸರಿಗೆ ಸೇರಿಸಿಕೊಂಡು ರಾಜ್‌ಗೋಪಾಲ್ ಅಂತ ಹೆಸರು ಬದಲಿಸಿಕೊಂಡ. ಕನ್ನಡದಲ್ಲಿ ಅರ್ಧಾಕ್ಷರಗಳಿಲ್ಲ. ರಾಜಗೋಪಾಲ ಎಂದೇ ಬರೆಯಬೇಕು ಅಂದರೂ, ಇಲ್ಲ ನಾನು ಇಟ್ಟುಕೊಂಡಿರುವ ಹೆಸರು ರಾಜ್‌ಗೋಪಾಲ್ ಎನ್ನುವವನು.

ಚಿಕ್ಕಂದಿನ ಒಂದು ನೆನಪು ಬರುತ್ತೆ. ನನಗೆ ನಾಲ್ಕೊ ಐದೋ ವರ್ಷ ಇರಬಹುದು. ಅಮ್ಮ ಕೊಬ್ಬರಿ ಮಿಠಾಯಿ ತಯಾರಿಸುತ್ತಿದ್ದಾಳೆ. ಸಿಹಿ ತಿಂಡಿ ಎಂದರೆ ನನಗೆ ಮೈಯೆಲ್ಲಾ ಬಾಯಿ. ಅಮ್ಮನ ಪಕ್ಕದಲ್ಲೆ ಒಲೆಯ ಮುಂದೆ ಕುಳಿತೆ, ಕಾಯುತ್ತ. ಮಾಡಲು ಸುಲಭವಾದ ಸರಳ ಸಿಹಿ ತಿಂಡಿ ಅದಲ್ಲವೆ? ಎಷ್ಟು ಕಾದರೂ ಸಿದ್ಧವಾಗುತ್ತಿಲ್ಲವಲ್ಲ ಅಂತ ನನಗೆ ಅಸಹನೆ. ಕಡೆಗೂ ಪಾಕ ಹದಕ್ಕೆ ಬಂತು. ಪಾತ್ರೆಯಿಂದ ತುಪ್ಪ ಸವರಿದ ತಟ್ಟೆಗೆ ಸುರಿದಳು. ಮಿಠಾಯಿ ಮಾಡಲು ಅಮ್ಮ ಬಳಸುತ್ತಿದ್ದುದು ಒಂದು ಹಿತ್ತಾಳೆ ಪಾತ್ರೆ, ತಳ ಸ್ವಲ್ಪ ತೆಳ್ಳಗಿದೆ, ಇದ್ದಲು ಒಲೆ, ಈಗಿನಂತೆ ಗ್ಯಾಸ್ ಒಲೆ, ನಾನ್‌ಸ್ಟಿಕ್ ಪ್ಯಾನ್ ಇರಲಿಲ್ಲ. ಹೀಗಾಗಿ ಮಿಠಾಯಿ ಮಾಡಿದ ಪಾತ್ರೆಯ ಅಡಿಯಲ್ಲಿ ಸ್ವಲ್ಪ ಅಂಟಿಕೊಂಡಿರುತ್ತಿತ್ತು. ಅದು ಆರಿದ ಮೇಲೆ ಕೆರೆದು ಕೈಗೆ ಅಮ್ಮ ಹಾಕಿದರೆ ಬಲು ಖುಷಿ. ಆ ಪುಡಿ ಸ್ವಲ್ಪ ಕಂದು ಬಣ್ಣಕ್ಕೆ ತಿರುಗಿರುತ್ತಿತ್ತು. ಆಹಾ ಅದರ ರುಚಿ ಹೇಗೆ ವರ್ಣಿಸಲಿ! ಆದರೆ ಅಮ್ಮ ಅಂದು ಪಾತ್ರೆ ಇನ್ನೂ ಬಿಸಿಯಿದೆ ಆರಬೇಕು ಎನ್ನುತ್ತ ಇನ್ನೇನನ್ನೋ ಮಾಡಲು ಹೊರ ನಡೆದಳು. ನನಗೆ ಅಳು ಬರುವುದೊಂದೇ ಬಾಕಿ. ಮುಖ ದಪ್ಪಗೆ ಮಾಡಿ ಅಲ್ಲೇ ಕುಳಿತೆ. (ನನ್ನ ಆ ಮುಖಭಂಗಿಯನ್ನು 'eyes down mouth front' ಅಂತ ಅಕ್ಕ ಅಣ್ಣಂದಿರು ಅನ್ನುತಿದ್ದುದುಂಟು.) ಆ ಸಮಯಕ್ಕೆ ಸರಿಯಾಗಿ ರಾಜು ಅಡುಗೆ ಮನೆಗೆ ಬಂದ. ನಾನು ಏತಕ್ಕೆ ಕಾಯುತ್ತಿರುವೆ ಎಂಬುದನ್ನು ತಕ್ಷಣ ಗ್ರಹಿಸಿದ. ಇರು ನಾನು ಕೊಡುವೆ ಎನ್ನುತ್ತ ಸರಸರಸನೆ ಸವಟಿನಿಂದ ಪಾತ್ರೆಯ ತಳ ಕೆರೆದವನೆ 'ಹಿಡಿ' ಎನ್ನುತ್ತ ನನ್ನ ಅಂಗೈಗೆ ಹಾಕಿದ. ಬಿಸಿ ಆರಿರಲಿಲ್ಲ, ಎಳೆ ಚರ್ಮ, ಸುಟ್ಟಿತು. ನಾನು ನೋವಿಗೆ ಚೀರಿದೆ. ಸದ್ದು ಕೇಳಿ ಅಮ್ಮ ಧಾವಿಸಿ ಬಂದಳು. ನಡೆದಿರುವುದು ಅರ್ಥವಾಯಿತು. 'ಬಿಸಿ ಇರುತ್ತೆ ಎನ್ನುವಷ್ಟೂ ಯೋಚಿಸದೆ ಹೀಗೆ ಮಾಡಿದೆಯಲ್ಲ' ಎಂದು ರಾಜುವನ್ನು ಗದರಿಕೊಂಡಳು, ನನ್ನ ಕೈ ಒರೆಸಿ ಬರ್ನಾಲ್ ಮುಲಾಮು ಹಚ್ಚಿ ಬ್ಯಾಂಡೇಜು ಮಾಡಿದಳು, ರಾಜುವಿಗೆ ಪಶ್ಚಾತ್ತಾಪವಾಯಿತು. ತಿಳಿಯದೆ ನಡೆದ ಈ ಅಚಾತುರ್ಯಕ್ಕೆ ಅಮ್ಮನಿಗಲ್ಲದೆ ನನಗೂ ಕ್ಷಮಾಪಣೆ ಕೇಳಿದ.

ಆ ಕಾಲದ ಪ್ರಥಮ ಚಿಕಿತ್ಸೆ (first aid) ಗಮನಿಸಿ. ಸುಟ್ಟಗಾಯಕ್ಕೆ ನೀರು ಸೋಕಿಸದೆ ಜಿಡ್ಡು ಹಚ್ಚುವದು. ಈಗಾದರೊ ಸುಟ್ಟ ಗಾಯಕ್ಕೆ ತಕ್ಷಣ ಹೇರಳವಾಗಿ ತಣ್ಣೀರು ಹಾಕಿ, ಚರ್ಮ ನೀರಿನಂಶ ಕಳೆದುಕೊಳ್ಳದಂತೆ ಮುತುವರ್ಜಿವಹಿಸಿ ಎನ್ನುತ್ತಾರೆ.

ರಾಜುವಿನ ಚಿಕ್ಕಂದಿನ ಹವ್ಯಾಸಗಳಲ್ಲಿ ಕ್ರಿಕೆಟ್ ಆಟ ಒಂದು. ಆ ಕಾಲದಲ್ಲಿ

ಕ್ರಿಕೆಟಿಗೆ A Gentleman's Game ಎಂಬ ಹೆಗ್ಗಳಿಕೆ ಇತ್ತು. ರಾಜುವಿನ ಬಳಿ ಟೆಸ್ಟ್ ಕ್ರಿಕೆಟ್‌ಗೆ ಸಂಬಂಧಿಸಿದ ಅಪರೂಪ ಮತ್ತು ಉತ್ತಮ ಚಿತ್ರಗಳ ಒಂದು ಸಂಗ್ರಹವೇ ಇತ್ತು. ಇಲ್ಲಸ್ಟ್ರೇಟೆಡ್ ವೀಕ್ಲಿ ಆಫ್ ಇಂಡಿಯಾ ಸ್ಪೋರ್ಟ್ಸ್ ಎಂಡ್ ಪಾಸ್ಟೈಮ್ (The Illustrated Weekly of India, Sports and Pastime) ಮುಂತಾದ ಮ್ಯಾಗಜೈನ್‌ಗಳಲ್ಲಿ ಬಂದ ಚಿತ್ರಗಳನ್ನು ಕತ್ತರಿಸಿ ಬಿಳಿ ಹಾಳೆಗಳ ಮೇಲೆ ಗೋಂದಿನಿಂದ ಅಂಟಿಸಿ ತಯಾರಿಸಿದ Album. ಅಂತೆಯೇ ಅವನಲ್ಲಿ ಅಂಚೆ ಚೀಟಿ (Postage Stamps)ಗಳ ಒಂದು ಸಂಗ್ರಹ ಕೂಡ ಇತ್ತು. ಇದು ರಾಜುವಿಗೆ ಶೌರಿಯಿಂದ ಬಂದ ಬಳುವಳಿ. ರಾಜು ಕಾಲೇಜಿಗೆ ಸೇರಿದ ಮೇಲೆ ಈ ಎರಡೂ ಸಂಗ್ರಹಗಳನ್ನು ನನಗೆ ಕೊಟ್ಟ. ನನಗೆ ಹಿಗ್ಗೋಹಿಗ್ಗು. ಜಂಭದಿಂದ ಭದ್ರವಾಗಿ ನನ್ನ ಬಳಿ ಇಟ್ಟುಕೊಂಡೆ. ಅಂತೆಯೇ ನಾನು ಹೈಸ್ಕೂಲ್ ಮುಗಿದು ಕಾಲೇಜಿಗೆ ಬಂದಾಗ ಆ ಎರಡೂ ಸಂಗ್ರಹಗಳನ್ನು ಅತ್ತಿಗೆ ವಿಮಲರ ತಮ್ಮ ಜ್ಯೋತೀಶ್ವರನಿಗೆ ವರ್ಗಾಯಿಸಿದೆ. ಅದೇಕೊ ಇಂಥ ಹವ್ಯಾಸಗಳು ಬಾಲಿಶ, ಕಾಲೇಜಿಗೆ ಬಂದ ನಂತರ ಮುಂದುವರಿಸಬಾರದು ಎಂಬ ಒಂದು ನಂಬುಗೆ! ನಾನು ಕ್ರಿಕೆಟ್ ಆಡಲು ಮೊದಲಿಟ್ಟಾಗ ಬ್ಯಾಟು ಹಿಡಿಯುವುದನ್ನು ಕಲಿಸಿದವನೆ ರಾಜು. ನನ್ನ ಆಸಕ್ತಿ ಬೆಳೆಯುತ್ತ ಹೋದಾಗ ಬೇರೆ ಯಾರ ಬಳಿಯಾದರೂ ಹೇಳಿಸಿಕೋ ನನಗೆ ಬರುವುದು ಇಷ್ಟೇ ಎಂದ.

ರಾಜುವಿನ ಬೈಸಿಕಲ್‌ನಲ್ಲೆ ನಾನು ಸೈಕಲ್ ಕಲಿತದ್ದು. ಅಂದಿನ ದಿನಗಳಲ್ಲಿ ಸೈಕಲ್‌ನ ಹ್ಯಾಂಡಲ್ ಮೇಲೆ ಹೆಸರು ಕೆತ್ತಿಸಿಕೊಳ್ಳುವ ಪದ್ಧತಿ. ಆದರೆ ರಾಜುವಿನ ಸೈಕಲ್ ಹ್ಯಾಂಡಲ್ ಮೇಲೆ ಇದ್ದ ಹೆಸರು ಹೆಚ್. ನರಸಿಂಹ ಮೂರ್ತಿ! ಏಕೆಂದರೆ ರಾಜು ಅದನ್ನು ನರಸಿಂಹಮೂರ್ತಿಯವರಿಂದ ಕೊಂಡಿದ್ದ. ಈತ ಬೇರಾರು ಅಲ್ಲ ಮುಂದೆ ಮಾ. ಹಿರಣ್ಣಯ್ಯ ಎಂತಲೇ ಪ್ರಖ್ಯಾತಿ ಪಡೆದ ರಾಜುವಿನ ಇಂಟರ್‌ಮೀಡಿಯಟ್ ಕಾಲೇಜು ಸ್ನೇಹಿತ! ಆದರೆ ಮುಂದೊಂದು ದಿನ ಈ ಸೈಕಲ್ ಕಳೆದುಹೋಗಿ ಪೊಲೀಸ್ ಕಂಪ್ಲೇಂಟ್ ಕೊಡುವಾಗ ಹೆಸರಿನ ವಿಚಾರ ಸ್ವಲ್ಪ ಫಜೀತಿಯೇ ಆಯಿತು! ಇಂಟರ್‌ಮೀಡಿಯಟ್ ಕಾಲೇಜಿಗೆ ಬರುವಾಗ ರಾಜುವಿನ ಹವ್ಯಾಸಗಳು ಬಾನುಲಿ (radio) ನಾಟಕ, ರಂಗ (stage) ನಾಟಕ ಆಡುವುದು, ಹಿಂದಿ ಚಿತ್ರಗೀತೆಗಳನ್ನು, ಭಾವಗೀತೆಗಳನ್ನು ಹಾಡುವುದು ಮತ್ತು ಎಡೆಬಿಡದೆ ಪುಸ್ತಕಗಳನ್ನು ಓದುವುದು. ರಾಜು ಇಂಟ್‌ಮೀಡಿಯಟ್ ಮಾಡಿದ್ದು ಶಾರದಾವಿಲಾಸ ಕಾಲೇಜಿನಲ್ಲಿ. ಅಲ್ಲಿಯ ವರ್ಷಾಚರಣೆ (annual day)ಗೆ ಮಾಡಿದ ರಂಗನಾಟಕದಲ್ಲಿ ರಾಜುವೂ ಪಾತ್ರವಹಿಸಿದ್ದ. ನಾಟಕ ನೋಡಲು ನಾನು ಹೋಗಿದ್ದೆ. ನನಗೆ ೬ರ ವಯಸ್ಸಿನಲ್ಲಿ ಸಂಜೆ ಕತ್ತಲಿನಲ್ಲಿ ಒಬ್ಬನೇ ಹೋಗುವುದು ಒಂದು ಹೊಸ ಅನುಭವ. ಭಯ, ರೋಮಾಂಚನ ಎರಡೂ ಜೊತೆ ಜೊತೆಗೆ! ನಾಟಕದ ಹೆಸರಾಗಲೀ ರಾಜುವಿನ ಪಾತ್ರ ಯಾವುದು ಎಂಬುದಾಗಲಿ ಈಗ



ನೆನಪಿಲ್ಲ. ಆದರೆ ಅವನು ರಂಗ ಪ್ರವೇಶಿಸುತ್ತಿದಂತೆಯೆ ಅವನ ಗುರುತು ಸಿಕ್ಕಿತು (ಅವನು ಬೇರೆ ವೇಷದಲ್ಲಿದ್ದರೂ) ತಕ್ಷಣವೆ ರಾಜು ಎಂದು ಕಿರುಚಿದೆ!

ಈಗ Virtual Reality ಎಂಬುದು ಬಹಳ ಸುದ್ದಿಯಲ್ಲಿ ಇರುವ ವಿಷಯವಷ್ಟೆ. ಆದರೆ ನನ್ನ ಚಿಕ್ಕಂದಿನಲ್ಲೆ ನನಗೆ ಅದು ಅನುಭವಕ್ಕೆ ಬಂದದ್ದು ಹೀಗೆ. ಒಂದು ಸಂಜೆ ಮನೆಯಲ್ಲಿ ಎಲ್ಲರೂ ಕುಳಿತು ರೇಡಿಯೊ ನಾಟಕ ಕೇಳುತಿದ್ದಿವಿ. ನಾಟಕದಲ್ಲಿ ರಾಜುವು ಪಾತ್ರ ವಹಿಸಿದ್ದಾನೆ, ನಾಟಕದ ಕೊನೆಯಲ್ಲಿ ಆ ಪಾತ್ರ ಮರಣ ಹೊಂದಿದೆ. ಚೀರುತ್ತ ಬಿದ್ದು ಪ್ರಾಣ ಕಳೆದುಕೊಂಡಿದ್ದಾನೆ ರಾಜು. ನನಗೆ ಬಹಳ ದುಃಖವಾಗಿದೆ ರಾಜು ಸತ್ತುಹೋದನಲ್ಲ ಎಂದು. ಅಕ್ಕ ಪಾಪುವನ್ನು ಕೇಳುತ್ತಿದ್ದೇನೆ, ರಾಜು ಸತ್ತುಹೋದನೇ? ಎಂದು. ಅವಳು ಇಲ್ಲ ಎಂದರೆ ಅನುಮಾನ, ಮತ್ತೆ ಮತ್ತೆ ಕೇಳುತ್ತಲೆ ಇದ್ದೇನೆ. ಅವಳು ಬಹಳ ಪ್ರಯತ್ನಿಸಿದ್ದಾಳೆ ನಿಜ ತಿಳಿಸಲು. ನನಗೆ ಸರಿಯಾಗಿ ಅರ್ಥವಾಗದು, ದುಃಖ ಮಾತ್ರ ಆಗುತ್ತಲಿದೆ. ಇನಿತು ಸಮಯದಲ್ಲೆ ಮನೆಯ ಗೇಟ್ ಮುಂದೆ ಸೈಕಲ್ ಟ್ರಿಣ್ ಟ್ರಿಣ್ ಕೇಳಿಸುತ್ತಿದೆ. ಪರಿಚಯದ ಟ್ರಿಣ್, ಹೋಗಿ ನೋಡುತ್ತೇನೆ, ಅಲ್ಲಿ ರಾಜು ಬಂದಿದ್ದಾನೆ! ನನಗೆ ಸಂತೋಷ, ಅನುಮಾನ, ಅಪನಂಬಿಕೆ ಎಲ್ಲವು ಒಟ್ಟಿಗೆ ಆಗುತ್ತಿದೆ. ಆಗ ಬಾನುಲಿ ಪ್ರಸಾರ (radio broadcast) ಎಲ್ಲ ಜೀವಂತ (live) ಆಗಿರುತ್ತಿತ್ತು. ಈಗಿನಂತೆ ಮುದ್ರಿತ (recorded) ಅಲ್ಲ. ರಾಜುವಿನ ಧ್ವನಿ ಆಳ (deep) ವಾಗಿಯೂ ಬಹಳ ಅಧಿಕಾರಯುತವಾಗಿಯೂ ಇತ್ತು. ಅವನು ಕೆ. ವಿ. ಅಯ್ಯರ್‌ರ 'ಶಾಂತಲಾ' ನಾಟಕದಲ್ಲಿ ಮಾಡಿದ ವಿಷ್ಣುವರ್ಧನನ ಪಾತ್ರದ ಧ್ವನಿ ಈಗಲೂ ನನ್ನ ಕಿವಿಯಲ್ಲಿ ಗುಂಯಿಗುಡುತ್ತಿದೆ.

ರಾಜುವಿನ ಹಾಡುವ ಕಂಠವೂ ಬಹಳ ಇಂಪು. ಆ ಶಾರೀರದಲ್ಲಿ ಒಳ್ಳೆಯ ಅನುರಣನ (resonance) ಇರುತ್ತಿತ್ತು, ಆಗ ಬಹಳ ಪ್ರಚಲಿತವಾದ ಸೈಗಲ್ ಹಾಗೂ ಪಂಕಜ್ ಮಲ್ಲಿಕರ ಹಿಂದಿ ಹಾಡುಗಳನ್ನು ಸೊಗಸಾಗಿ ಹಾಡುವನು. ಹಲವು ಹಾಡುಗಳು ಜ್ಞಾಪಕಕ್ಕೆ ಬರುತ್ತಿವೆ:

ಕೆ. ಎಲ್. ಸೈಗಲ್ ಹಾಡಿರುವ ಮೊರ ನೈಹರ್ ಛೂತೋ ಹಿ ಜಾನೆ – ಸ್ಟ್ರೀಟ್ ಸಿಂಗರ್ (೧೯೩೮)

ಸೋಜ ರಾಜಕುಮಾರಿ ಸೋಜ – ಜಿಂದಗಿ (೧೯೪೦)

ದಿಯ ಜಲಾವ್ – ತಾನ್‌ಸೇನ್ (೧೯೪೩)

ಆಬ್ ದಿಲ್ ಹಿ ಟೂಟ್ ಗಯ – ಶಹಜಹಾನ್ (೧೯೪೬)

ಮತ್ತು ಒಂದು ಭಜನ್, ಮಧುಕರ ಶಾಮ ಹಮಾರೆ ಚೋರ್.

ಪಂಕಜ್ ಮಲ್ಲಿಕ್ ಹಾಡಿರುವ ಆಯಿಬಹಾರ್ ಆಜ್ – ಡಾಕ್ಟರ್ (೧೯೪೧)

ಮಧ ಬರಿ ರುತ್ ಜವ – ನರ್ತಕಿ (೧೯೪೦)

ಯೆ ಕೌನ್ ಆಯ ಸವೇರೆ ಸವೇರೆ – ನರ್ತಕಿ (೧೯೪೦)

ದೋ ನೈನ ಮತ್‌ವಾಲ್ – ಮೇರೆ ಬೆಹನ್ (೧೯೪೪)

ಪಿಯ ಮಿಲನ ಕೊ ಜಾನ – ಕಪಾಲ್ ಕುಂಡಲಿ (೧೯೩೯).

ರಾಜು ನಮ್ಮ ದೇಶದಲ್ಲಿ ಇದ್ದಷ್ಟು ವರ್ಷಗಳೂ ಜನವರಿ ೧೮ರಂದು ರೇಡಿಯೊ ಸಿಲೋನ್ ಆಯೋಜಿಸುತ್ತಿದ್ದ ಕೆ. ಎಲ್. ಸೈಗಲ್ ದಿನ ತಪ್ಪದೆ ಕೇಳುವನು.

ಕನ್ನಡ ಭಾವಗೀತೆ ಲಘು ಸಂಗೀತದಲ್ಲೂ ರಾಜುವಿಗೆ ಬಹಳ ಆಸಕ್ತಿ. ಭಾವಪೂರ್ಣವಾಗಿ ಹಾಡುವ ದ. ರಾ. ಬೇಂದ್ರೆಯವರ ಇಳಿದು ಬಾ ತಾಯಿ ಇಳಿದು ಬಾ (ಪಿ. ಕಾಳಿಂಗರಾಯರು ರಾಗ ಸಂಯೋಜಿಸಿ, ಹಾಡಿ ಜನಪ್ರಿಯಗೊಳಿಸಿದ್ದು), ಹಿಂದ ನೋಡದ ಗೆಳತಿ, ರಾಜುವೇ ರಾಗ ಸಂಯೋಜನೆ ಮಾಡಿ ಹಾಡುತ್ತಿದ್ದುದು, ನೆಂಟರಿಷ್ಟರಿಗೆಲ್ಲ ಬಲು ಪ್ರಿಯವಾದ್ದು. ಅಂತೆಯೆ ಗೋಪಾಲಕೃಷ್ಣ ಅಡಿಗರ ಯಾವ ಮೋಹನ ಮುರಳಿ ಕರೆಯಿತು, ಆರದಿರು ಆರದಿರು ಓ ನನ್ನ ಬೆಳಕೆ.

ರಾಜುವಿನ ಪುಸ್ತಕ ಓದು, ವಿಸ್ತಾರ. ಕನ್ನಡ ಮತ್ತು ಇಂಗ್ಲಿಷ್ ಭಾಷೆ ಎರಡರಲ್ಲೂ Classics, Fiction, Non-fiction, Humour, Detectives ಎಲ್ಲವನ್ನೂ ಓದುವನು. ಅಲ್ಲದೆ (Poetry ಮತ್ತು Drama)ದಲ್ಲಿ ಸಹ ವಿಶೇಷ ಆಸಕ್ತಿ. ಪಿ. ಜಿ. ವೊಡಹೌಸನ ಒಣ ಬ್ರಿಟಿಷ್ ಹ್ಯೂಮರ್ (dry British humour) ಅವನಿಗೆ ತುಂಬ ಮೆಚ್ಚು. ಅದರ ಜೀವ್ಸ್ ಪಾತ್ರ ಕೊಂಡಾಡುವನು. ಅವನದು ಅಪಾರ ಜ್ಞಾಪಕಶಕ್ತಿ. ವಾಕ್ಯಗಳೇನು ಇಡೀ ಪ್ಯಾರಗಳನ್ನೆ ಜ್ಞಾಪಕದಿಂದ ಹೇಳಬಲ್ಲ, (The Inimitable Jeeves, Carry on Jeeves ಮತ್ತು Thankyou Jeevesಗಳನ್ನು ಓದಿದಾಗ ಪಟ್ಟ ಆನಂದವನ್ನು ನಮ್ಮೊಡನೆ ಹಂಚಿಕೊಳ್ಳುವನು.

ರಾಜು ಶೈಕ್ಷಣಿಕ ವಿದ್ಯಾಭ್ಯಾಸದಲ್ಲಿ ಚುರುಕು. L.S., S.S.L.C., Inter ಪರೀಕ್ಷೆಗಳನ್ನು ಉತ್ತಮ ರ್‍ಯಾಂಕ್ ಪಡೆದೆ ಗೆದ್ದವನು. B.E. ನಲ್ಲಿ ಸಹ ಮೊದಲ ೩ ವರ್ಷಗಳು ರ್‍ಯಾಂಕ್ ಗಿಟ್ಟಿಸಿದ. ಅಂತ್ಯ ವರ್ಷದಲ್ಲಿ ಮಾತ್ರ ರ್‍ಯಾಂಕ್ ಪಡೆಯಲಿಲ್ಲ ಎಂದು ನನ್ನ ನೆನಪು. ಆ ವೇಳೆಗೆ ಅವನ ಗಮನ ರಂಗ ನಾಟಕಗಳ ಕಡೆಗೆ ವಾಲಿತು, ಅವನ ನಾಟಕದ ಗುರುಗಳು Little Sam's Theatreನ ಚಲುವಯ್ಯಂಗಾರ್ (ಸಂಪತ್). ರಮಾನಾಥ, ಬಾಲಸುಬ್ರಹ್ಮಣ್ಯಂ (ಬಾಲು), ಸುಬ್ಬನರಸಿಂಹ, ಮುತ್ತು, ಎಚ್. ಜಿ. ಸೋಮಶೇಖರರಾವ್, ಅಜ್ಜಂಪುರ ವಿಠಲ ಮುಂತಾದವರು ರಾಜುವಿನ ಸಹ ಕಲಾವಿದರು.

ರಾಜುವಿನದು ಒಳ್ಳೆಯ ಹಾಸ್ಯಪ್ರಜ್ಞೆ, ನಿತ್ಯ ಜೀವನದ ಅನೇಕ ಸಂದರ್ಭಗಳನ್ನು ನಾಟಕೀಯವಾಗಿ ವರ್ಣಿಸುವನು. ಅವನು B.E. ತೇರ್ಗಡೆಯಾದ ಮೇಲೆ ತಾತಾ ಇನ್‌ಸ್ಟಿಟ್ಯೂಟ್‌ನಲ್ಲಿ M.E. ಸೇರುವವರೆಗೆ ಕೆಲವು ತಿಂಗಳುಗಳು ಸುಮ್ಮನೆ ಮನೆಯಲ್ಲಿ



ಕೂರುವಂತಾಯಿತು. ಆ ದಿನಗಳಲ್ಲಿ ರಾಜು ಮಾಡುತ್ತಿದ್ದ ಒಂದು ನಟನೆ ಹೀಗೆ! 'ನನಗೆ ಏನು ಕೆಲಸವಿಲ್ಲ ನನ್ನ ಬಳಿ ದುಡ್ಡಿಲ್ಲ, ನಾನು ಬಡವ ಶರ್ಟು ಕಾಲರ್ ಮೇಲೆ ಬಿಟ್ಟುಕೊಳ್ಳುವ ಅಧಿಕಾರ ನನಗಿಲ್ಲ' ಎನ್ನುತ್ತ ಶರ್ಟಿನ ಕಾಲರನ್ನು ಒಳಕ್ಕೆ ಮಡಚುವನು! ರಾಜು ಎಂಜಿನೀರ್ ಅಲ್ಲವೆ? ಅವನು ಪ್ರಯತ್ನಿಸಿದ reverse engineering ಬಹಳ ಸ್ವಾರಸ್ಯವಾಗಿದೆ. 'ಅಲ್ಪನಿಗೆ ಐಶ್ವರ್ಯ ಬಂದರೆ ಮಧ್ಯರಾತ್ರಿ ಕೊಡೆ ಹಿಡಿದು ಓಡಾಡಿದ' ಎಂಬ ಗಾದೆ ಎಲ್ಲರಿಗೂ ಗೊತ್ತಿರುವುದೆ. ಅಂತೆಯೆ ಗಾದೆ ಮಾತು ಎಂದಿಗೂ ಸುಳ್ಳಾಗುವುದಿಲ್ಲ ಎಂತಲೂ ಪ್ರತೀತಿ. ರಾತ್ರಿ ಮನೆಯ ಒಳಗಡೆ ಒಂದು ಕೊಡೆಯನ್ನು ಬಿಚ್ಚಿ ಹಿಡಿದು ಓಡಾಡುವನು, 'ನಾನು ಅಲ್ಪ' ಎಂದು ಮತ್ತೆ ಮತ್ತೆ ಹೇಳುವನು. 'ರಾತ್ರಿ ಕೊಡೆ ಹಿಡಿದು ಓಡಾಡಿದರೂ ದುಡ್ಡು ಮಾತ್ರ ಬರಲಿಲ್ಲ' ಎನ್ನುವನು! ಈ ಪ್ರಸಂಗವನ್ನು ನನ್ನ ಆಪ್ತಗೆಳೆಯ ಚಿತ್ತರಂಜನ್‌ಗೆ ತಿಳಿಸಿದಾಗ ಅವರಂದದ್ದೂ ಸ್ವಾರಸ್ಯವಾಗಿದೆ, 'ಇಲ್ಲಿ ಒಂದು ಸೂಕ್ಷ್ಮವಿದೆ ನೋಡಿ ರಾಜುವಿನ ಬಳಿ ಮೊದಲೆ ಕೊಡೆ ಇದೆ ಆದ್ದರಿಂದ ಪ್ರಯತ್ನ ವಿಫಲವಾಯಿತು' ಎಂದರು!

ಸ್ನೇಹಿತರು ವಿದ್ಯಾರ್ಥಿದೆಸೆಯಲ್ಲಿ ಗುಂಪು ಕಟ್ಟಿಕೊಂಡು ಸಂಜೆ ಅಡ್ಡಾಡಿ ಬರುವುದು ಅಂದಿಗೂ ಇಂದಿಗೂ ಸಾಮಾನ್ಯ. ರಾಜುವಿನ ಗುಂಪಿನಲ್ಲಿರುತ್ತಿದ್ದ ಗೆಳೆಯರು ಪಾರ್ಥಸಾರಥಿ (ಪಾಚು), ನಾಗರಾಜು (ರಾಯ), ಶ್ರೀಕಂಠಯ್ಯ (ಕಂಠಿ), ರಾಘವೇಂದ್ರ (ರಾಗಣ್ಣ), ಕೃಷ್ಣಮೂರ್ತಿ (ಕಿಟ್ಟ), ರಮಾನಾಥ, ಭಗವಾನ್ ಮುಂತಾದವರು. ನಾನು ಪಿ.ಯು.ಸಿ. ದಾಟಿದ ಮೇಲೆ ನನಗೂ ಎಂದಾದರೋ ಒಂದೊಂದು ದಿನ ಪ್ರವೇಶವಿರುತ್ತಿತ್ತು, ಹೀಗೆ ನಾವೆಲ್ಲರೂ ನೋಡಿ ಬಂದ ಸಿನಿಮಾ 'ಚಂದವಳ್ಳಿಯ ತೋಟ', ಮೈಸೂರಿನ ಪ್ರಭುದೇವ ಟಾಕೀಸಿನಲ್ಲಿ, ಇಂದಿಗೂ ಅಚ್ಚಳಿಯದೆ ಜ್ಞಾಪಕವಿದೆ.

೧೯೬೮ರಲ್ಲಿ ರಾಜು M.E. ಓದಲು I.I.Sc. ಬೆಂಗಳೂರಿಗೆ ತೆರಳಿದ. ಅದೇ ಸಮಯದಲ್ಲಿ ಅಕ್ಕ ಕಸ್ತೂರಿ ಸಹ ಬೆಂಗಳೂರಿಗೆ Mental Health Institute (ಈಗಿನ NIMHANS)ನಲ್ಲಿ DMP ಮಾಡಲು ತೆರಳಿದಳು. ನಾವು ಒಡಹುಟ್ಟಿದವರು ೮ ಜನವಾದರೂ ನನ್ನ ಮೊದಲ ಇಬ್ಬರು ಅಣ್ಣಂದಿರು ನಾನು ಹುಟ್ಟುವ ಮುನ್ನವೇ ಮನೆಯಿಂದ ದೂರ ಹೊರಟಿದ್ದರು. ೧೯೫೩ರಲ್ಲಿ ಹಿರಿಯಕ್ಕನ ಮದುವೆಯಾಗಿ ಗಂಡನ ಮನೆ ಸೇರಿದಳು. ಚಿಕ್ಕಂದಿನಲ್ಲಿ ಆಡಿಸಿ ಪಾಡಿಸಿ ನನ್ನನ್ನು ಬೆಳೆಸಿದವಳು ಅವಳು. (ಅಮ್ಮನ ಆರೋಗ್ಯ ಸೂಕ್ಷ್ಮವಾಗಿದ್ದುದರಿಂದ ಅವಳಿಗೆ ನನ್ನ ಪಾಲನೆ ಸ್ವಲ್ಪ ಕಷ್ಟವೆ ಆಗಿತ್ತು.) ಹೀಗಾಗಿ ನನ್ನ ಹರೆಯದಲ್ಲಿ ಮನೆಯಲ್ಲಿ ನಾನು ಮತ್ತು ಅಕ್ಕ ನೀರಜ ಇಬ್ಬರೇ ಚಿಕ್ಕವರು. ಉಳಿದಂತೆ ಅಮ್ಮ, ಅಪ್ಪ ಮತ್ತು ಅಜ್ಜಿ (ಅಪ್ಪನ ತಾಯಿ). ಅಪ್ಪ ಸರ್ಕಾರಿ ಕೆಲಸದಿಂದ ನಿವೃತ್ತರಾದರು. ಅವರು ತಮ್ಮ ಹೆಚ್ಚಿನ ಸಮಯವನ್ನು ಪ್ರವೃತ್ತಿಯಾದ ಸಂಗೀತಕ್ಕೆ ಹಾಗೂ ಅಧ್ಯಾತ್ಮ (ತರ್ಕ, ಶಂಕರ ಭಾಷ್ಯ) ಕಲಿಕೆಗೆ ಮೀಸಲಿಟ್ಟರು. ನೀರಜ

ಬಿಡುವಿನ ವೇಳೆ ಸಂಗೀತಾಭ್ಯಾಸದಲ್ಲಿ ಕಳೆಯುವಳು. ಈ ಕಾರಣಗಳಿಂದ ನನ್ನ teen-age ನಲ್ಲಿ ನನಗೆ ಒಂಟಿಭಾವ, ಕಷ್ಟಪಟ್ಟೆ. ಏನೋ ಒಂದು ವಿಧದ ಅಳುಕು, ಅಧೈರ್ಯ ನನ್ನಲ್ಲಿ, ಅದನ್ನು ಹತ್ತಿಕ್ಕಲು ಪದೇ ಪದೇ ದೇವರಿಗೆ ನಮಿಸುತ್ತಿರುವುದು. ಈ ವರ್ತನೆ ಬೆಳೆಯುತ್ತ ಅದು ಒಂದು 'compulsive behaviour' ಆಗತೊಡಗಿತು. ಮನೆಯವರು ಗಮನಿಸಿದರೂ ಯಾರೂ ಇದರ ಕುರಿತು ನನ್ನಲ್ಲಿ ಮಾತಾಡಲಿಲ್ಲ. ಪ್ರಾಯಃ ignore ಮಾಡಿದರೆ ಸರಿಹೋಗುತ್ತೆ ಎಂದೆಣಿಸಿರಬೇಕು, ನಾನು ಮಾಡುತ್ತಿರುವುದು ಅಸಹಜ (abnormal) ಎಂದು ತಿಳಿದಿದ್ದರೂ ಬಿಡಲು ಆಗಿರಲಿಲ್ಲ. ರಾಜು ಮೈಸೂರಿಗೆ ಹಿಂತಿರುಗಿದಾಗ ಗಮನಿಸಿದ, ನನ್ನ ಈ ಹೊಸ ವರ್ತನೆಯನ್ನು. ಬಹಳ ಸಹಜವಾಗಿ, ನನ್ನಲ್ಲಿ ವಿಶ್ವಾಸವಿಟ್ಟು ಮಾತನಾಡಿ ತಿಳಿಹೇಳಿದ. ಪ್ರಯತ್ನಪಟ್ಟು ಈ compulsion ನಿಂದ ಹೊರಬರಲು ಸಾಧ್ಯವಾಯಿತು. ರಾಜುವಿಗೆ ನನ್ನ ಕೃತಜ್ಞತೆಗಳು.

೧೯೬೧ರಲ್ಲಿ ರಾಜುವಿನ ಮದುವೆ ಎಲ್. ಜಿ. ವಿಮಲರೊಂದಿಗೆ ನಡೆಯಿತು. ಅತ್ತಿಗೆ ಜಾನಪದ ಹಾಡುಗಳ ಉತ್ತಮ ಗಾಯಕಿ ಎಂದು ಆಗಲೇ ಹೆಸರು ಗಳಿಸಿದ್ದರು. ಕನ್ನಡದ ಪ್ರಕಾಂಡ ಪಂಡಿತ ಎಲ್. ಗುಂಡಪ್ಪನವರ ಎರಡನೆ ಮಗಳು. ಮದುವೆಯ ವೇಳೆಗೆ ರಾಜು M.E. ಮುಗಿಸಿ ರೀಜನಲ್ ಕಾಲೇಜ್ ಆಫ್ ಇಂಜಿನಿಯರಿಂಗ್, ವಾರಂಗಲ್ (Regional College of Engineering, Warangal)ನಲ್ಲಿ ಅಧ್ಯಾಪಕನಾಗಿದ್ದ. ನಾನು ೧೯೬೩ರಲ್ಲಿ ಪಿ.ಯು.ಸಿ. ಮುಗಿಸಿದೆ. ಮೆಡಿಕಲ್‌ಗೆ ಪ್ರವೇಶ ಸುಲಭವಾಗಿ ಸಿಗುವಷ್ಟು ಒಳ್ಳೆಯ ಅಂಕ ಬಂದಿರಲಿಲ್ಲ. ಆ ದಿನಗಳನ್ನು ನನ್ನ ಗಮನವೆಲ್ಲ ಕ್ರಿಕೆಟ್ ಆಟದ ಕಡೆಗೆ. ಏನೊ ದೊಡ್ಡ ಆಟಗಾರನಾಗುವೆನೆಂಬ ಭ್ರಮೆ! ಮೆಡಿಕಲ್‌ಗೆ ಸಿಗದಿದ್ದರೆ ಮತ್ತೇನು ಓದುವುದು ಎಂದು ಚಿಂತಿಸುವಾಗ ರಾಜುವಿನ ಸಹ ಅಧ್ಯಾಪಕ ಅಪ್ಪಯಣ್ಣ ಎಂಬುವರು Bachelor in Pharmacy Science (B. Pharma) ಎಂಬ ಕೋರ್ಸನ್ನು ಮೈಸೂರು ವಿಶ್ವವಿದ್ಯಾಲಯ ಆ ವರ್ಷ ಪ್ರಾರಂಭಿಸುತ್ತಿರುವ ವಿಷಯ ತಿಳಿಸಿದರು. ಅರ್ಜಿ ಸಲ್ಲಿಸಿದೆ, Interview ನಂತರ ಸೀಟೂ ದೊರೆಯಿತು. ಹೀಗೆ ನಾನು ಫಾರ್ಮಸಿ ಓದಿದ್ದು.

೧೯೬೬ರಲ್ಲಿ ರಾಜು ಅಮೇರಿಕೆಗೆ ತೆರಳಿದ. ಫಿಲಡೆಲ್ಫಿಯದ ಪೆನ್ ಸ್ಟೇಟ್ ಯುನಿವರ್ಸಿಟಿಯಲ್ಲಿ (ಪಿಹೆಚ್.ಡಿ.) ಮಾಡುವ ಅವಕಾಶ ಅವನಿಗೆ ಒದಗಿಬಂತು. ಅಷ್ಟು ಹೊತ್ತಿಗೆ ಮೊದಲ ಮಗಳು ಮಾಧವಿ ಹುಟ್ಟಿದ್ದಳು. ಅಮೆರಿಕೆಯಲ್ಲೇ ಉಳಿದುಬಿಡುವ ಯೋಚನೆ ಏನೂ ಅವನಿಗೆ ಆಗ ಇರಲಿಲ್ಲ. ಆ ವಿಚಾರವನ್ನು ಆಗಾಗ್ಗೆ ನೆನೆಯುವನು. ಆದರೇನು ಅವನು ಅಲ್ಲಿಯೆ ಉಳಿದ. ಅಮೇರಿಕೆಯಲ್ಲಿ ಹುಟ್ಟಿದ ಇನ್ನಿಬ್ಬರು ಮಕ್ಕಳು, ಚೇತನಾ ಮತ್ತು ಶ್ರೀರಾಮ. ರೇತಯಾನ್ ಕಾರ್ಪೊರೇಷನ್ನಿನಲ್ಲಿ (Raythion Corporation) Consulting Engineer ಆಗಿ ಮತ್ತು ವಿಲನೋವ ವಿಶ್ವವಿದ್ಯಾಲಯದಲ್ಲಿ



Adjunct Professor ಆಗಿ ಅನೇಕ ವರ್ಷಗಳ ಕಾಲ ಕೆಲಸ ಮಾಡಿದ. ಜೊತೆ ಜೊತೆಗೇ ಕನ್ನಡ ಭಾಷೆಯ ನಂಟು ಪೋಷಿಸಿ ಬೆಳೆಸಿಕೊಳ್ಳುತ್ತ ನಡೆದ. ನಮ್ಮ ಭಾರತೀಯ ಸಂಸ್ಕೃತಿಯನ್ನು ಆಳವಾಗಿ ಅಭ್ಯಸಿಸುತ್ತ ಅಮೇರಿಕೆಯಲ್ಲೆ ಜನಿಸಿದ ನಮ್ಮ ಮುಂದಿನ ಪೀಳಿಗೆಗೆ ಇದರ ಪರಿಚಯ ಹೇಗೆ ಮಾಡುವುದು ಎಂದು ಗಾಢವಾಗಿ ಯೋಚಿಸಿದ ರಾಜು ದಂಪತಿಗಳು Indus ಎಂಬ ಸಂಸ್ಥೆಯನ್ನು ಪ್ರಾರಂಭಿಸಿ ನಡೆಸಿದರು.

ಕನ್ನಡ ಸಾಹಿತ್ಯ ಕುರಿತ ವಿಚಾರ ವಿನಿಮಯ ಗೆಳೆಯರಾದ ಪಿ. ಶ್ರೀನಿವಾಸರಾಯರು, ಸುಮತೀಂದ್ರ ನಾಡಿಗ, ಎಚ್. ಕೆ. ನಂಜುಂಡಸ್ವಾಮಿಗಳೊಡನೆ. ಅಂತೆಯೇ ನಾಗಲಕ್ಷ್ಮೀ – ಹರಿಹರೇಶ್ವರ ದಂಪತಿಗಳು 'ಅಮೆರಿಕನ್ನಡ' ಹೊರತಂದಾಗ ಬಹಳ ಸಂತೋಷಪಟ್ಟು ತಾನೂ ಆಗಾಗ್ಗೆ ಅದಕ್ಕೆ ಲೇಖನಗಳನ್ನು ಕಳಿಸುವನು. ಹಾಗೆ ಅವನು 'ಗಾಂಧಾರಿ' ಪಾತ್ರ ವಿಮರ್ಶೆ ಕಳಿಸಿದಾಗ ಅದನ್ನು ಓದಿ ಪಟ್ಟ ಸಂತೋಷಕ್ಕೆ ಅಂದು ಪಾಯಸದ ಅಡುಗೆ ಮಾಡಿದ್ದಾಗಿ ನಾಗಲಕ್ಷ್ಮೀರವರು ರಾಜು ತೀರಿಕೊಂಡ ಸಮಯದಲ್ಲಿ ಸ್ಮರಿಸಿಕೊಂಡದ್ದು ಉಂಟು.

ಕನ್ನಡ ಸಾಹಿತ್ಯರಂಗ ಅಮೆರಿಕೆಯಲ್ಲಿ ಸ್ಥಾಪಿತವಾದ ಮೇಲೆ ರಾಜು ತನ್ನ ಸಾಹಿತ್ಯ ಕೃಷಿಯನ್ನು ನಾಗ ಐತಾಳ, ನಳಿನಿ ಮಯ್ಯ, ಮೈ. ಶ್ರೀ. ನಟರಾಜ, ಗುರುಪ್ರಸಾದ ಕಾಗಿನೆಲೆ, ಗುಂಡು ಶಂಕರ, ರಂಗಾಚಾರ್ ಮುಂತಾದ ಸ್ನೇಹಿತರೊಂದಿಗೆ ಮುಂದುವರೆಸಿದ.

ಅಮೆರಿಕೆಯಿಂದ ಹಲವು ವರ್ಷಗಳಿಗೊಮ್ಮೆ ನಮ್ಮ ದೇಶಕ್ಕೆ ಬರುವನು. ಬಂದಾಗ ನೆಂಟರಿಷ್ಟರಲ್ಲದೆ ಹಿರಿಯ ಸಾಹಿತಿಗಳನ್ನು ನೋಡಿ ಸಾಹಿತ್ಯ, ಸಂಸ್ಕೃತಿ ವಿಷಯವಾಗಿ ವಿಚಾರ ವಿನಿಮಯ ಮಾಡಿ, ನಮಸ್ಕರಿಸಿ, ಪುನೀತಭಾವದಿಂದ ಹಿಂತಿರುಗುವನು. (ಈ ಕ್ರಮ ನನ್ನ ನಾಲ್ಕೂ ಅಣ್ಣಂದಿರಲ್ಲಿ ನಾನು ಕಂಡಿದ್ದೇನೆ.) ಡಿವಿಜಿ., ಪುತಿನ, ತೀನಂಶ್ರೀ, ವಿಸೀ, ಎ. ಎನ್. ಮೂರ್ತಿರಾಯರು, ಹೀಗೆ. ಈ ಹಿರಿಯರ ಕಾಲ ಸರಿದ ಮೇಲೆ ಪ್ರಭುಶಂಕರ, ಧ್ವನ್ಯಾಲೋಕದ ಸಿ.ಡಿ.ನ, ಯು. ಆರ್. ಅನಂತಮೂರ್ತಿ, ಎಚ್. ಎಸ್. ವಿ. ಅವರುಗಳನ್ನು ನೋಡಿ ಬರುವನು.

ರಾಜು ಒಳ್ಳೆಯ ಪ್ರಬಂಧಕಾರ (essayist), ಹಲವು ಸೊಗಸಾದ ಪ್ರಬಂಧಗಳನ್ನು ಬರೆದಿದ್ದಾನೆ, ಅವನ ಶೈಲಿ ಸ್ವಲ್ಪ descriptive (ಅಮ್ಮ ಮತ್ತು ಹಿರಿಯಣ್ಣನ direct and briefಗೆ ವಿರುದ್ಧ). ಹಾಗಂತ ಪದಗಳನ್ನು ಸುಮ್ಮನೆ ಬಳಸುತ್ತಿರಲಿಲ್ಲ. ಸಂದರ್ಭಕ್ಕೆ ಸರಿಹೊಂದುವ ಪದವನ್ನು ಆರಿಸಿ ಬಳಸುವನು. ಪದಗಳ ಕರಾರುವಾಕ್ ಬಳಕೆ, ಅರ್ಥ, ಪ್ರಯೋಗಗಳ ಬಗ್ಗೆ ಮಾವನವರು ಎಲ್. ಜಿ. ಅಣ್ಣಂದಿರು ಶೌರಿ, ನಾಣಿ (ಇಬ್ಬರೂ word smiths ಎಂದೇ ಪ್ರಖ್ಯಾತರು) ಹಾಗೂ ಅತ್ತಿಗೆಯೊಡನೆ ಕೂಲಂಕಷವಾಗಿ ಚರ್ಚಿಸುವನು. ಯಾವ ತರಾತುರಿ ಇಲ್ಲದೆ ಬರೆದ ಪ್ರಬಂಧ / ಲೇಖನವಾದರೆ, ಬರೆದುದನ್ನು ವರ್ಷ ಎರಡಾದರೂ ಸುಮ್ಮನೆ ಎತ್ತಿಡುವನು.

ಮೆಲುಕುಹಾಕುವನು ಮತ್ತೆ ಓದಿ ತಿದ್ದುವನು. ಹೀಗೆ ಅನೇಕ ಬಾರಿ ತಿದ್ದಿದರೇನೆ ಅವನಿಗೆ ಸಮಾಧಾನ.

ಇಂಗ್ಲೀಷಿನಿಂದ ಕನ್ನಡಕ್ಕೆ ಅಥವಾ ಕನ್ನಡದಿಂದ ಇಂಗ್ಲೀಷಿಗೆ ಉತ್ತಮವಾಗಿ ತರ್ಜುಮೆ ಮಾಡಬಲ್ಲ. ರಾಜುವಿನ ಈ abilityಯಲ್ಲಿ ಶೌರಿ, ನಾಣಿ ಇಬ್ಬರಿಗೂ ಅಪಾರ ವಿಶ್ವಾಸ.

ನಮ್ಮ ತಂದೆ ಮತ್ತು ಇತರ ಅಣ್ಣಂದಿರಂತೆ ರಾಜುವಿನ ಓದು ವಿಸ್ತಾರ. ಅಪ್ಪ ಓದಿದ ಪ್ರತಿ ಪುಸ್ತಕಕ್ಕೂ ಒಂದು ಕಾರ್ಡ್ (Card) ತಯಾರಿಸುವರು. ಅದರಲ್ಲಿ ಪುಸ್ತಕದ ಹೆಸರು (title) ಮುಖ್ಯ ಪಾತ್ರಗಳು ಯಾವುವು, ಪುಸ್ತಕದ ಸಾರಾಂಶ, ಅದರ ಬಗೆಗಿನ ಅನಿಸಿಕೆ, ರಚನೆಕಾರನ ಹೆಸರು ಎಲ್ಲ ಬರೆದು ಪರಿವಿಡಿ (index) ತಯಾರಿಸುವರು. ರಾಜು ಸಹ ಅಂತೆಯೆ ಮಾಡುವನು.

ರಾಜು ಒಬ್ಬ ಉತ್ತಮ ವಿಮರ್ಶಕ ಸಹ. ಅವನ ಶೈಲಿ ಸ್ವಲ್ಪ ಭಿನ್ನ, ಅದರಲ್ಲಿ ಮಡಿವಂತಿಕೆ ಕಮ್ಮಿ. ರಾಜು ಮಿಡ್ಲಿಸ್ಕೂಲಿನಲ್ಲಿ ಇದ್ದಾಗ ಆರ್. ಕೆ. ನಾರಾಯಣ್ ಅವರ Swamy and Friends (ಮೊದಲ ಮುದ್ರಣ ೧೯೩೫) ಓದಿ ಬಹಳ ಇಷ್ಟಪಟ್ಟು ಒಂದು ಮೆಚ್ಚುಗೆ (appreciation) ಬರೆದು ಪಕ್ಕದ ಮನೆಯಲ್ಲೆ ವಾಸವಿದ್ದ ನಾರಾಯಣರ ಮನೆಗೆ ಹೋಗಿ ಬಾಗಿಲು ತಟ್ಟಿ ಬಾಗಿಲು ತೆಗೆದ ನಾರಾಯಣರ ಕೈಗೆ ನೇರವಾಗಿ ತನ್ನ ಬರವಣಿಗೆಯನ್ನು ಕೊಟ್ಟು ಬಂದವ! ಹಾಗಾಗಿ ನಾರಾಯಣರಿಗೆ ರಾಜು ಎಂದರೆ ಬಹಳ ಮಮತೆ. ಅವರು ಅಂದು ಪಟ್ಟ ಸಂತೋಷವನ್ನು ಎಂದಿಗೂ ನೆನೆಯುವರು.

ಪತ್ರ ಬರೆಯುವುದರಲ್ಲಿ ರಾಜು ಸಿದ್ಧಹಸ್ತ. ಬರವಣಿಗೆ ಒಂದು ಆಳವಾದ ಭಾವನಾತ್ಮಕ ಅನುಭವ (a deep emotional experience) ಎನ್ನುವನು. ಹಾಗಾಗಿ ಕ್ಷೇಮ ಸಮಾಚಾರಕ್ಕಾದರೂ ಆಗಾಗ್ಗೆ ಚಿಕ್ಕ ಪತ್ರಗಳನ್ನು ಬರೆ, ಅಂತ ಅಮ್ಮ, ಅಪ್ಪ ಅಂದರೆ ಅವನಿಗೆ ಅದು ಆಗದು. ಅಮ್ಮ ಇರುವವರೆಗೆ ಅವಳಿಗೆ ವರ್ಷಕ್ಕೆ ಒಂದು ಅಥವಾ ಎರಡು ದೀರ್ಘಪತ್ರ ಬರೆಯುವನು, ಕಮ್ಮಿ ಎಂದರೆ ೧೫-೧೬ ಪುಟಗಳು, ಅನೇಕ ವೇಳೆ ೩೦-೩೫ ಪುಟಗಳೂ ಮೀರಿದ್ದುಂಟು! ಆ ಪತ್ರಗಳಲ್ಲಿ ಅನೇಕ ವಿಚಾರಗಳ ಪ್ರಸ್ತಾಪ ಮಾಡುವನು. ತನ್ನ ಮಕ್ಕಳ ಓದು, ಆಟಪಾಠ, ತಾನು ನೋಡಿದ ಯಾವುದಾದರೂ ಉತ್ತಮ ನಾಟಕ / ಸಿನಿಮಾ, ನೋಡಿ ಬಂದ ಹೊಸ ಜಾಗ, ಹೀಗೆ. ಅವನು ಪೀಟರ್ ಬ್ರೂಕ್ಸ್ (Peter Brookes) ನಿರ್ದೇಶಿಸಿದ 'ಮಹಾಭಾರತ', ೯ ಗಂಟೆಗಳಿಗೂ ಮೀರಿದ ಅವಧಿಯದು, ೧೬ ರಾಷ್ಟ್ರಗಳ ೨೧ ಹೆಸರಾಂತ ನಟನಕಾರರು ನಟಿಸಿದ ನಾಟಕ, ೧೯೮೯ರಲ್ಲಿ ನೋಡಿದ ನಂತರ, ಅಮ್ಮನಿಗೆ ಬರೆದ ಪತ್ರ ಅದ್ಭುತವಾಗಿ ಇತ್ತು. ನಾವೂ ಎದುರಿಗೆ ನಾಟಕವನ್ನು ನೋಡಿದಂಥ ಭ್ರಮೆ ಹುಟ್ಟಿಸುವಂತಹ ವರ್ಣನೆ!



ಇದ್ದಿದ್ದರೆ ೨೦೦೬ನೇ ಇಸವಿಯ ಯುಗಾದಿಗೆ ನಮ್ಮಮ್ಮನಿಗೆ ನೂರು ವರ್ಷ. ಹಿರಿಯ ಅಣ್ಣನ ಮುಂದಾಳತ್ವದಲ್ಲಿ ಅಮ್ಮನ ನೂರರ ಸಂಭ್ರಮವನ್ನು ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯ ಸಭಾಂಗಣದಲ್ಲಿ ಆಚರಿಸಿದೆವು. ಸಿದ್ಧತೆಗಳೆಲ್ಲ ಕಿರಿಯರಾದ ನೀರಜ ಮತ್ತು ನಾನು ನೋಡಿಕೊಂಡೆವು. ನಾವು ಎಂಟು ಜನ ಒಡಹುಟ್ಟಿದವರೂ ಕಲೆತಿದ್ದೆವು (ಇದೆ ಕಡೆ ಸಲ ನಾವು ಎಂಟು ಮಂದಿಯೂ ಕಲೆತದ್ದು). ಎಲ್ಲರೂ ಸಂತೋಷದಿಂದ ಕಾಲ ಕಳೆದೆವು. ಅಮ್ಮನನ್ನು ಕುರಿತಾದ ಒಂದು ಪುಸ್ತಕವನ್ನು ಮಾಡುವ ಎಂದ ಹಿರಿಯಣ್ಣ. ಎಲ್ಲರೂ ಒಪ್ಪಿದೆವು. ಆದರೆ ಪುಸ್ತಕದ ಜವಾಬ್ದಾರಿ ವಹಿಸಲು ಶೌರಿಗೆ ಅನಾರೋಗ್ಯದ ಅಡಚಣೆ ಇತ್ತು (ಪಾರ್ಕಿನ್‌ಸನ್ ಖಾಯಿಲೆ ಉಲ್ಬಣವಾಗುತ್ತಿತ್ತು). ಹಾಗಾಗಿ ಜವಾಬ್ದಾರಿಯನ್ನು ರಾಜುವಿನ ಹೆಗಲಿಗೆ ಹಾಕಿದ. ರಾಜು ಸಂತೋಷದಿಂದಲೇ ಒಪ್ಪಿಗೆ ಇತ್ತ. ಏನೆಂದರೆ ಹಲವು ವರ್ಷಗಳು ಈ ಕೆಲಸ ಕೈಗೆತ್ತಿಕೊಳ್ಳುವುದು ರಾಜುವಿಗೆ ಸಾಧ್ಯವಾಗಿರಲಿಲ್ಲ. ಕನ್ನಡ ಸಾಹಿತ್ಯರಂಗದ ಅನೇಕ ಯೋಜನೆಗಳ ಭಾರ ಅವನ ಮೇಲೆ ಇತ್ತು. ಈ ಮಧ್ಯೆಯೆ ೨೦೧೧ರಲ್ಲಿ ಅಪ್ಪ ರಚಿಸಿದ ಸಂಗೀತ ಕೃತಿಗಳ ಗಾನ ಸುರುಳಿಯ (ನೀರಜ ಮತ್ತು ಅವಳ ಮಗಳು ಜ್ಯೋತಿ ಹಾಡಿರುವುದು) ಲೋಕಾರ್ಪಣೆ ಕಾರ್ಯಕ್ರಮ ಬೆಂಗಳೂರು ಗಾಯನ ಸಮಾಜದಲ್ಲಿ ನಡೆಯಿತು. ಇದರ ರೂವಾರಿ ಜ್ಯೋತಿ. ಅವಳೊಡನೆ ನಾವೆಲ್ಲರೂ ಕೈಜೋಡಿಸಿದೆವು. ರಾಜು ಬಹಳ ಉತ್ತೇಜನ, ಬೆಂಬಲ ಇತ್ತ. ಅಪ್ಪನ ಸಂಗೀತ ಕೃತಿಗಳನ್ನು ಕಾಪಾಡಿ, ಪ್ರಚಾರಕ್ಕೆ ತರಲು ಒಂದು ದತ್ತಿ ಸಂಸ್ಥೆ, 'ದೇವಗೀತಂ ಚಾರಿಟಬಲ್ ಟ್ರಸ್ಟ್ (R)' ಸ್ಥಾಪಿಸಲಾಯಿತು. ಇದರ ಮೊದಲ ಅಧ್ಯಕ್ಷ ರಾಜು. ಇದಾದ ನಂತರ ರಾಜು ಅಮೆರಿಕೆಗೆ ಹಿಂತಿರುಗಿದ ಸ್ವಲ್ಪ ಸಮಯದಲ್ಲೆ A Bolt From the Blue ಎಂಬಂತೆ ಅವನಿಗೆ ಕಿಡ್ನಿಯಲ್ಲಿ ಕ್ಯಾನ್ಸರ್ ಇರುವುದು ವಾರ್ಷಿಕ ಮೆಡಿಕಲ್‌ನಲ್ಲಿ ಪತ್ತೆಯಾಯಿತು. ರಾಜು ಕಿಂಚಿತ್ತೂ ಧೃತಿಗೆಡಲಿಲ್ಲ. ಬಹಳ ಸಾವಧಾನದಿಂದ ತಾನು ಮಾಡಲು ಉಳಿದಿರುವ ಕೆಲಸಗಳ ಪಟ್ಟಿ ತಯಾರಿಸಿದ. ಅದರಲ್ಲಿ ಮೊದಲ ಆದ್ಯತೆ ಅಮ್ಮನ ಪುಸ್ತಕಕ್ಕೆ ಮೀಸಲಿಟ್ಟ. ರಾಜು, ಮೋಹನ್ ಮತ್ತು ನೀರಜರ ಸಂಪಾದಕತ್ವದಲ್ಲಿ ಈ ಪುಸ್ತಕ ಸಿದ್ಧವಾಯಿತು, ಮೋಹನ್ ಒಂದು ತಿಂಗಳು ಅಮೆರಿಕೆಯಲ್ಲಿ ರಾಜು ಮನೆಗೆ ತೆರಳಿ, ಚರ್ಚಿಸಿ ಸಂಪಾದಿಸಿ ಪುಸ್ತಕ ಸಿದ್ಧಪಡಿಸಿದರು. ಈ ಪುಸ್ತಕವನ್ನು ಹೊರತರುವುದರಲ್ಲಿ ನಮ್ಮ ಅಭಿನವದ ರವಿಕುಮಾರ್ ಮತ್ತು ಅವರ ಪ್ರಕಾಶಕ ವರ್ಗದವರ ಬೆಂಬಲ ಸ್ಮರಣೀಯ. ಹೀಗೆ ಹೊರ ಬಂತು 'ಮೈಸೂರು ಮಕ್ಕಳ ಕೂಟದ ಎಚ್. ವೈ. ಸರಸ್ವತಿ' ಪುಸ್ತಕ.

ರಾಜು ಏನು ಕೆಲಸ ವಹಿಸಿಕೊಂಡರು ಬಹಳ ಶ್ರದ್ಧೆಯಿಂದ ಮಾಡುವನು. ಈ ಅಮ್ಮನ ಪುಸ್ತಕ ಮಾಡುವಾಗಲೂ ಮೊದಲು ನಮ್ಮೆಲ್ಲರನ್ನೂ ಸೇರಿಸಿ ಒಂದು ಮೀಟಿಂಗ್ (meeting) ಏರ್ಪಡಿಸಿದ. ರಾಜು ಇದಕ್ಕೆ ತನ್ನ ಆಪ್ತ ಸ್ನೇಹಿತರೂ ಹೆಸರಾಂತ

ವಿಮರ್ಶಕರೂ ಆದ ಎಚ್. ಎಸ್. ರಾಘವೇಂದ್ರರಾಯರನ್ನು ಬರಮಾಡಿದ. ಆತ ನಮಗೆ ಉತ್ತಮ ಸಲಹೆಗಳನ್ನು ನೀಡಿದರು. ಒಂದು 'ಸ್ಮರಣ ಸಂಚಿಕೆ' ಸ್ಮರಣೆಯಲ್ಲಿ ಉಳಿಯಲು ಹೇಗೆ ವಿಭಿನ್ನವಾಗಿ ಇರಬೇಕು ಎಂಬುದು ತಿಳಿಸಿಕೊಟ್ಟರು. ಈ ಸಂದರ್ಭದಲ್ಲಿ ಅವರನ್ನು ಸ್ಮರಿಸುತ್ತೇನೆ.

ರಾಜು ಬಹಳ ಸರಳಸ್ವಭಾವದವನು. ವಾತ್ಸಲ್ಯಮಯಿ, ಮೃದುತನ, ಹಾಸ್ಯಪ್ರಜ್ಞೆ ಎದ್ದು ಕಾಣುತಿತ್ತು. ಏನನ್ನಾದರೂ ಎಷ್ಟೇ ಕಷ್ಟದ್ದೆ ಆಗಲಿ, ಸಾಧಿಸಬಲ್ಲೆ ಎಂಬ ದೃಢ ಆತ್ಮವಿಶ್ವಾಸ ಉಳ್ಳವನು. ಒಂದು ಒಳ್ಳೆಯ ಪುಸ್ತಕ ಓದಿದರೆ, ನಾಟಕ ನೋಡಿದರೆ, ಸಂಗೀತ ಕೇಳಿದರೆ ಅದೇ ಗುನುಗಿನಲ್ಲಿ ದಿನಗಳು ಕಳೆಯುವನು.

ಅಮೆರಿಕೆಯಲ್ಲಿ ನೆಲಸಿದ ಕನ್ನಡಿಗರು ಯಾವುದೆ ರಾಜ್ಯದಲ್ಲಿ ಕೆಲಸದಲ್ಲಿ ಇದ್ದರೂ ನಿವೃತ್ತಿಯ ನಂತರ ಬಿಸಿಲು ರಾಜ್ಯವಾದ ಫ್ಲೋರಿಡಾಗೆ (Florida) ಹೋಗಿ ನೆಲಸುವುದು ಒಂದು ವಾಡಿಕೆ. ಆದರೆ ಹಾಗೆ ಮಾಡಲು ರಾಜುವಿನ ಮನಸ್ಸು ಒಪ್ಪಲಿಲ್ಲ. ಫಿಲಡೆಲ್ಫಿಯ (Philadelphia) ಒಂದು ಉತ್ತಮ ಸಾಂಸ್ಕೃತಿಕ ತಾಣ (ನಮ್ಮ ಮೈಸೂರು, ಬೆಂಗಳೂರುಗಳಂತೆ) ಅಲ್ಲಿಂದ ದೂರ ಸರಿಯಲು ಮನಸ್ಸು ಒಪ್ಪಲಿಲ್ಲ 'A life without cultural activity is so dry and boring' ಎನ್ನುವನು. ಫಿಲಡೆಲ್ಫಿಯಗೆ ಅನತಿದೂರದ ಮೀಡಿಯ ಎಂಬ ಚಿಕ್ಕ ಸುಂದರ ಊರಿನಲ್ಲಿ ಅವನ ಮನೆ. ಮಾಲ್ಗುಡಿ ಡೇಸ್ ಸಿನಿಮದ ಆಗುಂಬೆಯನ್ನು ನೆನಪಿಸುವಂತ ಜಾಗ. ಗಿಡ ಮರಗಳು ಹೇರಳವಾಗಿ ಇರುವ ಪರಿಸರದಲ್ಲಿ ಅಷ್ಟೇನು ದೊಡ್ಡದಲ್ಲದ ಎರಡಂತಸ್ತಿನ ಮನೆ. ಒಂದು ಚಿಕ್ಕ ತೋಟ. ಅಲ್ಲಿ ಮೇಪಲ್ (Maple) ಮರ ಸೇಬು (Apple) ಮರ ಇವೆ, ಅಲ್ಲದೆ ಅನೇಕ ಸುಂದರ ಹೂಗಿಡಗಳು, ಬಳ್ಳಿಗಳು. ಬಹಳ ಶಾಂತ ವಾತಾವರಣ. ನೆಮ್ಮದಿಯಾಗಿ ಬಾಳಿದ, ಕಡೆಯ ಸಲ ಆಸ್ಪತ್ರೆಗೆ ತೆರಳುವಾಗ ತನ್ನ ಜೀವನ ಅಂತ್ಯವಾಗುತ್ತಿರುವುದು ಅವನಿಗೆ ಅರಿವಾಗಿತ್ತು. ಅವನ ಮತ್ತು ನನ್ನ ಆಪ್ತ ಕಸಿನ್ (cousin) ಕಾಶೀನಾಥ, ತಂಗಿ ನೀರಜ, ಅಣ್ಣ ಮೋಹನರಿಗೆ ಕರೆ ಮಾಡಿ ವಿದಾಯ ಹೇಳಿದ. ಶಾಂತ ಚಿತ್ತದಿಂದ ಇಹಲೋಕ ತ್ಯಜಿಸಿದ.

ಎಲ್ಲ ಕೆಲಸದಲ್ಲೂ ರಾಜುವಿಗೆ ಅಕ್ಕರೆ, ಶ್ರದ್ಧೆ, ಎಷ್ಟರಮಟ್ಟಿಗೆಂದರೆ ಅವರ ತೋಟದಲ್ಲಿ ಒಂದು ವಿಂಡ್ ಚೈಮ್ (wind chime) ಕಟ್ಟಿದ್ದ. ಅದು ಗಾಳಿಗೆ ಅದುರಿದಾಗ ಮಧ್ಯಮಾವತಿ ರಾಗದ ಸ್ವರಗಳನ್ನು ಮೂಡಿಸುತ್ತಿತ್ತು! ರಾಜುವೆ ಖುದ್ದಾಗಿ ಹುಡುಕಿ ತಂದ wind chime ಅದು!

■

# ರಾಜಗೋಪಾಲ್
# ಕನ್ನಡ ಸಾಹಿತ್ಯ ರಂಗಕ್ಕೆ ಬರೆದ ಕೊನೆಯ ಪತ್ರ

ರಾಜಗೋಪಾಲ್ ಕನ್ನಡ ಸಾಹಿತ್ಯ ರಂಗದ ಬಗ್ಗೆ ತಮ್ಮ ಬಿಡುವಿನ ವೇಳೆಯಲ್ಲೆಲ್ಲಾ ಚಿಂತಿಸುತ್ತಿದ್ದರು ಎಂಬುದು ಅವರ ಹತ್ತಿರದ ಗೆಳೆಯರಿಗೆಲ್ಲಾ ತಿಳಿದ ಮಾತೇ. ಕುಶಲ ಸಂಭಾಷಣೆಗಾಗಿ ಕರೆಮಾಡಿದರೂ ಕಸಾರಂ ಬಗ್ಗೆಯೇ ಮಾತನ್ನು ತಿರುಗಿಸುತ್ತಿದ್ದರು. ಅನಾರೋಗ್ಯದ ಕಾರಣದಿಂದ ಆಡಳಿತ ಮಂಡಲಿಯ ಅಧ್ಯಕ್ಷತೆಯಿಂದ ನಿವೃತ್ತರಾದ ಮೇಲೂ ಇದೇ ಮನೋವೃತ್ತಿ ಮುಂದುವರೆದಿತ್ತು. ಬಾಸ್ಟನ್ ಸಾಹಿತ್ಯೋತ್ಸವ ಕಳೆದ ನಂತರ ಅವರ ಆರೋಗ್ಯ ತೀರಾ ಹದಗೆಟ್ಟಿತ್ತು. ಆದರೂ ಸಂಸ್ಥೆಯ ಭವಿಷ್ಯದ ಬಗ್ಗೆ ಅವರ ಕಾಳಜಿ ಏಕರೀತಿಯಾಗಿತ್ತು. ಇದಕ್ಕೆ ಸಾಕ್ಷಿಯೋ ಎಂಬಂತೆ ಅವರು ಆಡಳಿತ ಮಂಡಲಿಗೆ ಬರೆದ ಕೊನೆಯ ಪತ್ರ, ಇತ್ತೀಚೆಗೆ ಏನನ್ನೋ ಹುಡುಕುತ್ತಿದ್ದಾಗ ಕಣ್ಣಿಗೆ ಮತ್ತೆ ಬಿತ್ತು. ಈ ನಮ್ಮ ಸ್ಮರಣ ಪುಸ್ತಕದಲ್ಲಿ ಅದನ್ನು ಪ್ರಕಟಿಸಿದರೆ ಅಪ್ರಸ್ತುತವಾಗಲಾರದು ಎನ್ನಿಸಿ, ಈ ಕೆಳಗೆ ಪ್ರಕಟಿಸಿದ್ದೇವೆ.

**ಸಂಪಾದಕರು**

**ಕನ್ನಡ ಸಾಹಿತ್ಯ ರಂಗದ ಆಡಳಿತ ಮಂಡಲಿಗೆ,**

ಶುಭಾಶಯಗಳು ಮತ್ತು ಪ್ರಣಾಮಗಳು. ನಮ್ಮ ರಂಗ ಅದರ ಧ್ಯೇಯಗಳಿಗನುಸಾರವಾಗಿ ಬೆಳೆಯುತ್ತಿರುವುದು ಬಹಳ ತೃಪ್ತಿಕರವಾದ ವಿಷಯ. ಅದಕ್ಕೆ ಕಾರಣರಾದ ನೀವೆಲ್ಲರೂ ಅಭಿನಂದನಾರ್ಹರು.

ನನ್ನ ಮನಸ್ಸಿಗೆ ಅನ್ನಿಸಿದ ಒಂದೆರಡು ವಿಷಯಗಳನ್ನು ನಿಮ್ಮ ಅವಗಾಹನೆಗಾಗಿ ನಿಮ್ಮ ಮುಂದಿಡುತ್ತಿದ್ದೇನೆ. ಅವುಗಳ ಬಗ್ಗೆ ಆಡಳಿತ ಮಂಡಲಿ ಯೋಚಿಸಿ ಸೂಕ್ತ ಕ್ರಮ ಕೈಗೊಂಡರೆ ಸಂತೋಷ.

೧. **ಕಸಾರಂ ಪ್ರಕಟಣೆಗಳ ವಿತರಣೆ:** ನಮ್ಮ ಪುಸ್ತಕಗಳು ಇಲ್ಲಿನ ಕನ್ನಡಿಗರಿಗೆ ತಲುಪುತ್ತಿವೆಯೇ ಎಂಬ ಪ್ರಶ್ನೆ ನನ್ನನ್ನು ಸ್ವಲ್ಪ ಬಾಧಿಸುತ್ತದೆ. ಪುಸ್ತಕಗಳು ಅಚ್ಚಾಗಿ ಪ್ರಕಟಗೊಳ್ಳುವುದು ಬೆಂಗಳೂರಲ್ಲಿ. ಇಲ್ಲಿ ನಾವು ತರಿಸಿಕೊಳ್ಳುವ ಕೆಲವೇ ಪ್ರತಿಗಳು ಮುಖ್ಯವಾಗಿ ಲೇಖಕರಿಗೆ ಕೊಡುವ ಗೌರವ ಪ್ರತಿಗಳಿಗೆ, ಅತಿಥಿಗಳಿಗೆ, ಸಮ್ಮೇಳನಗಳ ಸಮಯದಲ್ಲಿ ಮಾರಾಟವಾಗುವ ಕೆಲವು ಪ್ರತಿಗಳಿಗೆ ಸೀಮಿತವಾಗಿವೆ. ಈಚೆಗೆ ಇಲ್ಲಿನ ಸ್ಥಳೀಯ ಕನ್ನಡ ಕೂಟದ ಕಾರ್ಯಕ್ರಮವೊಂದಕ್ಕೆ ಹೋಗಿದ್ದಾಗ, ನಮ್ಮ ಕಸಾರಂನ 'ಅವರವರ ಭಕುತಿಗೆ' ಪುಸ್ತಕದ ಮಾತು ಬಂತು. ನಮ್ಮ ಸಂಭಾಷಣೆಯಲ್ಲಿ ಭಾಗಿಯಾಗಿದ್ದವರು, 'ಇವೆಲ್ಲ ಎಲ್ಲಿ ದೊರೆಯುತ್ತವೆ, ನಮಗೆ ಇಂಥವು ಇವೆ ಎಂಬುದು ಕೂಡ ಗೊತ್ತೇ ಇಲ್ಲವಲ್ಲ' ಎಂದು ಉದ್ಗರಿಸಿದರು. ಇದು ಸ್ವಲ್ಪಮಟ್ಟಿಗೆ ಅವರೊಬ್ಬರ ಅಜ್ಞಾನ ಎಂದುಕೊಂಡರೂ ಅದರಲ್ಲಿ ನಾವು ಈ ವಿಷಯದಲ್ಲಿ ಹೆಚ್ಚು ಜಾಗ್ರತೆ ವಹಿಸಬೇಕು ಎಂಬ ಅಂಶವೂ ಇದೆಯೆಂದು ಅರಿವಾಯಿತು. ದಯವಿಟ್ಟು ಅದರ ಬಗ್ಗೆ ನಮ್ಮ ಮಂಡಲಿ ಗಮನ ಹರಿಸಬೇಕೇಂದು ಸೂಚಿಸುತ್ತೇನೆ. ನಮ್ಮ ಪ್ರಕಟಣೆಗಳನ್ನು ಕುರಿತು ಇತರ ಕನ್ನಡ ಕೂಟಗಳ ಪದಾಧಿಕಾರಿಗಳಿಗೆ ತಿಳುವಳಿಕೆ ಕೊಟ್ಟು ನಮ್ಮ ಪುಸ್ತಕಗಳನ್ನು ಕೊಳ್ಳುವಂತೆ ಅವರೊಡನೆ ವ್ಯವಹರಿಸಬಹುದು. ಹಿಂದೆ ನಮ್ಮ ಕೋಶಾಧಿಕಾರಿ ಆಗಿದ್ದ ಟಿ. ಎನ್. ರಾಜಶೇಖರ್ ತ್ರಿವೇಣಿಯ ಅಧ್ಯಕ್ಷರಾಗಿದ್ದಾಗ ನಮ್ಮಿಂದ ಸುಮಾರು ೧೫೦ ಡಾಲರಿನಷ್ಟು ಬೆಲೆಯ ಪುಸ್ತಕಗಳನ್ನು (ರಿಯಾಯತಿ ದರದಲ್ಲಿ) ಕೊಂಡು ತಮ್ಮ ಅತಿಥಿಗಳಿಗೆ, ವಿವಿಧ ಕಾರ್ಯಕ್ರಮಗಳಲ್ಲಿ ಭಾಗವಹಿಸಿದ ಸದಸ್ಯರಿಗೆ ಬಹುಮಾನವಾಗಿ ಕೊಟ್ಟಿದ್ದರು. ಇತರ ಸಂಘದವರೂ ಹೀಗೆ ಮಾಡಬಹುದು. ಇತರ ಸಂಘಗಳ ಅಂತರ್ಜಾಲ ತಾಣಗಳಲ್ಲಿ ನಮ್ಮ ಪುಸ್ತಕಗಳ ಬಗ್ಗೆ ತಿಳಿಯಪಡಿಸಲು ಅವಕಾಶ ಬೇಡಿ ಅದರಂತೆ ಮಾಡಬಹುದು. ಅಲ್ಲಿನ ಸದಸ್ಯರಿಗೂ ನಮ್ಮ ಪ್ರಕಟಣೆಗಳಲ್ಲಿ ಬರೆಯಲು ಆಹ್ವಾನ ನೀಡಬಹುದು. ಆಡಳಿತ ಮಂಡಲಿಯ ಒಂದಿಬ್ಬರು ಸದಸ್ಯರಿಗೆ ಈ ಬಗ್ಗೆ ಒಂದು ಕಾರ್ಯಸಾಧ್ಯ ಯೋಜನೆಯನ್ನು ತಯಾರಿಸಿ ಅದನ್ನು ಸಾಧಿಸುವ ಜವಾಬ್ದಾರಿಯನ್ನು ವಹಿಸಬಹುದು.

೨. **ಕನ್ನಡ ಕಲಿ ತರಗತಿಗಳು:** ನಮ್ಮ ಹಲವಾರು ಕನ್ನಡ ಕೂಟಗಳು ಮಕ್ಕಳಿಗಾಗಿ 'ಕನ್ನಡ ಕಲಿ' ತರಗತಿಗಳನ್ನು ನಡೆಸುವ ಸ್ತುತ್ಯರ್ಹವಾದ ಕೆಲಸ ಮಾಡುತ್ತಿವೆ. ಅವರು ಹೆಚ್ಚಾಗಿ ಕರ್ನಾಟಕ ಸರ್ಕಾರದ ಬಾಲ ಪಠ್ಯ ಪುಸ್ತಕಗಳನ್ನು ತರಿಸಿಕೊಳ್ಳುತ್ತಿದ್ದಾರೆ. ಅಥವಾ, ತಾವೇ ಯೋಚಿಸಿಕೊಂಡು ಪಠ್ಯಗಳನ್ನು ನಿರ್ಮಿಸಿಕೊಳ್ಳುತ್ತಿದ್ದಾರೆ. ಇವೆಲ್ಲ



ಪ್ರಶಂಸನೀಯವೇ. ಈ ವಿಷಯದಲ್ಲಿ ಕಸಾರಂ ಒಳ್ಳೆಯ ನೆರವು ನೀಡಬಹುದು ಎನ್ನಿಸುತ್ತದೆ. ಎಷ್ಟಾದರೂ ಈ ಮಕ್ಕಳು, ಇಲ್ಲಿ ಬೆಳೆಯುತ್ತಿರುವ ನಮ್ಮ ಮಕ್ಕಳು, ಕನ್ನಡದಿಂದ ದೂರವಾಗಬಾರದಲ್ಲ, ಅದಕ್ಕಾಗಿ ನಾವು ಆದಷ್ಟು ಅವರಿಗೆ ಕನ್ನಡ ಪರಿಚಯ ಮಾಡಿಕೊಡಬೇಕು ಎಂಬುದನ್ನು ನಾವೆಲ್ಲರೂ ಒಪ್ಪುತ್ತೇವೆ. ಅದಕ್ಕೆ ಬೇಕಾದ ಸಹಾಯವನ್ನು ಒದಗಿಸುವುದೂ ನಮ್ಮ ಜವಾಬ್ದಾರಿಯೇ. ಈ ಬಗ್ಗೆಯೂ ನಮ್ಮ ಕಸಾರಂ ತನ್ನ ಸದಸ್ಯವರ್ಗದಲ್ಲಿ ಈ ವಿಚಾರದಲ್ಲಿ ಆಸಕ್ತಿ, ಪ್ರತಿಭೆ ಉಳ್ಳಂಥವರಿಗೆ ಈ ಕೆಲಸ ವಹಿಸಬಹುದು. ಶ್ರೀಮತಿ ಮೀರಾ ಹಿಂದೆ ಅಕ್ಕ ಸಮ್ಮೇಳನದ ಸಂದರ್ಭದಲ್ಲಿ 'ಗುಬ್ಬಿ ಗೂಡು' ಎಂಬ ಸುಂದರವಾದ ಪುಸ್ತಕ ಹೊರತಂದಿದ್ದರು. ಅವರಿಗೆ ಈ ಕೆಲಸ ವಹಿಸಬಹುದು ಎಂದು ತೋರುತ್ತದೆ.

೩. **ಸದಸ್ಯ ವರ್ಗ:** ನಮ್ಮ ಸದಸ್ಯವರ್ಗವನ್ನು ಹೆಚ್ಚಿಸಬೇಕು. ಪ್ರತಿ ವರ್ಷವೂ ಕಡೆಯ ಪಕ್ಷ ೧೦–೧೫ ಮಂದಿ ಹೊಸ ಸದಸ್ಯರನ್ನು ಸೇರಿಸಿಕೊಳ್ಳಬೇಕು. ಮತ್ತು ಹೊಸಬರ ಬರುವಿಕೆಯನ್ನು ಎಲ್ಲ ಸದಸ್ಯರಿಗೂ ತಿಳಿಸಬೇಕು. ನಾವು ೨೦೧೯ರ ಸಮ್ಮೇಳನವನ್ನು ನ್ಯೂಜೆರ್ಸಿಯ ಸುತ್ತಮುತ್ತಲ ಕನ್ನಡಿಗರ ಸಹಯೋಗದೊಂದಿಗೆ ನಡೆಸುತ್ತಿರುವುದಾಗಿ ಕೇಳಿದ್ದೇನೆ. ಅಲ್ಲಿನ ಹಲವರನ್ನು ಈಗಲೇ ನಮ್ಮ ಸದಸ್ಯರನ್ನಾಗಿ ಮಾಡಿಕೊಂಡರೆ ನಮ್ಮ ಕೆಲಸ ಸುಲಭವಾಗಬಹುದು. ಬಾಸ್ಟನ್ನಿನ ಹಲವಾರು ಮಂದಿಯನ್ನೂ ಸದಸ್ಯರನ್ನಾಗಿ ಆಹ್ವಾನಿಸಬಹುದು.

ನೀವು ಇಲ್ಲಿನ ಸೂಚನೆಗಳ ಬಗ್ಗೆ ಈಗಾಗಲೇ ಕ್ರಮ ಕೈಗೊಂಡಿರಬಹುದು; ಹಾಗಿದ್ದರೆ ದಯವಿಟ್ಟು ಆ ಬಗ್ಗೆ ತಿಳಿಸಬೇಕೆಂದು ಕೋರುತ್ತೇನೆ.

ಇತಿ,

ನಿಮ್ಮ ವಿಶ್ವಾಸಿ,

ಅಕ್ಟೋಬರ್ ೨೬, ೨೦೧೭ ರಾಜಗೋಪಾಲ್

(ಈ ಪತ್ರವನ್ನು ಬರೆಯುವಾಗ ಅವರು ನಮ್ಮ ಮುಂದಿನ ಕಸಾರಂ ಸಾಹಿತ್ಯೋತ್ಸವವನ್ನು ಎದುರು ನೋಡುತ್ತಿದ್ದರು. ಆದರೆ ಮುಂದಿನ ಸಮ್ಮೇಳನಕ್ಕೆ ಬಹು ಮುಂಚೆಯೇ ವಿಧಿ ಅವರನ್ನು ಕರೆಸಿಕೊಂಡುಬಿಟ್ಟಿತು!)

■



ಯುವಕ ಎಚ್.ವೈ. ರಾಜಗೋಪಾಲ್



ವಿಮಲಾ ಮತ್ತು ರಾಜಗೋಪಾಲರ ಮೊದಲ ಭೇಟಿ



ರಾಜಗೋಪಾಲ್ ಮತ್ತು ವಿಮಲಾ ರಾಜಗೋಪಾಲ್

ಆಪ್ತ ವಲಯದಲ್ಲಿ ಅಮೆರಿಕನ್ನಡಿಗ

**ಎಚ್.ವೈ. ರಾಜಗೋಪಾಲ್**




ಕನ್ನಡ ಸಾಹಿತ್ಯರಂಗದ ವತಿಯಿಂದ ರಾಜಗೋಪಾಲ್ ಅವರಿಗೆ ಸನ್ಮಾನ. ಲಕ್ಷ್ಮೀಶ ತೋಳ್ಪಾಡಿಯವರಿಂದ ಅಭಿನಂದನ ಫಲಕ ಸ್ವೀಕರಿಸುತ್ತಿರುವ ಎಚ್.ವೈ.ಆರ್




ಕಸಾರಂ ಪ್ರಕಟನೆ- 'ಅವರವರ ಭಕುತಿಗೆ' ಪುಸ್ತಕ ಬಿಡುಗಡೆ ಸಮಾರಂಭದಲ್ಲಿ ರಾಜಗೋಪಾಲ್. ಲಕ್ಷ್ಮೀಶ ತೋಳ್ಪಾಡಿಯವರು ಕೂಡ ಚಿತ್ರದಲ್ಲಿದ್ದಾರೆ.

ಸಾಹಿತಿ ಡಾ.ಯು.ಆರ್.ಅನಂತಮೂರ್ತಿಯವರೊಂದಿಗೆ ರಾಜಗೋಪಾಲ್



ರಾಜಗೋಪಾಲ್ ತಮ್ಮ ಸಹೋದರರರೊಂದಿಗೆ
(ಶಾರದಾ ಪ್ರಸಾದ್, ನಾರಾಯಣ್, ಮೋಹನ್ ರಾಮ್, ರಾಜಗೋಪಾಲ್, ಮುಕುಂದ)



ಸಾಗರ ತೀರದಲ್ಲಿ ರಾಜಗೋಪಾಲ್



ರಾಜಗೋಪಾಲ್




'ನಾಡಪದಗಳು' ಧ್ವನಿಮುದ್ರಿಕೆ ಸಮಾರಂಭದಲ್ಲಿ ರಾಜಗೋಪಾಲ್ ದಂಪತಿ



ರಾಜ್ಯೋತ್ಸವ ಪ್ರಶಸ್ತಿ ಸ್ವೀಕಾರ



ಶಿವರಾಮ ಕಾರಂತರು ಮತ್ತು ನಿಟ್ಟೂರು ಶ್ರೀನಿವಾಸರಾಯರೊಂದಿಗೆ ರಾಜಗೋಪಾಲ್



ಕಾರ್ಯಕ್ರಮವೊಂದರಲ್ಲಿ
ರಾಜಗೋಪಾಲ್ ಮತ್ತು ವಿಮಲಾ ರಾಜಗೋಪಾಲ್



ರಾಜಗೋಪಾಲ್ ವಿಮಲಾ ಅವರ ಮದುವೆಯ ಸಂದರ್ಭದಲ್ಲಿ

# Remembering Appa

**–Ram Rajagopal**

A few days after Appa passed, I was driving home to Media, Pennsylvania, our hometown, to the house that Amma and Appa bought in 1973, where all of us grew up. I turned off the highway and onto the local roads, driving past some local buildings. These were the buildings we always passed on the way home, each building with a story, and each story including Appa. There was the building at which Amma worked for a while, called Cheslea Park, which Appa always thought should have been called Chelsea Park; there was the Medical Building to which Appa would take us for doctor's appointments as kids; there was a bank that used to be a Burger King where we would go and order Whoppers while Appa asked for a 'Veggie Whopper.' It was a standard, typical drive home. But all at once, something hit me. It was the realization that I was driving home to visit Appa and Amma, but Appa was not there, and would never be there again.

This feeling, this void, wasn't limited to our house. It felt like everything was different. The town itself was different. It was as if they'd removed Main Street and called it something else, or just removed the entire road altogether. It was like looking up at a moon I'd seen just minutes ago only to find it suddenly gone and asking myself absently where it had gone. The town felt like it was in another dimension, like it was a copy of my hometown, with the same buildings, but missing its essence. It wasn't Media anymore. It was just a different place. The difference was visceral.

That experience of absence reminded me of a poem I'd shared with Appa in another context. I'm not the one to quote poetry offhand, so the fact that it came to mind was notable for me. The poem is by Maya Angelou, called 'When Great Trees Fall'.

'When great trees fall, rocks on distant hills shudder. Lions hunker down in tall grasses, and even elephants lumber after safety. When great trees fall in forests, small things recoil into silence, their senses eroded beyond fear.

When great souls die, the air around us becomes light, rare, sterile. We breathe, briefly. Our eyes, briefly, see with a hurtful clarity. Our memory, suddenly sharpened, examines, gnaws on kind words unsaid, promised walks never taken.

Great souls die and our reality, bound to them, takes leave of us. Our souls, dependent upon their nurture, now shrink, wizened. Our minds, formed and informed by their radiance, fall away. We are not so much maddened as reduced to the unutterable ignorance of dark, cold caves.

And when great souls die, after a period, peace blooms, slowly and always irregularly. Spaces fill with a kind of soothing electric vibration. Our senses, restored, never to be the same, whisper to us, 'They existed. They existed. We can be. Be and be better. For they existed.'



To me, this is how I felt about Appa. The day of his memorial, thirteen days after his passing, was about being better. We gathered to move from experiencing the void of Appa not being there to feeling that he was with us, in a different way.

After remembering the poem, my thoughts quickly turned to how Appa would have evaluated the poem. He would have thought about it for some time and I would have wondered, based on his expression, whether he thought it was good or not. I think he would have been impressed with some parts, but he was a bit of a tough sell. I'm pretty sure my enthusiasm would have exceeded his. When it comes to literature, he was no push-over. He would have thought through it seriously, evaluating each aspect of it, before saying something somewhat non-committal and perhaps asking for some background about the life of the poet.

The next thing I imagined was feeling a twinge of embarrassment, knowing that Appa would not have liked being referred to as a 'great soul.' It would have offended his humble nature and he would have thought it was over-sentimental and melodramatic (Please accept my apologies, Appa!).

The final reaction I imagined was that the phrase 'great soul' would have inevitably led him to tell me a story about Gandhi. He would have probably started by saying, 'Mahatma means great soul' and I would have said, 'yeah, I know...' and he would have probably told me a story about Gandhi that was of substance, of interest and of educational value. And that was really the crux of what Appa was all about.

•

There are a couple of stories about the emphasis Appa placed on education that I don't think others outside of our immediate family have heard.

The first story is from when we were kids. For anyone under 20 who's reading this, when we were growing up in the late 70s / early 80s, each house used to have a single phone. Someone would call, someone at the house would rush to answer and speak to whomever it was who was calling, and then go get the person the caller wanted to talk to. As soon as the phone would ring, and each of us would jump up to answer the phone, as if each call was of major importance.

One September, the phone was ringing constantly, and it was just terrible. Every few minutes starting around 7 p.m, it would ring. It turned out that at the beginning of that school year, a telephone number for a 'Homework Hotline' had been distributed to students in disadvantaged schools nearby and unfortunately, it was very similar to our number. Each night, we received tons of these calls.

I'm not sure what grade I was in. Maybe fifth or sixth grade, but I was definitely not very mature. I was eager to have some fun at their expense. Plus, I felt a little bit of contempt towards them because I didn't have a number I could call when I didn't feel like doing my homework, so why should they? Plus, they sounded unmotivated and seemed to just want someone to give them easy answers. So, every time someone called, I would say a few funny things and hang up. One time, Appa heard the phone ring several times, overheard me being a bit uncharitable to the caller, took the phone away from me and started speaking to the caller.

It's important to think about the time this call had come in. It was probably about 9 o'clock at night. Appa had left home at 7 a.m. to head into downtown Philadelphia where he'd worked all day as a Civil Engineer at United Engineers. After work, keeping up with his days as a professor, he would go to Villanova University one or two days per week to teach a graduate engineering course



in Fluid Dynamics. He didn't get home until about 9 o'clock that night when he heard me being a bit jerky to these kids. He asked, 'Who keeps calling and why are you talking to them this way?' I explained, 'Pa, its these kids... they keep calling our number thinking it's something called the 'Homework Hotline'...'

He'd heard enough, and I got a lecture. The first thing he did was express how bad he felt for the kids, knowing that they didn't have anyone at home to help them with their homework. Next, much to my chagrin, he started helping them with their homework. I would say, 'Come on, Pa. Really??' Then Ma started helping; it turned into a regular thing. I was thinking, 'Hey! WE'RE not the Homework Hotline. We're the wrong number! Tell them the right number and let's move on.' That lasted for a little while.

The second thing I remember is a story about Appa's values. It happened before I could remember, so perhaps it's a bit of an apocryphal tale. In the early 70s, mail was a big deal. Everything important was mailed to you and you didn't get much mail back then. One day, Amma called Appa at his office and was ecstatic, but kind of worried. She said, 'Come home right away. It's very important.' He said, 'Is it bad news? Is it good news?' Amma said, 'Just come home.' He spoke to his boss, took a half day off, and came home.

Amma showed him an envelope. He looked at it in Amma's hand and read it slowly – it was from Publisher's Clearing house and said: 'H. Y. RAJAGOPAL, YOU MIGHT HAVE ALREADY WON 1 MILLION DOLLARS!!' They were overjoyed. They both wondered what good fortune had befallen them that they would be blessed with a fortune so early in life. Then the planning began. 'What do we do with the million dollars? You know, it's ours to spend however we want! What should we do?'.

Little did they know that nearly everyone got the same letter.

Its purpose was to get people to submit their names for entry into a nearly-impossible-to-win-lottery and their entry would result in a highly probable lifetime of junk mail. But they didn't know that. They thought they'd already won the money.

The plan they hatched was the following: They would claim the money, and then go to India and start a school. That's it. That's what they thought of when they truly believed that they had just won a million dollars (an equivalent of $5M today). They didn't think of buying a fancy car or a large house. They thought about going to India to start a school. That's what you do with a million dollars. That was typical of Appa. That was the first thing he thought of.

*

I would be willing to concede to an imagined Appa that attributing the phrase 'Great Soul' to him would be a bit grandiose but would still have insisted that the imagery in the poem was appropriate. See, Appa was the great tree under which we all lived. We all enjoyed the things that he brought into our world without fully being aware of where those things came from. Like forest creatures living under a tree, we only became aware of the canopy above when it was gone. We lived in blissful ignorance. The tree was our world. We thought it was always going to be there and only realized how big it was after it fell.

The thing is, Appa was just so good at so many things. His skill as a singer was incredible. I don't know if many people really heard Appa sing, because he didn't perform outside of select occasions – family gatherings, prayers and invocations, and singing with a group. When I asked to record him singing solo, he always declined, saying his voice wasn't right that day, or he had a sore throat, or something. But growing up, there were very few days that went by without hearing his voice wafting through the house.



It was almost an impossibility that if Appa was at home, there wouldn't be singing. People would come over and they would ask, 'What song is that? What are you listening to?' and I'd just say, 'Pa's in the shower, singing.' It just seemed so routine, so typical.

There are so many other things Appa excelled in. He was an incredible cook and always made sure that whatever he was cooking met his exacting expectations. He founded cultural organizations and managed them with great skill. His literary talents were prodigious. But he kept literature as his avocation after being counselled by his elder brothers, both journalists, that the life of a professional writer would be a difficult one. So, he took up engineering, came to the US to join academia, but then shifted his focus to work as a professional engineer.

If I tried to check these boxes myself, I wouldn't match up very well. I tried Engineering in college and thought, 'no way.' Appa had made it look so easy. I quickly learned that what Appa accomplished in 1 hour probably would have taken me a semester to understand. I still don't have any idea how he did all the things he did so well. It would take a lifetime to understand the range and depth of his talents and another lifetime to understand how he used those gifts to make our lives better.

He loved us, and he loved his friends. I once said to a friend of mine that if I ever made the types of friends Appa had made, I would consider myself a success.' Appa's friendships were strong, deep and lifelong.

Appa was passionate, dignified, steady, distinguished and conscientious. He was committed to fair play. He never complained. And he never felt sorry for himself. Even the way he approached his medical care was a remarkable lesson in dignity for all of us.

He upheld a standard of the highest ideals. Until the end, I would always seek Appa's council in situations I faced. After some

complaint session or another, I would usually get an email back from him. Truth be told, I would roll my eyes as soon as the email appeared in my inbox, before I'd even read it, because I pretty much knew what he was going to say. The essence of what he would say would be the following: He would tell me to take the high road. He would tell me not to judge others too harshly. And he would tell me to never, ever give up.



# My Father – H. Y. Rajagopal

**–Madhavi Rizzio**

What can I tell you about my dad? What can I say that will distill the essence of what he meant to me? I can tell you that my dad is my hero. He was a true gentleman. Most important, he was an honorable man. I miss him constantly. His songs are in my heart. I can still hear him singing Sanskrit slokas, especially when I need comfort. For at least a week after he died, I could hear him singing those slokas.

My son Nicholas saw him as a role model, as someone who always had the highest expectations and followed through with action. He was a loving grandpa, and he showed Nicky by example the traits of being honest and forthright. He worked hard and pushed me to do my best in school and at work. Nicky saw this in action when his Tata was able to complete two books while he was ill. The dedication, tenacity, and strength it took to accomplish this was amazing, and made an indelible impression on my son. My

dad was an engineer and had an entire other vocation as an author of Kannada literature.

I remember my father's humor. He was always partial to puns. He and his brother, H. Y. Mohan Ram, loved telling jokes. If my dad made me laugh at one of his jokes instead of groaning, he was happy for a week! My cousins Susmitha and Rahul used to tease their father Mohan for having the HY poor joke gene! When they were young, Mohan and my dad would crash weddings and collect coconuts. Mohan was the ring leader!

Mohan, a well-known botanist, and my father were very close. They collaborated on a book about their mother Saraswathi. Mohan recently passed away a few months after my father. I like to think that they are together again.

I could always count on my dad to find answers to my questions, and this was pre-Google! I remember having a disagreement with a friend about Hamlet. We could not find the answer, so I called my dad. He called his friend, Professor Sreenivas, who taught English Lit at LaSalle University!

My dad also asked me to help him with research. I have researched source materials for some of the stories he has written in Kannada. He wrote a story about the Pied Piper of Hamelin, and I researched the origin of the story for him. I was so happy to help him. I used to talk to him about so many topics about art, music, literature and philosophy. He nurtured my intellectual curiosity and love of literature.

When I was small, when we lived in State College, we would go on walks together. He would tell me stories about Indian mythology. My dad took me to story hour at the library. Even after I grew up, we would go on walks together. We would walk in Rose Tree Park while my son Nicky would ride his bike. Nicky got that bike from his Tata, and Nicky loved biking around the park with us.



I miss our conversations. I miss the way he would listen quietly with a serious look on his face, and then he would tell me his opinion. If someone asked him for advice, he would consider the situation very carefully before answering. Many people found his advice reassuring and helpful.

My dad was also a great cook. His rasam was heavenly. Nicky loved Tata's idlis and dosa. In fact, when Nicky had an international night at his school, he asked his Tata to make idlis for his classmates. Nicky was so proud to help his Tata make those idlis.

When I was still in high school, I remember visiting his office in Philadelphia. When I worked in Philadelphia, we would often meet for lunch. I loved those lunches with my dad. When I started working in Princeton, he called me to say he missed those lunches.

One of the most important things I absorbed from my dad was his deep commitment to education. Our family is filled with educators. My father taught for many years at Villanova University while he worked full time for Raytheon. That dedication and work ethic made a deep impression on me.

My grandmother Saraswathi was a leading advocate for education for young children. The book about his mother, 'Halavu Makkala Taayi,' detailed the work she did to educate young children. To this day, the organization she founded, 'Makkala Koota,' still works to help the children of Karnataka. As a teacher myself, I feel that in some small way I am also continuing my grandmother's legacy.

My dad left a legacy to his children. He was a role model, and he showed us how to live honorably by his example. I was lucky to have him as my father.

Thank you for being my Appa. I miss you every day.

■

# Departing Thoughts of H. Y. Rajagopal on a Highly Sensitive Subject

**–Chetana R. Narasimha Jois**

Prelude: On the evening of March 12, 2018, it was close to one month after the tragedy which took place exactly one year ago; February 14, 2018, at Marjory Stoneman Douglass High School in Parkland, Florida, an expelled student opened fire on the campus, killing seventeen of his former classmates, injuring others, and terrorizing all. On this March evening in Media, Pennsylvania, I had gone to check on Appa, and he asked me if I'd like to take down something he wanted to dictate. I had been sitting nearby, feeling teary, and with great purpose I hurried downstairs and retrieved the laptop computer, telling Amma who was concocting a chef's masterpiece hulee or saaru as usual, what Appa had asked of me.

I was amazed that despite his physical pain, Appa's mind was so clear as to come out with this essay, which he had been brewing



and organizing in his thoughts. I was grateful later that night as Appa and Amma listened to my ideas about his draft, as he took a couple of my recommendations that would show a wide cross section of readers how the concepts in the text tied together amazingly with the very same issues in current day. This moment stands out as one of the most rewarding, emotional, and profound experiences of my adult life in relationship to my father, and I will cherish it always.

## Gun Control – A Few Words of Wisdom from the Ramayana, the great Indian epic.

As each massacre, claiming dozens of lives, young and old, shocks and outrages the nation, voices are raised for better gun control, only to be stifled in the houses of power. The pro-gun lobbyists insist that it's not the guns that kill, but it is the people that kill. True, but they don't seem to realize that there is a strange chemistry between the gun and the gun owner that finally results in a metamorphosis when the gun possesses the man. I am reminded of an episode from the Ramayana, the great Indian epic.

King Dasharatha proclaims his eldest son Rama to be the future king and expresses his wishes to anoint him officially to that position. The citizens, now his subjects, are jubilant at his decision because they loved the Prince and thought no one was better suited to that important role. No one makes a better king. They set to make every preparation for the great event, beautifying the city in every corner. Everything went off well until the day of the event itself when Kaikeyi, the youngest wife of Dasharatha, who had initially supported the king's decision, now turned against it completely. She demanded that her son Bharata be proclaimed the future king and Rama be exiled to the forest for fourteen years. The king had a crisis in the past when Kaikeyi had saved his life.

He, in gratitude, had granted two boons that she could use anytime. Now Kaikeyi, ill-advised by her wicked old maid, Manthara, decided to invoke the offer. Completely taken by surprise and grief, the king had no choice but to let Rama follow Kaikeyi's wishes.

The ever-truthful Rama agreed unhesitatingly, because he didn't want a blot on the reputation of the family that they would not honor their own word. He started to prepare to go, and his young wife Sita, who followed him like a shadow, insisted on accompanying him, as did his brother Lakshmana.

Leaving behind a shocked and grieving citizenry, Rama, Sita, and Lakshmana went deep into the forest to be as far away from Ayodhya as possible. Rama had declared his intention to live among the hermits and sages and protect them from demons who thwarted them in their spiritual pursuits. Seeing that Rama had equipped himself with a great deal of weaponry, Sita spoke to him expressing her concern.

'Rama, I have heard that there are three things that can be achieved only through the strictest adherence to Dharma, the Law of Life. And they are: truthfulness, faithfulness to one's spouse, and complete freedom from violence. I know you are totally truthful as you have demonstrated by keeping your father's words. And in my heart of hearts, I know you wouldn't even dream of another woman. However, I am not so sure about the third—looking at all the weapons you are carrying.'

She continued, 'Let me tell you a story: A long time ago, a sage was engaged in a deep tapas (meditation). This threatened Indra, the king of gods, who feared that this sage might attain and exercise extraordinary powers in competition with gods; and he wanted to prevent this from happening at any cost. He came to the sage in the guise of a king's messenger and said to him, 'I am going on an important mission and am leaving this weapon with



you for safekeeping while I'm gone. Please take care of it until I come back for it. Be sure you don't lose it for it is a precious one.' The sage thought nothing of it and acceded to his request and kept it next to himself. It was a shiny, powerful, sword the like of which the sage hadn't seen before. He looked at it, touched it all over, and touched it again and again, enamored of its beauty and the power it represented. From then on, his tapas was not as intense as before. Now the sage took breaks and went out with the sword, using it occasionally to kill small animals for sport until finally he was so consumed by it, he became extremely violent and started killing people just for the pleasure of it and the feeling of dominance.' Sita said, 'Rama, I don't want you to fall prey to this kind of a lust for weapons. I know you are a person fully in control of your senses, but I wanted to remind you of the danger all the same.'

One can see the relevance of Sita's words spoken hundreds of centuries ago, to the present crisis of gun violence in our country. Closeness to weapons leads us to the temptation to using them, often too indiscriminately, to cruelty and passion, unless one is fully in control of oneself. We show enormous concern about weapons of mass destruction falling into the wrong hands but show very little concern at smaller weapons that are powerful enough to inflict considerable pain and misery at a local level. In a civilized society a school should be the safest place for a child to be, next only to the home but we are falling short of it. The way to make our society safer is not to put more guns into it. Neither shiny swords, AK-47s and AR-16s, nor arming the teachers is going to make the society safer. Instead, it is our faith in the laws we live by. Our leaders must steward the trust the citizenry has in them through principles of truthfulness faithfulness and pursuit of happiness and peace. Unless we start this process soon, the future of our children is gravely at risk.

# My Brother-in-law H. Y. Rajagopal

–Robert Culleton

I knew Raj as a celebrated author with awards for his Kannada publications, as a great organizer of the Indian diaspora in the eastern coast of the United States, and as a professor of Civil Engineering at a major university; but although he was all these things, I knew him best as my dear brother-in-law.

As a young man, in my early thirties, I had the good fortune to meet and fall in love with his wife's youngest sister, then known as L. G. Vasanthi. To my further good fortune, she fell in love with me, and we married in 1983, and she became Vasanthi G. Culleton. And, so I came to know Raj. The person I met was a man of great warmth, integrity, and devotion both to his family and his Indian culture. He received me, a Christian, into his family without hesitation. At times of prayer, he would always make time for me to say a Christian prayer, also.

